# ಕರ್ನಾಟಕದ ಔಷಧೀಯ ಸಸ್ಯಗಳು

ಡಾ|| ಮಾಗಡಿ ಆರ್. ಗುರುದೇವ



ವಿಜ್ಞಾನ ದೀಪಮಾಲೆ

# ಕರ್ನಾಟಕದ
# ಔಷಧೀಯ ಸಸ್ಯಗಳು

ಡಾ॥ ಮಾಗಡಿ ಆರ್. ಗುರುದೇವ

ಎಂ ಎಸ್ ಸಿ , ಪಿಹೆಚ್ ಡಿ

ಪ್ರಕಾಶಕರು

ದಿವ್ಯಚಂದ್ರ ಪ್ರಕಾಶನ

6/7, 'ಕಾಳಿಕಾಸೌದ' ಪೂರ್ಣಯ್ಯ ಛತ್ರದ ರಸ್ತೆ,
ಬಳೇಪೇಟೆ ಕ್ರಾಸ್, ಬೆಂಗಳೂರು - 560 053
✆ : 3404627

KARNATAKADA AUSHADIYA SASYAGALU Written by Dr Magadi R Gurudeva, Published by Smt B M Komala M/s Divyachandra Prakashana, 6/7, Kalika Soudha, Poornaiah Chatra Road, Balepet Cross, Bangalore - 560 053

Pages XXXIV + 472

**ಪ್ರಥಮ ಮುದ್ರಣ : 1998**

**ದ್ವಿತೀಯ ಮುದ್ರಣ : 2001**



ಮುಖಚಿತ್ರ ಕರಡಿ ಕಣ್ಣಿನ ಗಿಡದ ಹೂ (ಅಗ್ನಿಶಿಖೇ)

**ಬೆಲೆ : ರೂ. 150-00**
**(ನೂರ ಐವತ್ತು ರೂಪಾಯಿಗಳು ಮಾತ್ರ)**

ಮುದ್ರಕರು
**ಶ್ರೀ ಜಗನ್ನಾಥ ಆಫ್‌ಸೆಟ್ ಪ್ರಿಂಟರ್ಸ್**
ಬೆಂಗಳೂರು.

# ಮುನ್ನುಡಿ

ಮಾನವ ಮತ್ತು ಪಶುಗಳ ರೋಗಗಳನ್ನು ಗುಣಪಡಿಸುವ ಕಾರ್ಯದಲ್ಲಿ ಉಪಯುಕ್ತವೆನಿಸಬಲ್ಲ ಉತ್ಪನ್ನಗಳನ್ನು ನೀಡುವ ಮರ, ಗಿಡ, ಬಳ್ಳಿ, ಮೂಲಿಕೆ ಮುಂತಾದ ಸಸ್ಯಗಳನ್ನು ಔಷಧಿಯ ಸಸ್ಯಗಳೆಂದು ಕರೆಯುತ್ತಾರೆ. ಔಷಧಿಯ ಸಸ್ಯಗಳ ಪರಿಚಯ ಮಾನವನ ಚರಿತ್ರೆಯಷ್ಟೇ ಪುರಾತನವಾದದ್ದು. ಪ್ರಾಚೀನ ಕಾಲದಲ್ಲಿ ಮಾನವ ತನ್ನನ್ನು ಕಾಡುತ್ತಿದ್ದ ರೋಗಗಳ ನಿವಾರಣೆಗೆ ತನ್ನ ಪರಿಸರದಲ್ಲಿ ಸುಲಭವಾಗಿ ದೊರೆಯುತ್ತಿದ್ದ ಸಸ್ಯಗಳ ಮೇಲೆ ಅವಲಂಬಿತನಾಗಿದ್ದನು. ಆದರೆ, ಅಂದು ಬಳಕೆಯಲ್ಲಿದ್ದ ಅನೇಕ ಔಷಧಿಯ ಸಸ್ಯಗಳ ಬಗೆಗಿನ ದಾಖಲೆಗಳು ಇಂದು ದುರ್ಲಭವಾಗಿವೆ. ನಮಗೆ ದೊರೆತಿರುವ ಪುರಾತನ ಲಿಖಿತ ದಾಖಲೆಯೆಂದರೆ ಕ್ರಿ.ಪೂ. 4500 ರಿಂದ ಕ್ರಿ.ಪೂ. 1600ರ ಸುಮಾರಿನಲ್ಲಿ ರಚಿತವಾದ ಋಗ್ವೇದ. ಅದರಲ್ಲಿ ಕೆಲವು ಔಷಧಿಯ ಸಸ್ಯಗಳನ್ನು ಮತ್ತು 'ಸೋಮ' ಎಂಬ ಮೂಲಿಕೆಯಿಂದಾಗುವ ಪರಿಣಾಮವನ್ನು ಪರಿಚಯಿಸಲಾಗಿದೆ. ನಂತರದಲ್ಲಿ ರಚಿತವಾದ ಅಥರ್ವಣ ವೇದದಲ್ಲಿ ಔಷಧಿಯ ಸಸ್ಯಗಳ ಬಗ್ಗೆ ಮತ್ತಷ್ಟು ವಿವರಣೆ ದೊರೆಯುತ್ತದೆ. ಕ್ರಿ.ಪೂ. 2500 ರಿಂದ ಕ್ರಿ.ಪೂ. 600ರಲ್ಲಿ ಅಥರ್ವಣವೇದದ ಉಪಾಂಗವಾಗಿ ಇಲ್ಲವೆ ಋಗ್ವೇದದ ಉಪವೇದವಾಗಿ ರಚಿತವಾದ ಆಯುರ್ವೇದದಲ್ಲಿ ಸಸ್ಯಗಳ ಔಷಧಿಯ ಗುಣ ಮತ್ತು ಉಪಯೋಗಗಳ ಬಗ್ಗೆ ವಿಶದವಾಗಿ ವಿವರಿಸಲಾಗಿದೆ. ಕ್ರಿ.ಪೂ. 300-200ರ ಸುಮಾರಿನಲ್ಲಿ ರಚಿತವಾದ ಚರಕ ಸಂಹಿತೆಯಲ್ಲಿ 700 ಔಷಧಿಯ ದ್ರವ್ಯಗಳನ್ನು ಪರಿಚಯಿಸಲಾಗಿದೆ.

ಹೊಸ ಹೊಸ ವೈದ್ಯ ಪದ್ಧತಿಗಳ ಪರಿಚಯದಿಂದಾಗಿ, ಜನಸಾಮಾನ್ಯರ ಅನುಭವದ ಮೂಸೆಯಿಂದ ಬೆಳಕು ಕಂಡ ಮತ್ತು ವಿಜ್ಞಾನದ ಅವಿಷ್ಕಾರದಿಂದಾಗಿ ಹೊಸ ಹಲವು ಔಷಧಿಯ ಸಸ್ಯಗಳು ಪರಿಚಯವಾದಂತೆ ಅವುಗಳ ಸಂಖ್ಯೆಯಲ್ಲಾಗಿರುವ ಹೆಚ್ಚಳವನ್ನು ಇಂದು ಗಮನಿಸಬಹುದು. ಭಾರತದಲ್ಲಿರುವ 16,000 ಸಸ್ಯ ಪ್ರಭೇದಗಳಲ್ಲಿ ಸುಮಾರು 6,000 ಸಸ್ಯಗಳಿಗೆ ಔಷಧಿಯ ಗುಣವಿರುವುದಾಗಿ ತಿಳಿದು ಬರುತ್ತದೆ. ವೈವಿಧ್ಯಮಯ ಹವಾಗುಣ ಹೊಂದಿರುವ ಕರ್ನಾಟಕದಲ್ಲಿ ಸುಮಾರು 3,400 ವಿವಿಧ ಸಸ್ಯ ಪ್ರಭೇದಗಳಿದ್ದು ಅವುಗಳಲ್ಲಿ 1,200 ರಿಂದ 1,300 ಸಸ್ಯಗಳನ್ನು ಔಷಧಿಯ ಸಸ್ಯಗಳೆಂಬುದಾಗಿ ಗುರುತಿಸಲಾಗಿದೆ.

ಕಾಯಿಲೆಗಳಿಗೆ ಔಷಧಿಯ ಸಸ್ಯಗಳನ್ನಾಧರಿಸಿದ ಚಿಕಿತ್ಸಾ ಕ್ರಮಗಳನ್ನು ಪರಿಚಯಿಸುವ ಗ್ರಂಥಗಳು ಈಗಾಗಲೇ ಪ್ರಕಟವಾಗಿವೆ ಆದರೆ, ಚಿಕಿತ್ಸಾ ಕ್ರಮಗಳಿಗೆ ಮೂಲಾಧಾರವಾದ ಔಷಧಿಯ ಸಸ್ಯಗಳನ್ನು ಪರಿಚಯಿಸುವ ಗ್ರಂಥಗಳು ಮಾತ್ರ ಬೆರಳೆಣಿಕೆಯಷ್ಟು ಇದನ್ನು ಮನಗಂಡು ಔಷಧಿಯ ಸಸ್ಯಗಳ ಪರಿಚಯವನ್ನು ಒಂದೆಡೆ ಸಂಗ್ರಹ ರೂಪದಲ್ಲಿ ಕೊಡುವ ಉದ್ದೇಶದಿಂದ "ಕರ್ನಾಟಕದ ಔಷಧಿಯ ಸಸ್ಯಗಳು" ಎಂಬ ಮಾಲಿಕೆಯನ್ನು ಪ್ರಾರಂಭಿಸಲಾಗಿದೆ ಈ ಯೋಜನೆಯಂತೆ ಪ್ರಸ್ತುತ ಮಾಲಿಕೆಯ ಮೊದಲ ಕೃತಿಯಲ್ಲಿ ಒಂದು ನೂರು ಔಷಧಿಯ ಸಸ್ಯಗಳನ್ನು ಪರಿಚಯಿಸಲಾಗಿದೆ.

ಔಷಧಿಯ ಸಸ್ಯಗಳಿಗೆ ಪ್ರಚಲಿತವಾಗಿರುವ ಕನ್ನಡದ ಹೆಸರನ್ನು ನೀಡುವಲ್ಲಿ ಆದ್ಯತೆ ನೀಡಲಾಗಿದೆ ಇದರ ಜೊತೆಗೆ ಕರ್ನಾಟಕದ ಇತರೆ ಪ್ರಾಂತ್ಯಗಳಲ್ಲಿ ಬಳಕೆಯಲ್ಲಿರುವ ಕನ್ನಡದ ಹೆಸರುಗಳನ್ನೂ ಸಹ ಕೊಡಲಾಗಿದೆ. ಕನ್ನಡದಲ್ಲಿ ಒಂದೇ ಸಸ್ಯಕ್ಕೆ ಹಲವು ಹೆಸರುಗಳಿರುವುದು ಮತ್ತು ಕೆಲವು ಸಸ್ಯಗಳಿಗೆ ಒಂದೇ ಹೆಸರಿರುವುದರಿಂದ ಸಸ್ಯದ ನಿಖರತೆಯ ಬಗ್ಗೆ ಅನುಮಾನವುಂಟಾಗುವುದು ಸಹಜ ಇದನ್ನು ಪರಿಹರಿಸಲು ಇತ್ತೀಚಿನ ವೈಜ್ಞಾನಿಕ ಹೆಸರು ಮತ್ತು ಅದು ಸೇರಿರುವ ಸಸ್ಯಕುಟುಂಬದ ಹೆಸರನ್ನೂ ಸಹ ಕೊಡಲಾಗಿದೆ. ಸಸ್ಯದ ಹಳೆಯ ವೈಜ್ಞಾನಿಕ ಹೆಸರಿನಿಂದ ಪರಿಚಿತರಾದವರಿಗೆಂದು ಸಮ (=) ಚಿಹ್ನೆ ಬಳಸಿ ಹಳೆಯ ವೈಜ್ಞಾನಿಕ ಹೆಸರನ್ನು ಅವಶ್ಯವಿರುವೆಡೆ ಕೊಡಲಾಗಿದೆ. ಇದರ ಜೊತೆಗೆ ಬೇರೆ ಬೇರೆ ಭಾಷೆಯ ಗ್ರಂಥಗಳಿಂದ, ಪ್ರದೇಶಗಳಿಂದ ಸಸ್ಯಗಳ ಉಪಯೋಗದ ಬಗ್ಗೆ ಸಮಗ್ರ ಮಾಹಿತಿ ಪಡೆಯಲೆಂದು ಸಂಸ್ಕೃತ, ಹಿಂದಿ, ತಮಿಳು, ತೆಲುಗು ಮತ್ತು ಇಂಗ್ಲೀಷ್ ಭಾಷೆಯ ಹೆಸರುಗಳನ್ನು ಕೊಡಲಾಗಿದೆ

ಔಷಧಿಯ ಸಸ್ಯಗಳು ಬೆಳೆಯುವ/ದೊರೆಯುವ ಸ್ಥಳ ಮತ್ತು ಅವುಗಳ ಬಗೆಗಿನ ಕಿರುಪರಿಚಯವಿದೆ ಇದರ ಆಧಾರದಿಂದ ಮತ್ತು ಛಾಯಾ ಚಿತ್ರದ ನೆರವಿನಿಂದ ಸಸ್ಯಗಳನ್ನು ಸುಲಭವಾಗಿ ಗುರುತಿಸಲು ಸಹಾಯವಾಗುತ್ತದೆ ಸಸ್ಯಗಳನ್ನು ಪರಿಚಯಿಸಲು ಶಾಸ್ತ್ರೀಯ (ವೈಜ್ಞಾನಿಕ) ಪದಗಳನ್ನು ಬಳಸಿಲ್ಲವಾದರೂ ಅನಿವಾರ್ಯವೆನಿಸಿರುವ ಕಡೆಗಳಲ್ಲಿ ಬಳಸಲಾಗಿದೆ

ಔಷಧಿಯ ಸಸ್ಯಗಳಿಗೆ ಹಲವಾರು ಔಷಧಿಯ ಉಪಯೋಗಗಳಿದ್ದರೂ ಸಹಾ ಅವುಗಳಲ್ಲಿರುವ ಕೆಲವು ಉಪಯೋಗಗಳನ್ನು ಮಾತ್ರ ಇಲ್ಲಿ ಕೊಡಲಾಗಿದೆ.

ಹೆಚ್ಚಿನ ಮಾಹಿತಿಯನ್ನು ಆಯುರ್ವೇದ ಗ್ರಂಥಗಳಿಂದ ಪಡೆಯುವುದು ಔಷಧಿಯ ಸಸ್ಯಗಳನ್ನು ಪಶುರೋಗ ಚಿಕಿತ್ಸೆಯಲ್ಲಿ ಬಳಸಲಾಗುತ್ತಿದ್ದಲ್ಲಿ ಅಂತಹ ಸಸ್ಯಗಳ ಪಶುರೋಗ ಚಿಕಿತ್ಸಾ ಪ್ರಯೋಗಗಳನ್ನೂ ಸಹ ಕೊಡಲಾಗಿದೆ ಪ್ರತಿ ಸಸ್ಯದಡಿ ಕೊಡಲಾಗಿರುವ ಚಿಕಿತ್ಸಾಕ್ರಮಗಳೆಲ್ಲಕ್ಕೂ ಗ್ರಂಥಗಳ ಆಧಾರವಿದೆ

ಚಿಕಿತ್ಸಾ ಕ್ರಮಗಳಲ್ಲಿ, ಔಷಧಿ ತಯಾರಿಕೆಗೆ ಬಳಸುವ ವಸ್ತುಗಳನ್ನು ಅಳತೆಮಾಡಲು ವಿವಿಧ ಅಳತೆ ಪದ್ಧತಿಯನ್ನು ಅನುಸರಿಸಲಾಗಿದೆ ಇದನ್ನು ಮೂಲದಲ್ಲಿರುವಂತೆಯೇ ಕೆಲವು ಕಡೆ ಉಳಿಸಿಕೊಳ್ಳಲಾಗಿದೆ. ಅನುಬಂಧ 1ರಲ್ಲಿ ಕೊಟ್ಟಿರುವ ಕೋಷ್ಟಕದ ಸಹಾಯದಿಂದ ಸಮಾನಾಂತರ ಮೆಟ್ರಿಕ್ ಪದ್ಧತಿಯ ತೂಕಕ್ಕೆ ಪರಿವರ್ತಿಸಿಕೊಳ್ಳಬಹುದು ಚಿಕಿತ್ಸಾ ಕ್ರಮಗಳಲ್ಲಿ ಬಳಸಲಾಗಿರುವ ದಾತು, ಲವಣ ಮತ್ತು ಪ್ರಾಣಿಜನ್ಯ ವಸ್ತುಗಳ ಕಿರುಪರಿಚಯವನ್ನು ಅನುಬಂಧ - 2 ರಲ್ಲಿ ಹಾಗೂ ಪಾರಿಭಾಷಿತ ಶಬ್ದಗಳ ವಿವರಣೆಯನ್ನು ಅನುಬಂಧ - 3 ರಲ್ಲಿ ಕೊಡಲಾಗಿದೆ ಅನುಬಂಧ - 4 ರಲ್ಲಿ ಔಷಧಿಯ ಸಸ್ಯಗಳನ್ನಾಧರಿಸಿ ಸಿದ್ಧಪಡಿಸಿದ ಔಷಧಿಗಳ ಪಟ್ಟಿಯನ್ನು ಆಯಾಯ ಸಸ್ಯದಡಿ ಕೊಡಲಾಗಿದೆ.

ನಮ್ಮ ನಾಡಿನಲ್ಲಿ ದೊರೆಯುವ ಅತ್ಯಮೂಲ್ಯವಾದ ಔಷಧಿಯ ಸಸ್ಯಗಳನ್ನು ಗುರುತಿಸಿ ಮತ್ತು ಅವುಗಳನ್ನು ಸಂರಕ್ಷಿಸಿ ಪರಿಣಾಮಕಾರಿಯಾದ ರೀತಿಯಲ್ಲಿ ರೋಗರುಜಿನಗಳ ಶಮನಕ್ಕೆ ಬಳಸಲು ಪ್ರೇರೇಪಿಸುವುದು ಈ ಮಾಲಿಕೆಯ ಮುಖ್ಯ ಗುರಿಯಾಗಿದೆ

ಈ ಮಾಲಿಕೆಯ ಕೃತಿಗಳನ್ನು ಆಧಾರವಾಗಿಟ್ಟುಕೊಂಡು ಔಷಧಿಯನ್ನು ತಯಾರಿಸಿ ತಾವೇ ಸ್ವತಃ ಚಿಕಿತ್ಸೆ ಮಾಡಿಕೊಳ್ಳಬಾರದು ಮತ್ತು ಇತರರಿಗೆ ಚಿಕಿತ್ಸೆ ನೀಡಬಾರದು ಏಕೆಂದರೆ, 1) ಪರಿಚಯಿಸಿರುವ ಔಷಧಿಯ ಸಸ್ಯಗಳಲ್ಲಿ ಕೆಲವು ವಿಷವಸ್ತುಗಳನ್ನು ಹೊಂದಿರುತ್ತವೆ. ಅಂತಹ ಸಸ್ಯಗಳನ್ನು ಉಪಯೋಗಿಸುವುದಕ್ಕೆ ಮುನ್ನ ಆಯುರ್ವೇದದ ಪದ್ಧತಿಯಂತೆ ಶುಚಿಗೊಳಿಸಿ ಮತ್ತು ಶುದ್ಧೀಕರಿಸಬೇಕಾಗುತ್ತದೆ ಶುದ್ಧೀಕರಿಸದೆ ಬಳಸಿದ್ದಲ್ಲಿ ಗೊತ್ತಾದ ಔಷಧಿಯ ಪರಿಣಾಮವುಂಟಾಗದಿರಬಹುದು ಇಲ್ಲವೆ ಆರೋಗ್ಯಕ್ಕೆ ಧಕ್ಕೆಯುಂಟಾಗಬಹುದು

2) ಚಿಕಿತ್ಸಾ ಕ್ರಮಗಳಲ್ಲಿ ಕೆಲವಕ್ಕೆ ಔಷಧಿಯನ್ನು ತೆಗೆದುಕೊಳ್ಳುವ ಪ್ರಮಾಣವನ್ನು ಕೊಡಲಾಗಿದೆ ಉಳಿದವುಗಳಿಗೆ ಯಾವ ಪ್ರಮಾಣವನ್ನೂ ನಿಗಧಿ ಪಡಿಸಿರುವುದಿಲ್ಲ ಕಾರಣ ಕಾಯಿಲೆಯನ್ನು ಪತ್ತೆ ಹಚ್ಚುವುದು, ರೋಗಿಗೆ ಮತ್ತು ರೋಗದ ತೀವ್ರತೆಗೆ ತಕ್ಕಂತೆ ಔಷಧಿಯ ಪ್ರಮಾಣವನ್ನು ನಿರ್ಧರಿಸುವುದು ವೈದ್ಯರ ಕೆಲಸ ಆದುದರಿಂದ ವೈದ್ಯರ ಸಲಹೆ ಸೂಚನೆಗಳ ಮೇರೆಗೆ ಈ ಕೃತಿಗಳಲ್ಲಿನ ಚಿಕಿತ್ಸಾಕ್ರಮಗಳನ್ನು ಅನುಸರಿಸುವುದು ತೀರಾ ಅವಶ್ಯಕ ಹಾಗೊಮ್ಮೆ ವೈದ್ಯರ ನೆರವು ದೊರೆಯದ ಸಂದರ್ಭಗಳಲ್ಲಿ ಕೆಲವು ಸಾಮಾನ್ಯ ಕಾಯಿಲೆಗಳಿಗೆ ಮಾತ್ರ ಪ್ರಥಮ ಚಿಕಿತ್ಸೆಯಾಗಿ ಕೃತಿಗಳಲ್ಲಿನ ಕೆಲವು ಚಿಕಿತ್ಸಾ ಕ್ರಮಗಳ ಉಪಯೋಗ ಪಡೆಯಬಹುದು

ಈ ಮಾಲಿಕೆಯ ಕೃತಿಗಳನ್ನು ಸಾಮಾನ್ಯ ಓದುಗನನ್ನು ಗಮನದಲ್ಲಿಟ್ಟುಕೊಡು ರಚಿಸಲಾಗಿದ್ದರೂ, ಔಷಧಿಯ ಸಸ್ಯಗಳನ್ನು ಗುರುತಿಸಲು ಬೇಕಾಗುವಂತಹ ಮಾಹಿತಿ ಮತ್ತು ಗ್ರಂಥಗಳಲ್ಲಿ ಉಲ್ಲೇಖವಾಗಿರುವ ಅವುಗಳ ಔಷಧಿಯ ಉಪಯೋಗಗಳ ಬಗ್ಗೆ ನಿಖರತೆಯಿರುವುದರಿಂದ ನಿಸ್ಸಂಶಯವಾಗಿ ಸರ್ವರೂ ಇವುಗಳ ಲಾಭ ಪಡೆಯಬಹುದು

ಪ್ರಸ್ತುತ ಮಾಲಿಕೆಯ ಮೊದಲ ಕೃತಿಯನ್ನು ರಚಿಸಲು ಹಲವು ವಿಧದಲ್ಲಿ ಸಹಕರಿಸಿ ಪ್ರೋತ್ಸಾಹಿಸಿದ ಡಾ।। ಟಿ ಆನಂದರಾವ್ ಮತ್ತು ಡಾ।। ಜೆ ಎಲ್ ಎಲ್ಲಿಸ್, ಕೆ ಎ ಎ ಎಸ್. ಸೆಂಟ್ರಲ್ ಕಾಲೇಜು, ಬೆಂಗಳೂರು, ಡಾ।। ಎಸ್ ಎಮ್ ಯೋಗಾನರಸಿಂಹನ್, ಕೇಂದ್ರೀಯ ಔಷಧಾಗಾರ, ಜಯನಗರ, ಬೆಂಗಳೂರು, ಶ್ರೀ ಆರ್ ನಿಜಗುಣಯ್ಯ, ಸಸ್ಯಶಾಸ್ತ್ರ ವಿಭಾಗ, ಬೆಂಗಳೂರು ವಿಶ್ವವಿದ್ಯಾನಿಲಯ, ಜ್ಞಾನಭಾರತಿ, ಬೆಂಗಳೂರು , ಡಾ।। ಹೆಚ್.ಬಿ ಮಂಜುನಾಥ್, ರೇಷ್ಮೆ ಕೃಷಿ ವಿಭಾಗ, ವಿ ವಿ ಪುರವಿಜ್ಞಾನ ಕಾಲೇಜು, ಬೆಂಗಳೂರು, ಶ್ರೀ ಜಿ ಎನ್ ಶ್ರೀವತ್ಸ, ತೋಟಗಾರಿಕೆ ಇಲಾಖೆ, ಲಾಲ್‌ಬಾಗ್, ಬೆಂಗಳೂರು , ಶ್ರೀ ಡಿ ಆರ್ ಚಂದ್ರಮಾಗಡಿ, ರೇಷ್ಮೆ ಇಲಾಖೆ, ಮಾಗಡಿ , ಶ್ರೀ ಲಕ್ಷ್ಮೀ ನಾರಾಯಣ, ಕೇಂದ್ರೀಯ ಔಷಧಾಗಾರ, ಜಯನಗರ, ಬೆಂಗಳೂರು ಇವರೆಲ್ಲರಿಗೂ ನನ್ನ ಅನಂತ ಕೃತಜ್ಞತೆಗಳು

ಪ್ರಸ್ತುತ ಮಾಲಿಕೆಯ ಮೊದಲ ಕೃತಿಯನ್ನು ಚೊಕ್ಕವಾಗಿ ಪ್ರಕಟಣೆ ಮಾಡಿ ಓದುಗರ ಕೈಗಿತ್ತ ಕೀರ್ತಿ ದಿವ್ಯಚಂದ್ರ ಪ್ರಕಾಶನದ ಮಾಲೀಕರಾದ ಶ್ರೀಮತಿ ಬಿ.ಎಂ. ಕೋಮಲರವರಿಗೆ ಹಾಗೂ ಇದೇ ಪ್ರಕಾಶನದ ಗೌರವ ಸಂಪಾದಕ ಶ್ರೀ ಕೆ. ರಂಗಾಚಾರ್‌ರವರಿಗೆ ಸಲ್ಲುತ್ತದೆ.

ಗ್ರಂಥದ ಬೆಳವಣಿಗೆಗೆ ಪೂರಕವಾಗುವಂತಹ ಸಲಹೆ, ಸೂಚನೆ, ಟೀಕೆ, ಟಿಪ್ಪಣಿಗಳಿಗೆ ಸರ್ವಥಾ ಸ್ವಾಗತವಿದೆ.

**ಡಾ|| ಮಾಗಡಿ ಆರ್ ಗುರುದೇವ**

**ವಿಳಾಸ**
ನಂ. 1207, 18ನೇ 'ಎ' ಮುಖ್ಯರಸ್ತೆ,
5ನೇ ಬ್ಲಾಕ್, ರಾಜಾಜಿನಗರ,
ಬೆಂಗಳೂರು - 560 010

**ಈ ಮಾಲಿಕೆಯಲ್ಲಿ ಉಪಯೋಗಿಸಿರುವ ಸಂಕ್ಷೇಪಾಕ್ಷರಗಳು**

ಇಂ. - ಇಂಗ್ಲೀಷ್
ತ. - ತಮಿಳು
ತೆ - ತೆಲುಗು
ಸಂ - ಸಂಸ್ಕೃತ
ಹಿಂ. - ಹಿಂದಿ

# ಪರಿವಿಡಿ



ಕರ್ನಾಟಕ ರಾಜ್ಯ
74°
75°
76°
77°
78°
18°
17°
16°
15°
14°
13°
12°
ಮಹಾರಾಷ್ಟ್ರ
ಬೀದರ್
ಗುಲ್ಬರ್ಗ
ಬಿಜಾಪುರ
ರಾಯಚೂರು
ಬಾಗಲಕೋಟೆ
ಬೆಳಗಾವಿ
ಗದಗ
ಕೊಪ್ಪಳ
ಆಂಧ್ರಪ್ರದೇಶ
ಗೋವ
ಧಾರವಾಡ
ಬಳ್ಳಾರಿ
ಉತ್ತರ ಕನ್ನಡ
ಹಾವೇರಿ
ದಾವಣಗೆರೆ
ಚಿತ್ರದುರ್ಗ
ಶಿವಮೊಗ್ಗ
ಉಡುಪಿ
ಚಿಕ್ಕಮಗಳೂರು
ತುಮಕೂರು
ಕೋಲಾರ
ಗ್ರಾಮಾಂತರ
ಬೆಂಗಳೂರು
ಹಾಸನ
ಬೆಂಗಳೂರುನಗರ
ದಕ್ಷಿಣ ಕನ್ನಡ
ಮಂಡ್ಯ
ಕೊಡಗು
ಮೈಸೂರು
ಕೇರಳ
ಚಾಮರಾಜನಗರ
ತಮಿಳುನಾಡು

# ಪೀಠಿಕೆ

ವನಸಿರಿಯರಸಿ ನೆಲೆಸಿಹ ನಾಡು, ವೈವಿಧ್ಯಮಯ ಸಸ್ಯ ಸಂಕುಲಗಳ ಬೀಡು ಎಂಬ ಹೆಗ್ಗಳಿಕೆಯ ನಾಡು ಕರ್ನಾಟಕ. ಕರ್ನಾಟಕದ ವೈವಿಧ್ಯಮಯ ಸಸ್ಯ ಸಂಪತ್ತಿಗೆ ಇಲ್ಲಿರುವ ಭೌಗೋಳಿಕ ಹಿನ್ನೆಲೆ ಬಹು ಮುಖ್ಯ ಕಾರಣ. ಇಂತಹ ವಿಫುಲ ಸಸ್ಯ ಸಿರಿಯ ನಾಡಿನಲ್ಲಿ ಔಷಧಿಯ ಸಸ್ಯಗಳಿಗೇನು ಕೊರತೆಯಿಲ್ಲ. ಔಷಧಿಯ ಸಸ್ಯಗಳು ಬೆಳೆಯುವ ವಾತಾವರಣದಲ್ಲೂ ವೈವಿಧ್ಯತೆ ಕಂಡು ಬರುತ್ತದೆ. ಆದುದರಿಂದ ಅವುಗಳನ್ನು ಪತ್ತೆ ಹಚ್ಚಲು ಹಾಗೂ ಅವುಗಳ ಪರಿಚಯ ಮಾಡಿಕೊಳ್ಳಲು ರಾಜ್ಯದ ಭೌಗೋಳಿಕ ಮೇಲ್ಮೈ ಲಕ್ಷಣ, ನೆಲ, ಜಲ, ಹವಾಮಾನ ಮುಂತಾದವುಗಳ ಬಗ್ಗೆ ತಿಳಿದುಕೊಳ್ಳುವುದು ಬಹಳ ಮುಖ್ಯ.

ಕರ್ನಾಟಕ ರಾಜ್ಯವು ದಕ್ಷಿಣ ಭಾರತದ ಪರ್ಯಾಯ ಪ್ರಸ್ಥಭೂಮಿಯ ಪಶ್ಚಿಮ ಭಾಗದಲ್ಲಿದೆ. ಇದು ಉತ್ತರ ಅಕ್ಷಾಂಶ 11°40' - 18°27' ವರೆಗೂ ಮತ್ತು ಪೂರ್ವ ರೇಖಾಂಶ 74°5' - 78°33'ವರೆಗೂ ಹರಡಿದೆ. ಪೂರ್ವದಲ್ಲಿ ಆಂಧ್ರಪ್ರದೇಶ, ದಕ್ಷಿಣದಲ್ಲಿ ತಮಿಳುನಾಡು - ಕೇರಳ, ಉತ್ತರದಲ್ಲಿ ಗೋವಾ-ಮಹಾರಾಷ್ಟ್ರ ರಾಜ್ಯಗಳಿಂದ ಮತ್ತು ಪಶ್ಚಿಮದಲ್ಲಿ ಅರಬ್ಬಿ ಸಮುದ್ರದಿಂದ ರಾಜ್ಯವು ಸುತ್ತುವರೆಯಲ್ಪಟ್ಟಿದೆ. ಒಟ್ಟಿನಲ್ಲಿ ರಾಜ್ಯವು ಮೂರು ಕಡೆ ಭೂಮಿ ಮತ್ತು ಒಂದು ಕಡೆ ನೀರಿನಿಂದ ಆವೃತವಾಗಿದೆ. ರಾಜ್ಯದ ಒಟ್ಟು ವಿಸ್ತೀರ್ಣ 1,92,203 ಚ.ಕಿ.ಮೀ.ಗಳು. ರಾಜ್ಯದ ಉದ್ದ ದಕ್ಷಿಣೋತ್ತರವಾಗಿ 770ಕಿ.ಮೀ. ಮತ್ತು ಅಗಲ ಪೂರ್ವ ಪಶ್ಚಿಮವಾಗಿ 400ಕಿ.ಮೀ. ಇದ್ದು ಜೊತೆಗೆ ಸುಮಾರು 320 ಕಿ.ಮೀ. ಕರಾವಳಿಯನ್ನು ಹೊಂದಿದೆ. ಆಡಳಿತಾತ್ಮಕ ದೃಷ್ಟಿಯಿಂದ ಸದ್ಯಕ್ಕೆ ರಾಜ್ಯವನ್ನು ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಬೆಳಗಾವಿ, ಬಳ್ಳಾರಿ, ದಾವಣಗೆರೆ, ಬೀದರ್, ಬಿಜಾಪುರ, ಬಾಗಲಕೋಟೆ, ಚಿಕ್ಕಮಗಳೂರು, ಚಿತ್ರದುರ್ಗ, ಕೊಡಗು, ಧಾರವಾಡ, ಗದಗ, ಹಾವೇರಿ, ಗುಲ್ಬರ್ಗ, ಹಾಸನ, ಕೋಲಾರ, ಮಂಡ್ಯ, ಮೈಸೂರು, ಚಾಮರಾಜನಗರ, ಉತ್ತರ ಕನ್ನಡ, ದಕ್ಷಿಣ ಕನ್ನಡ, ಉಡುಪಿ, ರಾಯಚೂರು, ಕೊಪ್ಪಳ, ಶಿವಮೊಗ್ಗ ಮತ್ತು ತುಮಕೂರು ಎಂಬ 27 ಜಿಲ್ಲೆಗಳಾಗಿ ವಿಂಗಡಿಸಲಾಗಿದೆ. ಬೆಂಗಳೂರು ನಗರ ರಾಜ್ಯದ ರಾಜಧಾನಿ. ಜಿಲ್ಲೆಗಳ ಮರುವಿಂಗಡನೆಯಾಗಿ ಅವುಗಳ ಸಂಖ್ಯೆ ಹೆಚ್ಚಾದರೂ ಪ್ರಾಕೃತಿಕವಾಗಿ ಅಂತಹ ಬದಲಾವಣೆಯೇನೂ ಇರುವುದಿಲ್ಲ.

**ಪ್ರಾಕೃತಿಕ ವಿಭಾಗಗಳು**

ಕರ್ನಾಟಕವು ಗಟ್ಟಿ ನೆಲವಾದ ದಕ್ಷಿಣ ಪ್ರಸ್ಥಭೂಮಿಯಲ್ಲಿದೆ ಭೂರಚನೆಯ ಆಧಾರದ ಮೇಲೆ ರಾಜ್ಯವನ್ನು ಕರಾವಳಿ, ಮಲೆನಾಡು, ಉತ್ತರ ಮೈದಾನ ಮತ್ತು ದಕ್ಷಿಣ ಮೈದಾನ ಪ್ರದೇಶವೆಂದು ಗುರುತಿಸುತ್ತಾರೆ.

**ಕರಾವಳಿ** ಈ ಪ್ರದೇಶವು ಅರಬ್ಬಿ ಸಮುದ್ರ ಮತ್ತು ಪಶ್ಚಿಮ ಘಟ್ಟಗಳ ನಡುವೆ ಇದೆ ಇದರ ಉದ್ದ 320 ಕಿ ಮೀ ಮತ್ತು ಅಗಲ 25 ರಿಂದ 65 ಕಿ.ಮೀ ಗಳು ಈ ಪ್ರದೇಶದ ಸರಾಸರಿ ಎತ್ತರವು ಸಮುದ್ರ ಮಟ್ಟದಿಂದ 70 ರಿಂದ 83 ಮೀ ಇದ್ದರೂ ಕೆಲವು ಕಡೆ 166 ಮೀ ಗಳಿಗೂ ಹೆಚ್ಚಾಗಿರುತ್ತದೆ ಈ ಪ್ರದೇಶದ ಒಟ್ಟು ವಿಸ್ತೀರ್ಣ ಸುಮಾರು 7,770 ಚ ಕಿ ಮೀ.ಗಳು ಉತ್ತರ ಕನ್ನಡ, ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳ ಕೆಲವು ಪ್ರದೇಶಗಳು ಕರಾವಳಿಗೆ ಸೇರ್ಪಡೆಯಾಗುತ್ತವೆ

**ಮಲೆನಾಡು** ಇದು ಕರಾವಳಿಯಿಂದ ಪೂರ್ವಕ್ಕಿರುವ ಪಶ್ಚಿಮ ಘಟ್ಟ ಪ್ರದೇಶನ್ನೊಳಗೊಂಡಿದೆ ಈ ಪ್ರದೇಶದಲ್ಲಿ ಬೆಟ್ಟಗುಡ್ಡಗಳು ಸಾಮಾನ್ಯವಾಗಿ ಕಂಡು ಬರುತ್ತವೆ (ಮಲನಾಡೆಂದರೆ ಬೆಟ್ಟಗಳ ಪ್ರದೇಶವೆಂಬ ಅರ್ಥವಿದೆ) ಮಲೆನಾಡಿನಲ್ಲಿರುವ ಪಶ್ಚಿಮ ಘಟ್ಟಗಳನ್ನು ಸಹ್ಯಾದ್ರಿ ಪರ್ವತ ಶ್ರೇಣಿ ಎಂದು ಕರೆಯುತ್ತಾರೆ ಇದು ಉತ್ತರ ದಕ್ಷಿಣವಾಗಿ ಹಾದು ಹೋಗಿದೆ ದಕ್ಷಿಣದತ್ತ ಸಾಗುವ ಪರ್ವತ ಶ್ರೇಣಿ ಕೊನೆಗೆ ನೀಲಗಿರಿಯಲ್ಲಿ ವಿಲೀನಗೊಳ್ಳುತ್ತದೆ ಸಹ್ಯಾದ್ರಿ ಶ್ರೇಣಿಯಲ್ಲಿ ಅನೇಕ ಉತ್ತುಂಗ ಶಿಖರಗಳಿವೆ ಅವುಗಳಲ್ಲಿ ಅತ್ಯಂತ ಎತ್ತರವಾದ ಚಂದ್ರದ್ರೋಣ ಪರ್ವತ ಅಥವಾ ಬಾಬಾಬುಡನ್ ಗಿರಿಯಲ್ಲಿರುವ ಮುಳ್ಳಯ್ಯನಗಿರಿ (1,925 4 ಮೀ.)ಮತ್ತು ಕುದುರೆ ಮುಖ (1,827 ಮೀ.) ಮುಖ್ಯವಾದವುಗಳು. ಸಹ್ಯಾದ್ರಿ ಪರ್ವತಗಳ ಪೂರ್ವ ಭಾಗವು ಪಶ್ಚಿಮ ಭಾಗಕ್ಕಿಂತ ಹೆಚ್ಚು ಕಡಿದಾಗಿದೆ ಪರ್ವತ ಶ್ರೇಣಿಯ ಎರಡೂ ಬದಿಯಲ್ಲಿ ಅಡ್ಡಲಾಗಿ ಹಬ್ಬಿದ ಬೆಟ್ಟದ ಸಾಲುಗಳಿವೆ ಪಶ್ಚಿಮದ ಕಡೆಗೆ ಹಬ್ಬಿರುವ ಬೆಟ್ಟದ ಸಾಲುಗಳು ಅಸ್ತವ್ಯಸ್ತವಾಗಿ ಹರಡಿದ್ದು ಹೆಚ್ಚು ಕಡಿದಾಗಿವೆ. ಇವುಗಳ ನಡುವೆಯಿರುವ ಕಣಿವೆ ಮಾರ್ಗಗಳು ರಾಜ್ಯದ ಪೂರ್ವ ಮತ್ತು ಪಶ್ಚಿಮ ಭಾಗಗಳ ನಡುವಣ ಸಂಪರ್ಕ ಮಾಧ್ಯಮವಾಗಿದೆ ಇಂತಹ ಕಣಿವೆಗಳಲ್ಲಿ ಕೊಲ್ಲೂರು


ಕರ್ನಾಟಕದ ಪ್ರಾಕೃತಿಕ ವಿಭಾಗಗಳು
ಉತ್ತರ ಮೈದಾನ ಪ್ರದೇಶ
ಮಲೆನಾಡು
ಕರಾವಳಿ
ದಕ್ಷಿಣ ಮೈದಾನ ಪ್ರದೇಶ

ಘಾಟ್, ಆಗುಂಬೆ ಘಾಟ್, ಚಾರ್ಮುಡಿ ಘಾಟ್ ಮುಖ್ಯವಾದವುಗಳು ಮಲೆನಾಡು ಪ್ರದೇಶವು, ಬೆಳಗಾವಿ, ಉತ್ತರ ಮತ್ತು ದಕ್ಷಿಣಕನ್ನಡ, ಉಡುಪಿ, ಧಾರವಾಡ, ಹಾವೇರಿ, ಶಿವಮೊಗ್ಗ, ಚಿಕ್ಕಮಗಳೂರು, ಹಾಸನ, ಕೊಡಗು, ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳ ಕೆಲವು ಭಾಗಗಳನ್ನೊಳಗೊಂಡಿದೆ

**ಉತ್ತರ ಮೈದಾನ ಪ್ರದೇಶ (ಉತ್ತರ ಪ್ರಸ್ಥಭೂಮಿ)** ಮಲೆನಾಡಿನ ಪೂರ್ವಕ್ಕಿರುವ ರಾಜ್ಯದ ಉತ್ತರದ ಬಯಲು ಭೂಭಾಗವೇ ಉತ್ತರ ಮೈದಾನ ಪ್ರದೇಶ ಈ ಪ್ರದೇಶವು ಸಹಜವಾಗಿ ಬಯಲು ಪ್ರದೇಶವಾಗಿದ್ದರೂ ಅಲ್ಲಲ್ಲಿ ನಗ್ನೀಕೃತ ಬೆಟ್ಟದ ಸಾಲುಗಳ ನಡುವೆ ಅಗಲವಾದ ಕಣಿವೆಗಳು ಕಂಡುಬರುತ್ತವೆ ಉತ್ತರ ಮೈದಾನ ಪ್ರದೇಶವು ಸಮುದ್ರ ಮಟ್ಟದಿಂದ ಸರಾಸರಿ 300 ರಿಂದ 450 ಮೀ ಎತ್ತರದಲ್ಲಿದೆ ಬೀದರ್ ಜಿಲ್ಲೆಯ ಕಡೆ ಈ ಎತ್ತರವು 650 ಮೀ ಗೂ ಹೆಚ್ಚಾಗಿರುತ್ತದೆ ಉತ್ತರ ಪ್ರಸ್ಥಭೂಮಿಯು ಬೆಳಗಾವಿ, ಧಾರವಾಡ, ಗದಗ, ಹಾವೇರಿ, ಶಿವಮೊಗ್ಗ ಜಿಲ್ಲೆಗಳ ಕೆಲವು ಪ್ರದೇಶಗಳನ್ನು ಮತ್ತು ಬೀದರ್, ಗುಲ್ಬರ್ಗ, ಬಿಜಾಪುರ, ರಾಯಚೂರು, ಕೊಪ್ಪಳ, ಬಳ್ಳಾರಿ, ದಾವಣಗೆರೆ, ಚಿತ್ರದುರ್ಗ ಜಿಲ್ಲೆಗಳ ಬಹುಪಾಲಿನ ಪ್ರದೇಶಗಳನ್ನೊಳಗೊಂಡಿದೆ

**ದಕ್ಷಿಣ ಮೈದಾನ ಪ್ರದೇಶ (ದಕ್ಷಿಣ ಪ್ರಸ್ಥಭೂಮಿ)** ಈ ಭೂ ಭಾಗವು ಉತ್ತರ ಮೈದಾನ ಪ್ರದೇಶಕ್ಕಿಂತ ಎತ್ತರದಲ್ಲಿದೆ ಈ ಎತ್ತರವು ಸಮುದ್ರಮಟ್ಟದಿಂದ ಸರಾಸರಿ 1000 ದಿಂದ 1600 ಮೀ ನಷ್ಟಿದೆ ಈ ಪ್ರದೇಶದಲ್ಲಿ ಹಲವಾರು ಮೊಟಕುಗೊಂಡಿರುವ ಸಣ್ಣಸಣ್ಣ ಬೆಟ್ಟಗಳ ಶ್ರೇಣಿಗಳಿವೆ ಒಂದು ಶ್ರೇಣಿಯು ಚಿಕ್ಕನಾಯ್ಕನ ಹಳ್ಳಿಯಿಂದ ದಾವಣಗೆರೆಯನ್ನು ಹಾದು ಉತ್ತರ ಪ್ರಸ್ಥಭೂಮಿಯ ಮುಂಡರಗಿ ಬಳಿಯ ಡಂಬಳ ಬೆಟ್ಟಗಳವರೆಗೆ ಹಬ್ಬಿದೆ ಇನ್ನೊಂದು ಶ್ರೇಣಿ ಕೃಷ್ಣರಾಜಪೇಟೆಯಿಂದ ವಾಯುವ್ಯ ದಿಕ್ಕಿನತ್ತ ಹೊರಟು ಹೊನ್ನಾಳಿಯನ್ನು ದಾಟಿ ಸಾಗಿದೆ ಈ ಎರಡೂ ಶ್ರೇಣಿಗಳ ನಡುವಣ ಭೂಭಾಗವನ್ನು ದಕ್ಷಿಣ ಮೈದಾನ ಪ್ರದೇಶದ ಉಪಪ್ರದೇಶವೆಂದು ಕರೆಯುತ್ತಾರೆ ಗುಡಿಬಂಡೆಯಿಂದ ಚಿಕ್ಕಬಳ್ಳಾಪುರದ ಕಡೆಗೆ ಹಬ್ಬಿರುವ ಇನ್ನೊಂದು ಬೆಟ್ಟ ಶ್ರೇಣಿಯಲ್ಲಿ ನಂದಿಬೆಟ್ಟ (ಎತ್ತರ 1600 ಮೀ ) ಪ್ರಮುಖವಾದದ್ದು. ಈ ಶ್ರೇಣಿಯಿಂದ

ಪಶ್ಚಿಮಾಭಿಮುಖವಾಗಿ ಮತ್ತು ಪೂರ್ವಾಭಿಮುಖವಾಗಿ ಸಾಗುವ ಬೆಟ್ಟಗಳ ಶ್ರೇಣಿಯಿದೆ ಇದರಲ್ಲಿ ಕಲ್ಲು ಬಂಡೆಗಳಿಂದ ಕೂಡಿದ ಬರಡು ಬೆಟ್ಟಗಳು ಕಂಡುಬರುತ್ತವೆ ದಕ್ಷಿಣ ಪ್ರಸ್ಥಭೂಮಿಯು, ಚಿಕ್ಕಮಗಳೂರು, ಹಾಸನ, ಮೈಸೂರು ಜಿಲ್ಲೆಗಳ ಕೆಲವು ಪ್ರದೇಶಗಳನ್ನು ಹಾಗೂ ಮಂಡ್ಯ, ತುಮಕೂರು, ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ ಜಿಲ್ಲೆಗಳ ಬಹುಭಾಗವನ್ನು ಒಳಗೊಂಡಿದೆ

**ವಾಯುಗುಣ**

ಕರ್ನಾಟಕದ ವಾಯುಗುಣವು ಮುಂಗಾರು ಮಳೆಯಾಧಾರಿತವಾದದ್ದು ವಾಯುಗುಣವನ್ನು ಚಳಿಗಾಲ, ಬೇಸಿಗೆಕಾಲ ಮತ್ತು ಮಳೆಗಾಲ ಎಂದು ಗುರುತಿಸುತ್ತಾರೆ **ಚಳಿಗಾಲ** ಈ ಕಾಲವು ನವೆಂಬರ್ ತಿಂಗಳ ಮಧ್ಯದಿಂದ ಪ್ರಾರಂಭವಾಗಿ ಫೆಬ್ರವರಿ ತಿಂಗಳ ಅಂತ್ಯದವರೆಗಿರುತ್ತದೆ ಈ ಕಾಲದಲ್ಲಿ ಉಷ್ಣತೆಯು 14° ಸೆ - 25° ಸೆ ಇರುತ್ತದೆ ಈ ಕಾಲದಲ್ಲಿ ಸಾಮಾನ್ಯವಾಗಿ ಮಳೆಯಾಗುವುದಿಲ್ಲ ಆದರೆ, ಬಂಗಾಳಕೊಲ್ಲಿಯಲ್ಲಿ ವಾಯುಭಾರ ಕುಸಿತ ಉಂಟಾದಾಗ ಮಳೆ ಬೀಳುತ್ತದೆ ಚಳಿಗಾಲದಲ್ಲಿ ಮುಂಜಾನೆ ಮಂಜು ಕವಿದಿರುತ್ತದೆ ಜೊತೆಗೆ ಇಬ್ಬನಿಯೂ ಬೀಳುತ್ತದೆ **ಬೇಸಿಗೆ ಕಾಲ** ಇದು ಮಾರ್ಚ್‌ನಿಂದ ಪ್ರಾರಂಭವಾಗಿ ಮೇ ಅಂತ್ಯದವರೆಗೂ ಮುಂದುವರೆಯುತ್ತದೆ ಈ ಅವಧಿಯಲ್ಲಿ ಉಷ್ಣತೆಯು 26° ಸೆ - 34° ಸೆ ನಷ್ಟಿರುತ್ತದೆ ಈ ಕಾಲದಲ್ಲಿ ಉತ್ತರ ಮೈದಾನ ಪ್ರದೇಶಗಳಲ್ಲಿ ಉಷ್ಣತಾಮಾನವು ಗರಿಷ್ಟ ಮಟ್ಟವನ್ನು ತಲಪುತ್ತದೆ. ಆದರೆ ಮಲೆನಾಡಿನಲ್ಲಿ ಹಾಗಾಗುವುದಿಲ್ಲ ಬೇಸಿಗೆಯಲ್ಲಿ ಅಧಿಕ ಉಷ್ಣತೆಯಿಂದ ಕೂಡಿದ ಮಾರುತಗಳು ಸಮುದ್ರದ ಕಡೆಯಿಂದ ಬೀಸಿ ಬಂದು ಮೊದಲ ಮುಂಗಾರು ಮಳೆಯನ್ನು ಸುರಿಸುತ್ತವೆ ಇದನ್ನು "ಮಾವಿನ ಹುಯ್ಲು ಮಳೆ" ಎಂದು ಕರೆಯುತ್ತಾರೆ ರಾಜ್ಯದ ದಕ್ಷಿಣ ಭಾಗವು ಇಂತಹ ಮಳೆಯನ್ನು ಹೆಚ್ಚಾಗಿ ಪಡೆಯುತ್ತದೆ **ಮಳೆಗಾಲ** ಈ ಕಾಲವು ಜೂನ್‌ನಿಂದ ಆರಂಭವಾಗಿ ಅಕ್ಟೋಬರ್-ನವೆಂಬರ್ ತಿಂಗಳವರೆಗಿರುತ್ತದೆ ಈ ಅವಧಿಯಲ್ಲಿ ಉಷ್ಣತೆಯು 26° ಸೆ. - 29° ಸೆ. ಇರುತ್ತದೆ ರಾಜ್ಯದಲ್ಲಿ ಮುಂಗಾರು ಮತ್ತು ಹಿಂಗಾರು ಎಂಬ ಎರಡು ರೀತಿಯ ಮಳೆಯಾಗುತ್ತದೆ ಮುಂಗಾರು ಮಳೆಯು ಜೂನ್ ತಿಂಗಳ ಮಧ್ಯದಿಂದ ಪ್ರಾರಂಭವಾಗಿ ಸೆಪ್ಟಂಬರ್ ತಿಂಗಳ ಮಧ್ಯದವರೆಗೂ ಬೀಳುತ್ತದೆ ಈ ಮಳೆಯು

ರಾಜ್ಯದ ಪಶ್ಚಿಮ ಭಾಗದ ಮೇಲೆ ಹೆಚ್ಚಾಗಿ ಬೀಳುತ್ತದೆ ಹಿಂಗಾರು ಮಳೆಯು ಅಕ್ಟೋಬರ್‌ನಿಂದ ಪ್ರಾರಂಭವಾಗಿ ಕೆಲವೊಮ್ಮೆ ಡಿಸೆಂಬರ್ ತಿಂಗಳ ಮಧ್ಯದವರೆಗೂ ಮುಂದುವರೆಯುತ್ತದೆ ಈ ಮಳೆಯ ಮಾರುತಗಳು ಬಂಗಾಳಕೊಲ್ಲಿಯ ಮೇಲೆ ಬೀಸಿಬರುವಾಗ ತೇವಾಂಶ ಪಡೆದು ಬರುತ್ತವೆ ಈ ಮಳೆಯು ಸಾಮಾನ್ಯವಾಗಿ ದಕ್ಷಿಣ ಮೈದಾನ ಪ್ರದೇಶದ ಮೇಲೆ ಬೀಳುತ್ತದೆ

ಕರ್ನಾಟಕದ ಮಳೆಯ ಹಂಚಿಕೆ ಏಕಪ್ರಕಾರವಾಗಿರುವುದಿಲ್ಲ ಪಶ್ಚಿಮದಿಂದ ಪೂರ್ವದ ಕಡೆಗೆ ಹೋದಂತೆ ಬೀಳುವ ಮಳೆಯ ಪ್ರಮಾಣ ಕಡಿಮೆಯಾಗುತ್ತಾ ಹೋಗುತ್ತದೆ ದಕ್ಷಿಣ ಮತ್ತು ಉತ್ತರ ಕನ್ನಡ, ಉಡುಪಿ, ಹಾಸನ, ಚಿಕ್ಕಮಗಳೂರು, ಕೊಡಗು ಹೆಚ್ಚು ಮಳೆ ಪಡೆಯುವ ಜಿಲ್ಲೆಗಳಾದರೆ ಪ್ರತಿಯಾಗಿ ಬೀದರ್, ಗುಲ್ಬರ್ಗ, ರಾಯಚೂರು, ಕೊಪ್ಪಳ, ಬಳ್ಳಾರಿ, ದಾವಣಗೆರೆ, ಬಿಜಾಪುರ, ಬಾಗಲಕೋಟೆ, ಕೋಲಾರ ಜಿಲ್ಲೆಗಳು ಕಡಿಮೆ ಮಳೆಯನ್ನು ಪಡೆಯುತ್ತವೆ. ಉಳಿದ ಜಿಲ್ಲೆಗಳು ಸಾಧಾರಣ ಮಳೆ ಪಡೆಯುತ್ತವೆ ರಾಜ್ಯದಲ್ಲಿ ಬೀಳುವ ವಾರ್ಷಿಕ ಸರಾಸರಿ ಮಳೆ 1355 ಸೆ ಮೀ ಗಳು ಆಗುಂಬೆ ಅಧಿಕ ಮಳೆ ಪಡೆಯುವ ಸ್ಥಳ ಇದನ್ನು ಕರ್ನಾಟಕದ ಚಿರಾಪುಂಜಿ ಎಂದು ಕರೆಯುತ್ತಾರೆ

## ನದಿಗಳು

ರಾಜ್ಯದಲ್ಲಿ ಅನೇಕ ನದಿಗಳು ಮತ್ತು ಉಪನದಿಗಳು ಹರಿಯುತ್ತವೆ ಅವುಗಳಲ್ಲಿ ಬಹುಪಾಲಿನ ನದಿಗಳು ಪಶ್ಚಿಮ ಘಟ್ಟದಲ್ಲಿ ಉಗಮವಾಗಿ ಪೂರ್ವ ಹಾಗೂ ಪಶ್ಚಿಮ ದಿಕ್ಕಿನೆಡೆಗೆ ಹರಿಯುತ್ತಿವೆ ಪೂರ್ವಕ್ಕೆ ಹರಿಯುವ ನದಿಗಳಲ್ಲಿ ಕೃಷ್ಣಾ, ಕಾವೇರಿ, ಪೆನ್ನಾರ್, ಪಾಲಾರ್ ಮತ್ತು ಅವುಗಳ ಉಪನದಿಗಳು ಮುಖ್ಯವಾದವುಗಳು ಈ ನದಿಗಳು ಪಶ್ಚಿಮ ಘಟ್ಟದಲ್ಲಿ ಉಗಮವಾಗಿ ಪೂರ್ವಾಭಿಮುಖವಾಗಿ ಹರಿದು ಕೊನೆಗೆ ಬಂಗಾಳ ಕೊಲ್ಲಿಯನ್ನು ಸೇರುತ್ತವೆ ಕೃಷ್ಣಾ, ಉತ್ತರ ಕರ್ನಾಟಕದ ಬಹು ಮುಖ್ಯನದಿ ಭೀಮ ಇದರ ಒಂದು ಮುಖ್ಯ ಉಪನದಿ ಘಟಪ್ರಭ, ಮಲಪ್ರಭ ಮತ್ತು ದ್ರೋಣಿ ಕೃಷ್ಣಾನದಿಯ ಇತರ ಉಪನದಿಗಳು ತುಂಗಾ ಮತ್ತು ಭದ್ರಾ ಇವು ಪಶ್ಚಿಮ ಘಟ್ಟದ ಗಂಗಾ ಮೂಲದಲ್ಲಿ ಹುಟ್ಟಿ ಬೇರೆಬೇರೆ ದಿಕ್ಕುಗಳಿಂದ ಚಿಕ್ಕಮಗಳೂರು ಜಿಲ್ಲೆಯ ಮೂಲಕ ಹರಿದು

ಶಿವಮೊಗ್ಗದ ಕೂಡ್ಲಿಯಲ್ಲಿ ಸೇರುತ್ತವೆ ಅಲ್ಲಿಂದ ಮುಂದೆ ತುಂಗಭದ್ರಾ ನದಿಯಾಗಿ ಹರಿದು ಆಂಧ್ರಪ್ರದೇಶದ ಕರ್ನೂಲಿನ ಬಳಿ ಕೃಷ್ಣಾನದಿಯನ್ನು ಕೂಡುತ್ತದೆ ತುಂಗಭದ್ರಾ ನದಿಗೆ ವೇದವತಿ ಮತ್ತು ವರದಾ ಎಂಬ ಎರಡು ಉಪನದಿಗಳೂ ಇವೆ ಕಾವೇರಿ ದಕ್ಷಿಣ ಕರ್ನಾಟಕದ ಒಂದು ಮುಖ್ಯ ನದಿ ಇದು ಕೊಡಗು ಜಿಲ್ಲೆಯ ತಲಕಾವೇರಿಯಲ್ಲಿ ಉಗಮವಾಗುತ್ತದೆ. ಈ ನದಿಯನ್ನು ದಕ್ಷಿಣದ ಗಂಗೆ ಎಂದೂ ಕರೆಯುತ್ತಾರೆ ಈ ನದಿಯು ಪಶ್ಚಿಮ ದಿಕ್ಕಿನ ಕಡೆಗೆ ಹರಿಯದೆ ಘಟ್ಟವನ್ನು ದಾಟಿ ಪೂರ್ವಾಭಿಮುಖವಾಗಿ ಹರಿಯುತ್ತಿರುವುದು ಮಾತ್ರ ಗಮನಾರ್ಹವಾದ ವಿಷಯ ಈ ನದಿಯು ಹರಿಯುವ ಮಾರ್ಗದ ಮಧ್ಯೆ ಮೂರು ಕಡೆ ದ್ವೀಪಗಳನ್ನು ಮತ್ತು ಜಲಪಾತವನ್ನು ನೃಷ್ಟಿಸುತ್ತದೆ. ಶ್ರೀರಂಗಪಟ್ಟಣ, ಶಿವನ ಸಮುದ್ರ ಮತ್ತು ಶ್ರೀರಂಗದ ಬಳಿ ಕವಲೊಡೆದು ಹರಿಯುವುದರಿಂದ ದ್ವೀಪಗಳುಂಟಾಗುತ್ತವೆ ಅವುಗಳನ್ನು ಅನುಕ್ರಮವಾಗಿ 'ಆದಿರಂಗ', 'ಮಧ್ಯರಂಗ' ಮತ್ತು 'ಅಂತ್ಯರಂಗ' ವೆಂದು ಕರೆಯುತ್ತಾರೆ ಚುಂಚನಕಟ್ಟೆ, ಶಿವನಸಮುದ್ರ ಮತ್ತು ಹೊಗೇನಕಲ್ ಬಳಿ ದುಮುಕಿ ಜಲಪಾತವನ್ನುಂಟು ಮಾಡುತ್ತದೆ. ಕಾವೇರಿ ನದಿಯು ಮೈಸೂರು, ಮಂಡ್ಯ ಜಿಲ್ಲೆಗಳ ಮೂಲಕ ಹರಿದು ಬೆಂಗಳೂರು ಜಿಲ್ಲೆಯ ಅಂಚನ್ನು ತಾಗಿ ತಮಿಳುನಾಡಿಗೆ ಹರಿದುಹೋಗುತ್ತದೆ ಈ ನದಿಗೆ ಹೇಮಾವತಿ, ಲಕ್ಷ್ಮಣ ತೀರ್ಥ, ಕಪಿಲ, ಸುವರ್ಣಾವತಿ, ಶಿಂಷಾ ಮತ್ತು ಅರ್ಕಾವತಿ ಎಂಬ ಉಪನದಿಗಳು ನೇರುತ್ತವೆ ಕಪಿಲಾಗೆ ನುಗು ಮತ್ತು ಗುಂಡುಲುಗಳೆಂಬ ಉಪನದಿಗಳೂ ಮತ್ತು ಶಿಂಷಾಗೆ ಕಣ್ವ ಎಂಬ ಉಪನದಿಯೂ ನೇರುತ್ತದೆ ನಂದಿದುರ್ಗದಿಂದ ಪೂರ್ವಕ್ಕೆ ಹರಿಯುವ ನದಿಗಳಲ್ಲಿ ಉತ್ತರ ಮತ್ತು ದಕ್ಷಿಣ ಪಿನಾಕಿನಿ ಮತ್ತು ಪಾಲಾರ್ ಮುಖ್ಯವಾದವುಗಳು

ಪಶ್ಚಿಮ ಘಟ್ಟದಲ್ಲಿ ಹುಟ್ಟಿ ಪಶ್ಚಿಮಕ್ಕೆ ಹರಿಯುವ ನದಿಗಳು ಹಲವಾರಿವೆ ಅವು ಕಡಿದಾದ ಘಟ್ಟಪಾರ್ಶ್ವವನ್ನು ಇಳಿದು ಜಲಪಾತಗಳನ್ನು ಸೃಷ್ಟಿಸಿ ಕಿರಿದಾದ ಕರಾವಳಿಯನ್ನು ದಾಟಿ ಅರಬ್ಬೀ ಸಮುದ್ರದಲ್ಲಿ ಲೀನವಾಗುತ್ತವೆ ಪಶ್ಚಿಮಕ್ಕೆ ಹರಿಯುವ ನದಿಗಳಲ್ಲಿ ಕಾಳಿ, ಗಂಗಾವಳಿ, ಅಘನಾಶಿನಿ, ಶರಾವತಿ, ಸೀತಾ, ಸ್ವರ್ಣ, ನೇತ್ರಾವತಿ, ಗುರುಪುರ ಮುಂತಾದವುಗಳು ಇವುಗಳಲ್ಲಿ ಶರಾವತಿ ಮತ್ತು ಕಾಳಿ ನದಿಗಳು ಮುಖ್ಯವಾದವುಗಳು. ಶರಾವತಿ ನದಿಯು ಶಿವಮೊಗ್ಗ ಜಿಲ್ಲೆಯ ಕವಲೆದುರ್ಗದಲ್ಲಿ ಉಗಮವಾಗಿ ಹರಿಯುರ ಮಾರ್ಗದಲ್ಲಿ ಗೇರು ಸೊಪ್ಪದ ಬಳಿ ಸುಪ್ರಸಿದ್ಧ 'ಜೋಗ್' ಜಲಪಾತವನ್ನು ಸೃಷ್ಟಿಸಿ ಮುಂದೆ ಹರಿದುಹೋಗುತ್ತದೆ


ಕರ್ನಾಟಕದ ಮಣ್ಣಿನ ನಮೂನೆಗಳು
ಕರೇಕಲ್ಲು ಮಣ್ಣು
ಕೆಂಪು ಎರೆ ಮಣ್ಣು
ಕಪ್ಪುಎರೆಮಣ್ಣು
(ಎರೆಮಣ್ಣು)
ಕೆಮ್ಮಣ್ಣು
ಕೆಂಪುಗೋಡುಮಣ್ಣು
ಕಂದು ಜೇಡಿಮಣ್ಣು
ಜಂಬಿಟ್ಟಿಗೆ ಮಣ್ಣು
ಮೆಕ್ಕಲು ಮಣ್ಣು

## ಮಣ್ಣಿನ ನಮೂನೆಗಳು

ರಾಜ್ಯದಲ್ಲಿ ಕಂಡು ಬರುವ ಮಣ್ಣನ್ನು ಮೆಕ್ಕಲುಮಣ್ಣು, ಜಂಬಿಟ್ಟಿಗೆ ಮಣ್ಣು, ಕಂದುಜೇಡಿಮಣ್ಣು, ಕೆಮ್ಮಣ್ಣು, ಕೆಂಪುಗೋಡು ಮಣ್ಣು, ಕೆಂಪು ಎರೆಮಣ್ಣು, ಕಪ್ಪು ಎರೆಮಣ್ಣು ಮತ್ತು ಕರೇಕಲ್ಲು ಮಣ್ಣು ಎಂಬುದಾಗಿ ಗುರುತಿಸುತ್ತಾರೆ.

**ಮೆಕ್ಕಲು ಮಣ್ಣು** · ಈ ಬಗೆಯ ಮಣ್ಣು ಸಮುದ್ರತೀರದ ನದಿಯ ಪಾತ್ರದಲ್ಲಿರುತ್ತದೆ ಈ ಮಣ್ಣನ್ನು ಪಶ್ಚಿಮ ಘಟ್ಟಗಳಿಂದ ಹರಿದು ಬರುವ ನದಿಗಳು ಹೊತ್ತು ತರುತ್ತವೆ ಇದರಲ್ಲಿ ಮರಳಿನ ಪ್ರಮಾಣ ಹೆಚ್ಚಾಗಿದ್ದು ಅಲ್ಪ ಪ್ರಮಾಣದಲ್ಲಿ ಜೇಡಿ ಮಣ್ಣಿರುತ್ತದೆ ಸಾವಯವ ಪದಾರ್ಥಗಳು ಈ ಮಣ್ಣಿನಲ್ಲಿ ಅಷ್ಟಾಗಿರುವುದಿಲ್ಲ ಸಮುದ್ರದಂಚಿಗೆ ಬಂದಂತೆ ಮೆಕ್ಕಲು ಮಣ್ಣಿನಲ್ಲಿ ಲವಣಾಂಶದ ಪ್ರಮಾಣ ಅಧಿಕವಾಗುತ್ತದೆ ಮೆಕ್ಕಲು ಮಣ್ಣು ಅರಬ್ಬೀ ಸಮುದ್ರದ ತೀರದಲ್ಲಿನ ಉಡುಪಿ, ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಹೆಚ್ಚಾಗಿರುತ್ತದೆ

**ಜಂಬಿಟ್ಟಿಗೆ ಮಣ್ಣು (ಜಂಬೆ ಮಣ್ಣು )** . ಈ ಮಣ್ಣಿನ ಬಣ್ಣ ಕೆಂಪು ಅಥವಾ ಹಳದಿಯುಕ್ತ ಕೆಂಪಾಗಿರುತ್ತದೆ ಮಣ್ಣಿಗೆ ಜಿಗುಟುತನವಿದೆ ಈ ಮಣ್ಣಿನಲ್ಲಿ ಕಬ್ಬಿಣ ಮತ್ತು ಅಲ್ಯುಮಿನಿಯಂನ ಅಂಶ ಹೆಚ್ಚಾಗಿರುತ್ತದೆ ಈ ಮಣ್ಣಿರುವ ನೆಲ ಕಲ್ಲಿನಂತೆ ಗಟ್ಟಿಯಾಗಿರುತ್ತದೆ ಇಂತಹ ನೆಲವನ್ನು ಅಗೆದು ಇಟ್ಟಿಗೆ ರೂಪದಲ್ಲಿ ಹೊರ ತೆಗೆಯುತ್ತಾರೆ ಈ ಇಟ್ಟಿಗೆಗಳನ್ನು ಜಂಬಿಟ್ಟಿಗೆ ಎಂದು ಕರೆಯುತ್ತಾರೆ ಮಲೆನಾಡಿನಲ್ಲಿ ಜಂಬಿಟ್ಟಿಗೆಗಳನ್ನು ಕಟ್ಟಡ ಕಟ್ಟಲು ಬಳಸುತ್ತಾರೆ. ಜಂಬಿಟ್ಟಿಗೆ ಮಣ್ಣು ಮಲೆನಾಡಿನ ಕೊಡಗು, ಉಡುಪಿ, ದಕ್ಷಿಣ ಮತ್ತು ಉತ್ತರ ಕನ್ನಡ, ಹಾಸನ, ಚಿಕ್ಕಮಗಳೂರು, ಶಿವಮೊಗ್ಗ, ಧಾರವಾಡ ಮತ್ತು ಬೆಳಗಾವಿ ಜಿಲ್ಲೆಗಳ ಘಟ್ಟ ಪ್ರದೇಶಗಳಲ್ಲಿ ವಿಶೇಷವಾಗಿ ಕಂಡು ಬರುತ್ತದೆ ಅಲ್ಪ ಪ್ರಮಾಣದಲ್ಲಿ ಕಡಿಮೆ ಮಳೆಬೀಳುವ ಬೆಂಗಳೂರು ಗ್ರಾಮಾಂತರ ಮತ್ತು ಬೀದರ್ ಜಿಲ್ಲೆಗಳ ಕೆಲವು ಪ್ರದೇಶಗಳಲ್ಲೂ ಈ ಬಗೆಯ ಮಣ್ಣು ನೋಡಲು ಸಿಗುತ್ತದೆ.

**ಕಂದು ಜೇಡಿಮಣ್ಣು** ಜೇಡಿಮಣ್ಣಿಗೆ ಅತಿಹೆಚ್ಚು ಪ್ರಮಾಣದಲ್ಲಿ ಸಾವಯವ ಪದಾರ್ಥಗಳು ಸೇರುವುದರಿಂದ ಈ ಬಗೆಯ ಮಣ್ಣು ಉಂಟಾಗುತ್ತದೆ. ಈ ರೀತಿ

ವಿಫುಲ ಪ್ರಮಾಣದಲ್ಲಿ ಸಾವಯುವ ಪದಾರ್ಥಗಳು ಸೇರ್ಪಡೆಯಾಗಲು ಆ ಪ್ರದೇಶದಲ್ಲಿರುವ ದಟ್ಟ ಅರಣ್ಯ ಮುಖ್ಯ ಕಾರಣ ಈ ಬಗೆಯ ಮಣ್ಣು ಕೊಡಗಿನ ಪೂರ್ವಭಾಗದ ಹಾಗೂ ಹಾಸನ ಮತ್ತು ಮೈಸೂರು ಜಿಲ್ಲೆಗಳ ಕೆಲವೆಡೆ ಕಂಡು ಬರುತ್ತದೆ.

**ಕೆಮ್ಮಣ್ಣು** ಕೆಂಪು ಬಣ್ಣದ ಈ ಮಣ್ಣಿನಲ್ಲಿ ಕಬ್ಬಿಣದ ಅಂಶ ಹೆಚ್ಚಾಗಿರುತ್ತದೆ ಜೊತೆಗೆ ಸಾರಜನಕ, ರಂಜಕ, ಸುಣ್ಣ ಮತ್ತು ಅಲ್ಪ ಪ್ರಮಾಣದಲ್ಲಿ ಸಾವಯವ ಪದಾರ್ಥಗಳು ಬೆರೆತಿರುತ್ತವೆ ಈ ಮಣ್ಣು ಹಗುರವಾಗಿದ್ದು ಅಷ್ಟೇನು ಫಲವತ್ತಾಗಿರುವುದಿಲ್ಲ. ಕೆಮ್ಮಣ್ಣು ಕೋಲಾರ, ಬೆಂಗಳೂರು (ನಗರ ಮತ್ತು ಗ್ರಾಮಾಂತರ), ಮೈಸೂರು, ಚಾಮರಾಜನಗರ, ಮಂಡ್ಯ ಮತ್ತು ತುಮಕೂರು ಜಿಲ್ಲೆಗಳಲ್ಲಿ ಕಂಡು ಬರುತ್ತದೆ

**ಕೆಂಪುಗೋಡು ಮಣ್ಣು** ಈ ಮಣ್ಣು ಕಬ್ಬಿಣಯುಕ್ತ ಬೆಣಚುಕಲ್ಲು ಹಾಗೂ ಇನ್ನೂ ಹಲವು ಬಗೆಯ ಶಿಲೆಗಳು ಶಿಥಿಲಗೊಂಡಾಗ ಉಂಟಾಗುತ್ತದೆ ಈ ಮಣ್ಣು ಕೆಮ್ಮಣ್ಣಿಗಿಂತ ಫಲವತ್ತಾಗಿರುತ್ತದೆ ಫಲವತ್ತತೆಯು ಘಟ್ಟದ ಕಡೆಗೆ ಬಂದಂತೆ ಹೆಚ್ಚಾಗುತ್ತಾ ಹೋಗುತ್ತದೆ ಮಣ್ಣಿನಲ್ಲಿ ಆಮ್ಲತೆ ಹೆಚ್ಚಾಗಿರುತ್ತದೆ ಈ ಮಾದರಿಯ ಮಣ್ಣು ಚಿತ್ರದುರ್ಗ, ದಾವಣಗೆರೆ, ಶಿವಮೊಗ್ಗ, ಚಿಕ್ಕಮಗಳೂರು, ಹಾಸನ, ಮೈಸೂರು, ಚಾಮರಾಜನಗರ ಮತ್ತು ಕೊಡಗು ಜಿಲ್ಲೆಗಳ ಕೆಲವು ಭಾಗಗಳಲ್ಲಿ ಕಂಡು ಬರುತ್ತದೆ

**ಕೆಂಪು ಎರೆ ಮಣ್ಣು** . ಈ ಮಣ್ಣಿನ ಸ್ವರೂಪವು ಗೋಡು ಅಥವಾ ಎರೆಗೋಡು ರೀತಿಯದ್ದಾಗಿರುತ್ತದೆ ಮಣ್ಣಿನಲ್ಲಿ ಸುಣ್ಣದ ಅಂಶ ಮಿಶ್ರಿತವಾಗಿರುತ್ತದೆ ಮಣ್ಣಿನಲ್ಲಿ ಇಂಗುವಿಕೆಯ ಗುಣ ಉತ್ಕೃಷ್ಟವಾಗಿದೆ. ಇಂತಹ ಮಣ್ಣು ಧಾರವಾಡ, ಕೊಪ್ಪಳ, ದಾವಣಗೆರೆ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಕಂಡುಬರುತ್ತದೆ

**ಕಪ್ಪು ಎರೆಮಣ್ಣು (ಎರೆ ಮಣ್ಣು)** ಈ ಬಗೆಯ ಮಣ್ಣು ಕರೇಕಲ್ಲು, ಸುಣ್ಣದಕಲ್ಲು ಹಾಗೂ ಇನ್ನೂ ಮುಂತಾದ ಶಿಲೆಗಳು ಶಿಥಿಲಗೊಳ್ಳುವುದರಿಂದ ಉಂಟಾಗುತ್ತದೆ. ಈ ಮಣ್ಣಿಗೆ ನೀರನ್ನು ಹಿಡಿದಿಟ್ಟುಕೊಳ್ಳುವ ಶಕ್ತಿಯಿರುವುದರಿಂದ ತೇವಾಂಶವು

ಆರದೆ ಬಹಳ ಕಾಲ ಮಣ್ಣಿನಲ್ಲಿ ಉಳಿಯುತ್ತದೆ ತೇವಾಂಶವಿರುವಾಗ ಮಣ್ಣು ಮೆದುವಾಗಿರುತ್ತದೆ ತೇವವಾರಿದ ಮೇಲೆ ಮಣ್ಣಿನಲ್ಲಿ ಆಳವಾದ ಬಿರುಕುಗಳು ಉಂಟಾಗುತ್ತದೆ ಈ ಬಗೆಯ ಮಣ್ಣು ನಾಗಾಣಿಕೆಯ ಮಣ್ಣಾಗಿದ್ದು ಒಳನಾಡಿನ ನದಿ ಪಾತ್ರಗಳಲ್ಲ ಾಡುಬರುತ್ತದ ಮಣ್ಣು ಫಲವತ್ತಾಗಿರುತ್ತದೆ ಕೃಷ್ಣಾ ಮತ್ತು ಅದರ ಉಪನದಿಗಳ ಪಾತ್ರದಲ್ಲಿ ಈ ಬಗೆಯ ಮಣ್ಣು ಯಥೇಚ್ಛವಾಗಿರುತ್ತದೆ ಸಾಮಾನ್ಯವಾಗಿ ಈ ಬಗೆಯ ಮಣ್ಣನ್ನು ಬಿಜಾಪುರ, ಧಾರವಾಡ, ಗದಗ, ಹಾವೇರಿ, ಬಳ್ಳಾರಿ, ದಾವಣಗೆರೆ, ರಾಯಚೂರು, ಗುಲ್ಬರ್ಗ, ಚಿತ್ರದುರ್ಗ, ಬೆಳಗಾವಿ, ಚಾಮರಾಜನಗರ ಮತ್ತು ಮೈಸೂರು ಜಿಲ್ಲೆಯ ಕೆಲವು ಪ್ರದೇಶಗಳಲ್ಲಿ ಕಾಣಬಹುದು

**ಕರೇಕಲ್ಲು ಮಣ್ಣು** ಈ ಮಣ್ಣ ಕರೇಕಲ್ಲು ಅಥವಾ ದಖಿನ್ ಟ್ರ್ಯಾಪ್ ಶಿಲೆಗಳು ಶಿಥಿಲಗೊಳ್ಳುವುದರಿಂದ ಉಂಟಾಗುತ್ತದೆ ಎತ್ತರ ಪ್ರದೇಶದಡೆಯಲ್ಲಿ ಈ ಮಣ್ಣು ತಿಳಿ ಬಣ್ಣದಾಗಿದ್ದು ಸತ್ವರಹಿತವಾಗಿರುತ್ತದೆ ಆದರೆ ಇಳಕಲು ಮತ್ತು ಕಣಿವೆ ಪ್ರದೇಶಗಳಲ್ಲಿ ಇದೇ ಮಣ್ಣು ಕಪ್ಪಾಗಿದ್ದು ಫಲವತ್ತಾಗಿರುತ್ತದೆ ಈ ಮಣ್ಣಿನಲ್ಲಿ ಸುಣ್ಣವೂ ಹರಳಿನ ರೂಪದಲ್ಲಿ ಬೆರೆತಿರುತ್ತದೆ ಈ ಬಗಯ ಮಣ್ಣು ಬೆಳಗಾವಿ, ಬಿಜಾಪುರ, ಗುಲ್ಬರ್ಗ ಹಾಗೂ ಬೀದರ್ ಜಿಲ್ಲೆಗಳ ಕೆಲವು ಭಾಗಗಳಲ್ಲಿ ಕಂಡುಬರುತ್ತದೆ

## ಸಸ್ಯಾವರಣ

ಶೈತ್ಯದಿಂದ ಒಣಹವೆಯವರೆಗಿನ ವಿವಿಧ ಬಗೆಯ ವಾತಾವರಣ, ಸಮುದ್ರ ಮಟ್ಟದಿಂದ 1925 ಮೀ ವರೆಗಿನ ನಾನಾ ಎತ್ತರದ ನೆಲ ಹಾಗೂ ಹಲವು ಬಗೆಯ ಮಣ್ಣು ಮತ್ತು ವಿವಿದ ಪ್ರಮಾಣದಲ್ಲಿ ಮಳೆ ಪಡೆಯುವ ಪ್ರದೇಶಗಳಿಂದಾಗಿ ರಾಜ್ಯದಲ್ಲಿ ವೈವಿದ್ಯಮಯ ಸಸ್ಯಾವರಣ ಕಂಡುಬರುತ್ತದೆ ರಾಜ್ಯದಲ್ಲಿರುವ ಸಸ್ಯಾವರಣವನ್ನು 1) ಕಡಲಂಚಿನ ಸಸ್ಯಾವರಣ, 2) ಉಷ್ಣವಲಯದ ತೇವಪೂರಿತ ನಿತ್ಯ ಹರಿದ್ವರ್ಣ ಸಸ್ಯಾವರಣ, 3) ಉಷ್ಣವಲಯದ ಭಾಗಶಃ ನಿತ್ಯಹರಿದ್ವರ್ಣ ಸಸ್ಯಾವರಣ, 4) ಬೇಸಿಗೆಯಲ್ಲಿ ಎಲೆಯುದುರುವ ಮಲೆನಾಡಿನ ಸಸ್ಯಾವರಣ ಮತ್ತು 5) ಬೇಸಿಗೆಯಲ್ಲಿ ಎಲೆಯುದುರುವ ಮೈದಾನ ಸೀಮೆಯ ಒಣ ಸಸ್ಯಾವರಣ ಎಂಬುದಾಗಿ ವಿಂಗಡಿಸಲಾಗಿದೆ *


ಕರ್ನಾಟಕದ ಸಸ್ಯಾವರಣ
ಕಡಲಂಚಿನ ಸಸ್ಯಾವರಣ
ಉಷ್ಣವಲಯದ ತೇವಪೂರಿತ ನಿತ್ಯ ಹರಿದ್ವರ್ಣ ಸಸ್ಯಾವರಣ
ಉಷ್ಣವಲಯದ ಭಾಗಶಃ ನಿತ್ಯ ಹರಿದ್ವರ್ಣ ಸಸ್ಯಾವರಣ
ಬೇಸಿಗೆಯಲ್ಲಿ ಎಲೆಯುದುರವ ಮಲೆನಾಡಿನ ಸಸ್ಯಾವರಣ
ಬೇಸಿಗೆಯಲ್ಲಿ ಎಲೆಯುದುರುವ ಮೈದಾನ ಸೀಮೆಯ ಒಣ ಸಸ್ಯಾವರಣ
ಕಳ್ಳಿ, ಕುರುಚಲು ಗಿಡಗಳನ್ನೊಳಗೊಂಡ ಸಸ್ಯಾವರಣ

**ಕಡಲಂಚಿನ ಸಸ್ಯಾವರಣ** ಈ ಬಗೆಯ ಸಸ್ಯಾವರಣವು ಉಡುಪಿ, ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಕಡಲ ತೀರದಲ್ಲಿ ಕಂಡುಬರುತ್ತದೆ ಈ ಸಸ್ಯಾವರಣದಲ್ಲಿ ಮರಳ ದಿಣ್ಣೆಯ ಸಸ್ಯಾವರಣ ಮತ್ತು ಕಾಂಡ್ಲ ಸಸ್ಯಾವರಣ ಎಂಬ ಮತ್ತೆರಡು ಬಗೆಗಳಿವೆ

ಮರಳದಿಣ್ಣೆಯ ಸಸ್ಯಾವರಣದಲ್ಲಿ ಸುಡುವ ಸೂರ್ಯ, ಸರಿಯುವ ಮರಳ ರಾಶಿ ಮತ್ತು ಉಪ್ಪುಮಿಶ್ರಿತ ಗಾಳಿಯನ್ನು ಸಹಿಸಿ ಬೆಳೆಯುವ ಸಸ್ಯಗಳಿರುತ್ತವೆ ಈ ಸಸ್ಯಗಳ ಎಲೆಗಳು ಮುಳ್ಳಿನಂತೆ ಚೂಪಾಗಿರುತ್ತವೆ ಇಲ್ಲವೆ ಅಗಲವಾಗಿದ್ದು ದಪ್ಪನಾಗಿರುತ್ತವೆ ಇನ್ನೂ ಕೆಲವು ಸಸ್ಯಗಳ ಎಲೆಗಳು ರಸಭರಿತವಾಗಿದ್ದು ತಮ್ಮಲ್ಲಿರುವ ಉಪ್ಪಿನಂಶವನ್ನು ಹೊರತಳ್ಳಲು 'ಹೈಡಥೋಡ್ಸ್' (hydathods) ಎಂಬ ವಿಶಿಷ್ಟ ಬಗೆಯ ಅಂಗ ರಚನೆ ಹೊಂದಿವೆ ಸಾಮಾನ್ಯವಾಗಿ ಈ ಸಸ್ಯಾವರಣದಲ್ಲಿ ರಾವಣ ಮೀಸೆ ಹಲ್ಲು, ಬಂಗಡಬಳ್ಳಿ, ಕೇದಿಗೆ, ಸುರಹೊನ್ನೆ, ನೀರ್‌ಲಕ್ಕಿ, ಹುಳುಹಿಡುಕನಗಿಡ ಮುಂತಾದವುಗಳು ಕಂಡುಬರುತ್ತವೆ

ಕಾಂಡ್ಲ ಸಸ್ಯಾವರಣವು, ಕುಂದಾಪುರ ಮತ್ತು ಗೋಕರ್ಣದ ಹತ್ತಿರ ನದಿಗಳು ಕಡಲನ್ನು ಸೇರುವ ಕಡೆ ಉಂಟುಮಾಡುವ ಅಳಿವೆಗಳಲ್ಲಿ ಕಂಡು ಬರುತ್ತದೆ ಈ ಸಸ್ಯಾವರಣದಲ್ಲಿನ ಸಸ್ಯಗಳು ಕೆಸರು ಮತ್ತು ಉಪ್ಪುನೀರಿನ ಪರಿಸರದಲ್ಲಿ ಬದುಕಿ ಬೆಳೆಯುತ್ತವೆ ಈ ಸಸ್ಯಗಳಲ್ಲಿ ಬಲಿಷ್ಟವಾದ ಕವಲು ಬೇರುಗಳಿರುವುದರಿಂದ ಅಲೆಗಳ ಹೊಡೆತನವನ್ನು ನೀರಿನ ಮಟ್ಟದ ಏರಿಳಿತವನ್ನು ಸಹಿಸಿಕೊಂಡು ಬೆಳೆಯುತ್ತವೆ ಕೆಲವು ಜಾತಿಯ ಸಸ್ಯಗಳ ಕವಲು ಬೇರುಗಳು ಮೇಲ್ಮುಖವಾಗಿ ಬೆಳೆದು ಜೌಗುಮಣ್ಣಿನ ಹಂದರದಿಂದ ಹೊರಚಾಚಿ 'ಲೆಂಟಿಸೆಲ್' ಎಂಬ ವಿಶಿಷ್ಟ ಬಗೆಯ ರಂಧ್ರಗಳ ಮೂಲಕ ಉಸಿರಾಡುತ್ತವೆ. ಇನ್ನು ಕೆಲವು ಸಸ್ಯಗಳ ಸಂತಾನಾಭಿವೃದ್ಧಿ ಕ್ರಮವೂ ಒಂದು ರೀತಿಯಲ್ಲಿ ವಿಶಿಷ್ಟವಾಗಿದೆ ತಾಯಿ ಸಸ್ಯದಿಂದ ಬೀಜ ಉದುರಿ ಭೂಮಿಯಲ್ಲಿ ಬೆಳೆಯುವ ಬದಲು ತಾಯಿ ಗಿಡದಲ್ಲೇ ಮೊಳೆತು ಗಟ್ಟಿಬೇರುಗಳಿಂದ ಕೂಡಿದ ಮೊಳಕೆಗಳು ಭೂಮಿಗೆ ಉದುರಿ ಗಿಡಗಳಾಗಿ ಬೆಳೆಯುತ್ತವೆ ಈ ಸಸ್ಯಾವರಣದಲ್ಲಿ ಬೆಳೆಯುವ ಸಸ್ಯಗಳಲ್ಲಿ ಕಂದಾಳ, ಉಪ್ಪಾತಿ ಮತ್ತು ಬ್ರುಗೇರ ಮುಖ್ಯವಾದವುಗಳು



ಚಿತ್ರ 1 ಕಾಂಡ್ಲಸಸ್ಯಾವರಣ-ಬೈಗೇರ ಸಸ್ಯ

**ಉಷ್ಣವಲಯದ ತೇವಪೂರಿತ ನಿತ್ಯ ಹರಿದ್ವರ್ಣ ಸಸ್ಯಾವರಣ** ಈ ಸಸ್ಯಾವರಣವು ಉಡುಪಿ, ಉತ್ತರ ಮತ್ತು ದಕ್ಷಿಣ ಕನ್ನಡ, ಶಿವಮೊಗ್ಗ, ಚಿಕ್ಕಮಗಳೂರು, ಹಾಸನ ಮತ್ತು ಕೊಡಗಿನ ಘಟ್ಟದ ಕಣಿವೆಗಳಲ್ಲಿ ಕಂಡುಬರುತ್ತದೆ ಈ ಸಸ್ಯಾವರಣದ ನೆಲದಲ್ಲಿ ಜಂಬಿಟ್ಟಿಗೆ ಮಣ್ಣಿರುತ್ತದೆ ಈ ಮಣ್ಣು ನೀರಿನಾಂಶವನ್ನು ಬಹಳ ಕಾಲದವರೆಗೆ ಆರದಂತೆ ಹಿಡಿದಿಡುತ್ತದ ಈ ಪ್ರದೇಶದಲ್ಲಿ ಬೀಳುವ ಮಳೆಯ ವಾರ್ಷಿಕ ಸರಾಸರಿ ಪ್ರಮಾಣ 300- 1000 ಸೆ ಮೀ ಗಳು ಈ ಸಸ್ಯಾವರಣದಲ್ಲಿ ಕವಲೊಡೆಯದೆ ಎತ್ತರಕ್ಕೆ ಬೆಳೆಯುವ ಭಾರಿ ಮರಗಳಿರುತ್ತವೆ ಮರಗಳ ಬುಡದಲ್ಲಿ ಬೊಡ್ಡೆ ಬೇರು (buttress roots) ಗಳಿರುತ್ತವೆ ಮರಗಳ ತುದಿಯಲ್ಲಿರುವ ರೆಂಬೆಗಳು ಒತ್ತಾಗಿ ಒಂದಕ್ಕೊಂದು ಹೆಣೆದು ಕೊಂಡಂತಿದ್ದು ಛಾವಣಿಯನ್ನು ನಿರ್ಮಿಸಿರುತ್ತವೆ ಇಂತಹ ಛಾವಣಿಯ ಮೂಲಕ ತೂರಿ ಬರುವ ಸೂರ್ಯನ ಕಿರಣ ಅಲ್ಪಪ್ರಮಾಣದಲ್ಲಿರುವುದರಿಂದ ಮೂಲಿಕೆಗಳ ಬೆಳವಣಿಗೆಗೆ ಹೆಚ್ಚಿನ ಅವಕಾಶವಿರುವುದಿಲ್ಲ ಆದರೆ ಬಳ್ಳಿಗಳು ಮತ್ತು ಅಡರು ಬಳ್ಳಿಗಳು ಆಸರೆ ಮರಗಳನ್ನು ತಬ್ಬಿ ಬಳಸಿಕೊಂಡು ಬಳಕನ್ನು ಅರಸಿ ಬೆಳೆಯುವುದರಿಂದ ಅಲ್ಲಲ್ಲಿ ಬಹಳ ಎತ್ತರಕ್ಕೆ ಬೆಳೆದ ಬಳ್ಳಿಗಳು ಕಾಣುತ್ತವೆ ನಲಕ್ಕ ಉದುರಿದ ಎಲೆ, ರೆಂಬೆ, ಮತ್ತು ಕೊಂಬೆಗಳನ್ನು ಅನೇಕ ಬಗೆಯ ಸೂಕ್ಷ್ಮಜೀವಿಗಳು ಸರಳ ಸಂಯುಕ್ತಗಳಾಗಿ ವಿಭಜನೆಗೊಳಿಸುತ್ತವೆ ಹೀಗೆ ವಿಭಜನಯಿಂದ ಬೇರ್ಪಟ್ಟ ಸೇಂದ್ರಿಯ ಕಣಗಳು ವರ್ಷಾನುಗಟ್ಟಲ ಶೇಖರಣೆಗೊಂಡು ಸಸ್ಯಾವರಣದ ನೆಲಕ್ಕೆ ಸಾವಯುವ ಗೊಬ್ಬರವನ್ನು ಒದಗಿಸುತ್ತದೆ ಹೆಚ್ಚಿನ ತೇವಾಂಶ, ಹಿತವಾದ ಸೂರ್ಯನ ಕಿರಣ ಉತ್ತಮ ನೆಲದ ಸಾರದಿಂದ ಈ ಸಸ್ಯಾವರಣದಲ್ಲಿ ಸಮೃದ್ಧವಾದ ಸಸ್ಯ ಸಂಪತ್ತು ಕಂಡುಬರುತ್ತದೆ ಈ ಸಸ್ಯಾವರಣದಲ್ಲಿ ನಾಗಸಂಪಿಗೆ, ಧೂಪ, ಬೂರುಗ, ಹೈಗ, ಕುಟುಗೇರಿ, ನಂದಿ, ನೇರಳೆ, ನೌಲಾದಿ, ಅಶೋಕ, ಬೆಟ್ಟದನೆಲ್ಲಿ, ಬಗನಿ ಮುಂತಾದ ವೃಕ್ಷಗಳೂ, ನಾಯಿತಕ್ಕಲೆ, ಎಡಮುರಿ, ಕಾರೆ ಯಂತಹ ಪೊದೆಗಿಡಗಳೂ ಮತ್ತು ಮರ್ಸದ ಬಳ್ಳಿ, ಅಡಿಕೆಬೀಳು ಬಳ್ಳಿ, ನೀಟಮ್ ಮುಂತಾದ ಬಳ್ಳಿ ಮತ್ತು ಅಡರು ಬಳ್ಳಿಗಳು ಕಂಡುಬರುತ್ತವೆ

ನಿತ್ಯಹರಿದ್ವರ್ಣ ಸಸ್ಯಾವರಣವಿರುವ ಘಟ್ಟದ ತುದಿ ಹಾಗೂ ಗಾಳಿಯ ಹೊಡೆತ ಹೆಚ್ಚಾಗಿರುವ ಕಡೆ ಕೇವಲ ಹುಲ್ಲುಗಾವಲು ಮಾತ್ರ ಕಂಡುಬರುತ್ತದೆ ಆದರೆ ಬೆಟ್ಟಗಳ ನಡುವಿನ ಕಿರುಗಣಿವೆಗಳಲ್ಲಿ ಹಾಗೂ ಇಳಿಜಾರುಗಳಲ್ಲಿ ಗಾಳಿಯ



ಚಿತ್ರ 2 · ಉಷ್ಣವಲಯದ ತೇವಪೂರಿತ ನಿತ್ಯಹರಿದ್ವರ್ಣ ಸಸ್ಯಾವರಣ



ಚಿತ್ರ 3 : 'ಫೋಲ' ಸಸ್ಯಾವರಣ

ಹೊಡೆತವಿರದ ಕಡೆ ಕಂಡುಬರುವ ಸಸ್ಯಾವರಣವನ್ನು "ಷೋಲಾ" ಸಸ್ಯಾವರಣವೆಂದು ಕರೆಯುತ್ತಾರೆ ಈ ಸಸ್ಯಾವರಣದಲ್ಲಿ ಸಾಮಾನ್ಯವಾಗಿ ಒಂದು ಸಣ್ಣ ಝರಿ ಹರಿಯುತ್ತಿರುತ್ತದೆ ಅದರ ಇಕ್ಕೆಲಗಳಲ್ಲಿ ವಿವಿಧ ಬಗೆಯ ಫರ್ನ್(fern) ಗಿಡಗಳು, ಜಲಸಸ್ಯಗಳು, ಆರ್ಕಿಡ್‌ಗಳು, ಕಲ್ಲುಹೂಗಳು, ಅನೇಕ ಬಗೆಯ ಅಡರು ಬಳ್ಳಿಗಳು ಮತ್ತು ಮರಗಳಿರುತ್ತವೆ ಇಲ್ಲಿ ಬೆಳೆಯುವ ಮರಗಳಿಗೆ ಆಳವಾದ ಬೇರುಗಳಿರುವುದಿಲ್ಲ ಆದರೂ ಇಲ್ಲಿನ ಮರಗಳು ಬುಡ ಮೇಲಾಗಿ ಬೀಳುವುದು ಅಪರೂಪ ಗಮನಿಸಬೇಕಾದ ಅಂಶವೆಂದರೆ ಒಮ್ಮೆ 'ಷೋಲಾ' ಸಸ್ಯಾವರಣ ನಾಶವಾದರೆ ಮತ್ತೆ ಮೊದಲಿನಂತೆ ಉತ್ಪತ್ತಿಯಾಗುವುದಿಲ್ಲ 'ಷೋಲಾ' ಸಸ್ಯಾವರಣದಲ್ಲಿ ಕಂಡುಬರುವ ಮರಗಳಲ್ಲಿ ಬಿಳಿದೇವದಾರು, ಕಿರಲ್ ಭೋಘಿ, ನಾಗಸಂಪಿಗೆ, ಹೆಬ್ಬಲಸು, ದಾಲ್ಚಿನ್ನಿ, ಮಂದಧೂಪ ಮುಖ್ಯವಾದವುಗಳು

**ಉಷ್ಣವಲಯದ ಭಾಗಶಃ ನಿತ್ಯಹರಿದ್ವರ್ಣ ಸಸ್ಯಾವರಣ** ಪಶ್ಚಿಮ ಘಟ್ಟದ ಪೂರ್ವ ಭಾಗದ ಇಳಿಜಾರುಗಳಲ್ಲಿ ಈ ಬಗೆಯ ಸಸ್ಯಾವರಣ ಕಂಡುಬರುತ್ತದೆ ಈ ಸ್ಥಳದ ನೆಲದಲ್ಲಿ ಜಂಬಿಟ್ಟಿಗೆ ಮಣ್ಣಿರುತ್ತದೆ ಈ ಪ್ರದೇಶದಲ್ಲಿ ಬೀಳುವ ವಾರ್ಷಿಕ ಮಳೆಯ ಪ್ರಮಾಣ ಸರಾಸರಿ 200 -300 ಸೆ ಮೀ ಇರುತ್ತದೆ ಈ ಸಸ್ಯಾವರಣದಲ್ಲಿ ನಿತ್ಯಹರಿದ್ವರ್ಣ ವೃಕ್ಷಗಳು ಮತ್ತು ಬೇಸಿಗೆಯಲ್ಲಿ ಎಲೆಯುದುರಿಸುವ ವೃಕ್ಷಗಳೆರಡರ ಸಂಮಿಶ್ರಣವಿರುತ್ತದೆ ಈ ಸಸ್ಯಾವರಣದಲ್ಲಿ ಕಂಡುಬರುವ ಮರಗಳಲ್ಲಿ ಹೊಟ್ಟೆಬಾಗೆ, ಹೆತ್ತೇಗ, ಧೂಪ, ನೌಲಾದಿ, ಕುಟುಗೇರಿ, ಜಂಬೆ, ನಂಜಿನಕೊರಡು, ಕುಂಕುಮದ ಮರ ಮುಖ್ಯವಾದವುಗಳು ಈ ಬಗೆಯ ಸಸ್ಯಾವರಣವು ಬೆಳಗಾವಿ, ಉತ್ತರಕನ್ನಡ, ಶಿವಮೊಗ್ಗ, ಚಿಕ್ಕಮಗಳೂರು, ಹಾಸನ ಮತ್ತು ಕೊಡಗು ಜಿಲ್ಲೆಗಳ ಕೆಲವು ಭಾಗಗಳಲ್ಲಿ ಕಂಡು ಬರುತ್ತದೆ

**ಬೇಸಿಗೆಯಲ್ಲಿ ಎಲೆಯುದುರುವ ಮಲೆನಾಡಿನ ಸಸ್ಯಾವರಣ** ಸಸ್ಯಾವರಣವು ಬೆಳಗಾವಿ, ಧಾರವಾಡ, ಹಾವೇರಿ, ಶಿವಮೊಗ್ಗ, ಚಿಕ್ಕಮಗಳೂರು, ಹಾಸನ, ಕೊಡಗು, ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳ ಬೆಟ್ಟಗುಡ್ಡ ಪ್ರದೇಶಗಳಲ್ಲಿ ಕಾಣುತ್ತದೆ ಈ ಸಸ್ಯಾವರಣವಿರುವ ಕಡೆ ಬೀಳುವ ವಾರ್ಷಿಕ ಮಳೆಯ ಪ್ರಮಾಣ ಸರಾಸರಿ 150 - 200ಸೆ.ಮೀ. ಇರುತ್ತದೆ. ವರ್ಷದ ಬಹುಭಾಗ ಒಣ ಹವೆಯಿರುತ್ತದೆ ಈ ಸಸ್ಯಾವರಣದಲ್ಲಿ ಅಲ್ಲಲ್ಲಿ ನಿತ್ಯಹರಿದ್ವರ್ಣ ಕಾಡುಗಳಲ್ಲಿ



ಚಿತ್ರ 4 ಬೇಸಿಗೆಯಲ್ಲಿ ಎಲೆಯುದುರುವ ಮಲೆನಾಡಿನ ಸಸ್ಯಾವರಣ



ಚಿತ್ರ 5 . ಕಳ್ಳಿ ಕುರುಚಲು, ಗಿಡಗಳನ್ನೊಳಗೊಂಡ ಸಸ್ಯಾವರಣ

ಬೆಳೆಯುವ ಮರಗಳು ನೋಡಲು ಸಿಗುತ್ತವೆ ಈ ಸಸ್ಯಾವರಣದಲ್ಲಿ ಬಹಳ ಎತ್ತರ ಬೆಳೆಯುವ ಮರಗಳಲ್ಲಿ ನಂದಿ, ಬೀಟೆ, ತೇಗ, ಮತ್ತಿ, ಹೊನ್ನೆ, ಬೂರುಗ ಹಾಗೂ ಸಾಧಾರಣ ಎತ್ತರಕ್ಕೆ ಬೆಳೆಯುವ ಮರಗಳಲ್ಲಿ ಹೊಂಗೆ, ಕಕ್ಕೆ, ಬೆಟ್ಟದನೆಲ್ಲಿಕಾಯಿ, ಬಿಲ್ವಪತ್ರ, ನೌಲಾದಿ ಮುಖ್ಯವಾದವುಗಳು. ಇವುಗಳಲ್ಲದೆ ಅಲ್ಲಲ್ಲಿ ಬಿದಿರುಮಳೆ, ಎಡಮುರಿ, ಮಲ್ಲಿಗೆಯಂತಹ ಪೊದರುಗಿಡಗಳೂ ಕಂಡುಬರುತ್ತವೆ.

**ಬೇಸಿಗೆಯಲ್ಲಿ ಎಲೆಯುದುರುವ ಮೈದಾನ ಸೀಮೆಯ ಒಣ ಸಸ್ಯಾವರಣ**

ಈ ಬಗೆಯ ಸಸ್ಯಾವರಣವು ಚಿತ್ರದುರ್ಗ, ಶಿವಮೊಗ್ಗ, ಚಿಕ್ಕಮಗಳೂರು, ಹಾಸನ, ತುಮಕೂರು, ಮಂಡ್ಯ, ಮೈಸೂರು, ಚಾಮರಾಜನಗರ, ಬೆಂಗಳೂರು ಮತ್ತು ಕೋಲಾರ ಜಿಲ್ಲೆಗಳ ಕೆಲವು ಪ್ರದೇಶಗಳಲ್ಲಿ ಕಂಡುಬರುತ್ತದೆ ಈ ಸಸ್ಯಾವರಣದಲ್ಲಿ ಬೀಳುವ ವಾರ್ಷಿಕ ಮಳೆಯ ಪ್ರಮಾಣ 75-150 ಸೆ ಮೀ ಇರುತ್ತದೆ ಈ ಸಸ್ಯಾವರಣದಲ್ಲಿ ಬೆಳೆಯುವ ಮರಗಳು ಅಷ್ಟೇನು ಎತ್ತರವಾಗಿರುವುದಿಲ್ಲ ಮರಗಳ ಸರಾಸರಿ ಎತ್ತರ 15-25 ಮೀ ಇರುತ್ತದೆ ಮರಗಳು ಒತ್ತಾಗಿರುವುದಿಲ್ಲ ಆದುದರಿಂದ ಸಸ್ಯಾವರಣದಲ್ಲಿ ಚಾವಣಿ ಬಿಡಿಬಿಡಿಯಾಗಿರುತ್ತದೆ ಬೇಸಿಗೆಯಲ್ಲಿ ಮರಗಳು ಎಲೆಯನ್ನುದುರಿಸಿ ಬೋಳಾಗಿ ನಿಲ್ಲುತ್ತವೆ ಮುಂಗಾರಿನ ಮಳೆ ಬಿದ್ದನಂತರ ಮರಗಳಲ್ಲಿ ಚಿಗುರೆಲೆಗಳು ಮೂಡುತ್ತವೆ ಈ ಸಸ್ಯಾವರಣದಲ್ಲಿ ಎತ್ತರಕ್ಕೆ ಬೆಳೆಯುವ ಮರಗಳಲ್ಲಿ ದಿಂಡುಗ, ತಾರೆಮರ, ಅಳಲೆಕಾಯಿ, ಬೂರುಗ, ನೇರಳೆ, ಹಿಪ್ಪೆ ಹಾಗೂ ಸಾಧಾರಣ ಎತ್ತರಕ್ಕೆ ಬೆಳೆಯುವ ಮರಗಳಲ್ಲಿ ಬೆಟ್ಟದ ನೆಲ್ಲಿಕಾಯಿ, ಗಂಧದಮರ, ಮುತ್ತುಗ, ಎಲಚಿ, ಹಾಲೆ, ಜಾಲರಿ, ಕಕ್ಕೆ, ಅಂಟವಾಳ ಕುರುಚಲು ಗಿಡಗಳು ಮತ್ತು ಹಲವಾರು ಬಗೆಯ ಹುಲ್ಲುಗಳು, ಬಳ್ಳಿ ಮತ್ತು ಅಡರುಬಳ್ಳಿಗಳು ಕಂಡುಬರುತ್ತವೆ

**ಕಳ್ಳಿ ಕುರುಚಲು ಗಿಡಗಳನ್ನೊಳಗೊಂಡ ಸಸ್ಯಾವರಣ** ಇಂತಹ ಸಸ್ಯಾವರಣವು ರಾಜ್ಯದ ಉತ್ತರ ಮೈದಾನ ಪ್ರದೇಶ ಮತ್ತು ದಕ್ಷಿಣ ಮೈದಾನ ಪ್ರದೇಶದ ತುಮಕೂರು ಮತ್ತು ಕೋಲಾರ ಜಿಲ್ಲೆಗಳ ಕೆಲವು ಕಡೆ ಕಂಡುಬರುತ್ತದೆ ಈ ಸಸ್ಯಾವರಣವಿರುವ ಕಡೆ ಬೀಳುವ ವಾರ್ಷಿಕ ಮಳೆಯ ಪ್ರಮಾಣ ಬಹಳ ಕಡಿಮೆ ಇದ್ದು ಸಾಧಾರಣವಾಗಿ 50-75 ಸೆ ಮೀ ಇರುತ್ತದೆ ಇಲ್ಲಿ ವರ್ಷದ 6 ತಿಂಗಳು ಬೇಸಿಗೆಯ ಒಣಹವೆಯಿಂದ ಕೂಡಿರುತ್ತದೆ ಸಣ್ಣಸಣ್ಣ ಗಿಡ-ಗಂಟೆಗಳು ಮುಳ್ಳಿನಗಿಡಗಳು, ಕುರುಚಲು ಗಿಡಗಳು

ಇಲ್ಲಿ ಸಾಮಾನ್ಯವಾಗಿರುತ್ತವೆ ಇಲ್ಲಿ ಬೆಳೆಯುವ ಮರಗಳು ಅಷ್ಟೇನೂ ಎತ್ತರವಾಗಿರುವುದಿಲ್ಲ, ಸರಾಸರಿ ಎತ್ತರ 6-15 ಮೀ. ಇರುತ್ತದೆ, ಇಲ್ಲಿ ಬೆಳೆಯುವ ಮರಗಳಲ್ಲಿ ಹುಣಸೆ, ಆಲ, ಬಿಲ್ವಪತ್ರೆ, ಬೇಲ, ಬೇವು, ಜ್ಯಾಲರಿ, ಬಿಳಿಜಾಲಿ, ಬನ್ನಿಮರ, ನುಂಕತ್ತಿ ಮುಂತಾದವುಗಳು, ಎಕ್ಕ, ಕಾರೆಗಿಡ, ಲಾಂಟಾನ, ಪಾಪಾಸ್ ಕಳ್ಳಿ, ಕೋಲ್ ಗಳ್ಳಿ, ಕಾಡುಮೆಣಸಿನಗಿಡ ಅಂದರು ಗಿಡಗಳಂತಹ ಪೊದರುಗಿಡಗಳು ಮತ್ತು ಕರಿಹಂಬು, ಗುಲಗಂಜಿ, ಸೀಗೆ, ಶತಾವರಿ ಮುಂತಾದ ಬಳ್ಳಿಗಿಡಗಳು ಮುಖ್ಯವಾದವುಗಳು ಇವುಗಳಲ್ಲದೆ ನಾನಾಬಗೆಯ ಹುಲ್ಲುಗಳೂ ಕಂಡುಬರುತ್ತವೆ

[* ಕಡಲಂಚಿನ ಸಸ್ಯಾವರಣವನ್ನು ಹೊರತುಪಡಿಸಿ, ಉಳಿದ ಬಗೆಯ ಸಸ್ಯಾವರಣವನ್ನು ಆಯಾ ಬಗೆಯ ಕಾಡುಗಳೆಂಬುದಾಗಿಯೂ ಔಷಧಿಯ ಸಸ್ಯಗಳನ್ನು ಪರಿಚಯಿಸುವಾಗ ಪ್ರಸ್ತುತ ಮಾಲಿಕೆಯಲ್ಲಿ ಕೆಲವು ಕಡೆ ಬಳಸಲಾಗಿದೆ ]





ಚಿತ್ರ 6 ಅಗಸೆ-ಹೂ ಇರುವ ರೆಂಬೆ

# ಅಗಸೆ

| | |
|---|---|
| ವೈಜ್ಞಾನಿಕ ಹೆಸರು | ಸೆಸ್‌ಬಾನಿಯ ಗ್ರಾಂಡಿಫ್ಲೊರ (Sesbania grandiflora (L ) Pers ) |
| ಸಸ್ಯದ ಕುಟುಂಬ | ಫ್ಯಾಬೇಸಿ (Fabaceae) |
| ಕನ್ನಡದ ಇತರ ಹೆಸರುಗಳು | ಅಗಚೆ, ಚೊಗಚೆ, ವಕ್ರಪುಷ್ಪಿ |
| ಇತರ ಭಾಷೆಯ ಹೆಸರುಗಳು | ಸಂ -ಅಗಸ್ತ್ಯ, ಮುನಿ, ಮುನಿತರು, ವಕ್ರಪುಷ್ಪಿ, ವ್ರನಾತಿ, ಬುಕ<br>ಹಿಂ -ಅಗಸ್ತ್ಯ, ಬಾಸ್ನ, ಹತಿಯ, ಹಡಗ<br>ತ -ಅಗತ್ತಿ,<br>ತೆ -ಅಗಿಸೆ, ಅನೀಸೆ, ಅವಿಸೆಚೆಟ್ಟು<br>ಇಂ -ಅಗತಿ, ಸ್ವಾಂಪ್ ಪೀ, ಸೆಸ್‌ಬಾನ್ |

**ಪರಿಚಯ**

ಈ ಮರವನ್ನು ವಿಶೇಷವಾಗಿ ವೀಳೆಯದೆಲೆ ತೋಟಗಳಲ್ಲಿ, ವೀಳೆಯದೆಲೆ ಹಂಬನ್ನು ಹಬ್ಬಿಸಲು ಆಸರೆ ಮರವಾಗಿ ಬೆಳೆಸುತ್ತಾರೆ ಮತ್ತು ಕೆಲವು ಕಡೆ ಅಲಂಕಾರಿಕ ಹೂವಿನ ಮರವಾಗಿ ಕೂಡ ಬೆಳೆಸುತ್ತಾರೆ

ಈ ಮರವು ಸುಮಾರು 20 ರಿಂದ 30 ಅಡಿಗಳಷ್ಟು ಎತ್ತರ ಬೆಳೆಯುತ್ತದೆ ಮರದ ಕಾಂಡವು ಮೃದುವಾಗಿರುತ್ತದೆ ಕಾಂಡದ ಮೇಲೆ ಸಂಯುಕ್ತ ಪರ್ಣಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ ಹೂಗಳು ದೊಡ್ಡದಾಗಿದ್ದು ಆಕರ್ಷಕವಾಗಿರುತ್ತವೆ ಅಗಸೆ ಮರದಲ್ಲಿ ಕೆಂಪು ಮತ್ತು ಬಿಳಿ ಹೂ ಬಿಡುವ ಎರಡು ಪ್ರಭೇದಗಳು ಕಂಡುಬಂದರೂ ವೈಜ್ಞಾನಿಕವಾಗಿ ಎರಡನ್ನೂ ಒಂದೇ ಎಂದು ಪರಿಗಣಿಸುತ್ತಾರೆ ಕೆಂಪು ಹೂಬಿಡುವ ಮರವು ಔಷಧಿ ತಯಾರಿಕೆಗೆ ಶ್ರೇಷ್ಠವೆಂಬ ಅಭಿಪ್ರಾಯವಿದೆ

## ಉಪಯೋಗಗಳು

1. ಅಗಸೆಮರದ ಬೇರಿನ ಚೂರ್ಣ 1/4 ರಿಂದ 3/4 ತೊಲದಷ್ಟನ್ನು ದಿವಸಕ್ಕೆ ಮೂರು ಬಾರಿ ½ ಬಟ್ಟಲು ಬೆಚ್ಚಗಿನ ನೀರಿನಲ್ಲಿ ಕದಡಿ ಕುಡಿಸುವುದರಿಂದ ಕಫಜನ್ಯ ಕೆಮ್ಮು ಕಡಿಮೆಯಾಗುತ್ತದೆ

2. ಬೇರಿನ ಗಂಧವನ್ನು ಚೇಳು, ಝುರಿ ಕಡಿದ ಜಾಗದ ಮೇಲೆ ಲೇಪಿಸುವುದರಿಂದ ವಿಷಪರಿಹಾರವಾಗುತ್ತದೆ

3. ಅಗಸೆ ಸೊಪ್ಪಿನ ರಸದಲ್ಲಿ ಮೆಣಸಿನ ಕಾಳುಗಳನ್ನು ನೆನೆಸಿಟ್ಟು ಬಿಸಿಲಿನಲ್ಲಿ ಒಣಗಿಸಬೇಕು ಇದೇ ರೀತಿ ಏಳು ಬಾರಿ ಒಣಗಿಸಿಕೊಂಡು ಇದೇ ಸೊಪ್ಪಿನ ರಸದಲ್ಲಿ ತೇಯ್ದು ಕಣ್ಣಿಗೆ ಹಚ್ಚಲು ಇರುಳುಗಣ್ಣು ವಾಸಿಯಾಗುತ್ತದೆ

4. ಅಗಸೆಸೊಪ್ಪಿನ ರಸಕ್ಕೆ ತುಪ್ಪ ಸೇರಿಸಿ ಘೃತಪಾಕ ಮಾಡಿಕೊಂಡು ಸೇವಿಸುವುದರಿಂದ ಇರುಳುಗಣ್ಣು ವಾಸಿಯಾಗುತ್ತದೆ

5. ಅಗಸೆ ಎಲೆಯ ರಸವನ್ನು 4-5 ತೊಟ್ಟು ಮೂಗಿನಲ್ಲಿ ಹಿಂಡುವುದರಿಂದ ವಿವಿಧ ಬಗೆಯ ಜ್ವರ ವಾಸಿಯಾಗುತ್ತವೆ

6. ಅಗಸೆ ಎಲೆಯ ರಸ 4-6 ಚಮಚದಷ್ಟು ತೆಗೆದುಕೊಂಡು, ಬಿಸಿನೀರಿನೊಡನೆ ನಿತ್ಯ ಎರಡು ವೇಳೆ ಒಂದು ವಾರ ಸೇವಿಸುವುದರಿಂದದ ಅಜೀರ್ಣ ಪರಿಹಾರವಾಗುತ್ತದೆ

7. ಎಲೆಯ ಕಷಾಯಕ್ಕೆ ಇಂಗು ಮತ್ತು ಸೈಂಧಲವಣ ಸೇರಿಸಿ ಕುಡಿಯುವುದರಿಂದ ಹೊಟ್ಟೆನೋವು ಪರಿಹಾರವಾಗುತ್ತದೆ

8. ಹೂವಿನ ರಸವನ್ನು ಮೂಸಿನೋಡುವುದರಿಂದ ಅತಿಯಾಗಿ ಸೋರುವ ಸಿಂಬಳ ಕಡಿಮೆಯಾಗುತ್ತದೆ

9. ಹೂವಿನ ರಸಕ್ಕೆ ಅರಿಸಿನ ಹಾಕಿ ಕಾಯಿಸಿದ ಕಷಾಯದಿಂದ ಯೋನಿ ತೊಳೆಯುವುದರಿಂದ ಯೋನಿಶೂಲೆ ನಿವಾರಣೆಯಾಗುತ್ತದೆ

10 ಅಗನೆ ಬೀಜ 1 ತೊಲ, ಗಸಗಸೆ 1 ತೊಲ, ಅಕ್ಕಿ 1 ತೊಲ ಈ ಮೂರನ್ನೂ ನೀರು ಹಾಕಿ ನುಣ್ಣಗೆ ಅರೆದು ಬಿಸಿಮಾಡಿ ಬಟ್ಟೆಯಮೇಲೆ ಲೇಪಿಸಿ ಕಟ್ಟುವುದರಿಂದ ತೊಡೆವಾಳೆ (Groin bubo) ವಾಸಿಯಾಗುತ್ತದೆ

## ಪಶುರೋಗ ಚಿಕಿತ್ಸೆಯಲ್ಲಿ

ಅಗಸೆ ಸೊಪ್ಪನ್ನು ಹಾಲಿನೊಡನೆ ಅರೆದು ದಿವಸಕ್ಕೆ ಎರಡು ಗೊಟ್ಟದಂತೆ 40 ದಿವಸ ಕುಡಿಸುವುದರಿಂದ ಗರ್ಭಸ್ರಾವದ ನಂಜು ಮತ್ತು ದೋಷ ಪರಿಹಾರವಾಗುತ್ತದೆ



# ಅಡಕಪುಟ್ಟಿನ ಗಿಡ

| | |
|---|---|
| ವೈಜ್ಞಾನಿಕ ಹಸರು | ಬೊರ್‌ಹ್ಯಾವಿಯ ಡಿಫ್ಯೂಸ (Boerhavia diffusa L ) |
| ಸಸ್ಯದ ಕುಟುಂಬ | ನಿಕ್ಟಾಜಿನೇಸಿ (Nyctaginaceae) |
| ಕನ್ನಡದ ಇತರ ಹೆಸರುಗಳು | ಅಡತಿಮಾಮಿಡಿ, ಕೊಮ್ಮೆಗಿಡ, ಗಾಯಿಮೋರೆ ಕೂಪ್ಪಲು, ಗೊನಜಾಲಿ, ನಡುಮುರುಕನ ಬಳ್ಳಿ, ಬಲವಡಿಕೆ, ಶನಾಟ, ಸನಾದಿಕ |
| ಇತರ ಭಾಷೆಯ ಹೆಸರುಗಳು | ಸಂ - ಪುನರ್ನವ, ರಕ್ತ ಪುನರ್ನವ, ಶೊತಾಗ್ನಿ<br>ಹಿಂ -ಗಧಪರ್ಣ, ಧಿಕ್ರಿ, ಬೀಶಕಪೂರ್, ಸಂತ್<br>ತ - ಮುಕ್ಕಾರತ್ತೈ<br>ತೆ -ಅಟ್ಟಡಮಾಮಿಡಿ<br>ಇಂ -ಸ್ಪ್ರೆಡಿಂಗ್ ಹಾಗ್ ವೀಡ್ |

**ಪರಿಚಯ**

ಅಡಕಪುಟ್ಟಿನ ಗಿಡವು ಸಾಮಾನ್ಯವಾಗಿ ಬೀಳು ಭೂಮಿ, ಹುಲ್ಲುಗಾವಲು ಮತ್ತು ನಾಗುವಳಿ ಜಮೀನಿನಲ್ಲಿ ಕಳೆಯಂತೆ ಬೆಳೆಯುತ್ತದೆ ಗಿಡವು ನೆಲದ ಮೇಲೆ ಹರಡಿದಂತೆ ಬೆಳೆಯುತ್ತದೆ ಕಾಂಡವು ದುಂಡಾಗಿದ್ದು ನಸುಗೆಂಪಗಿರುತ್ತದೆ ಅಂಡಾಕಾರದ ಎಲೆಗಳು ಗಿಣ್ಣಿನ ಮೇಲೆ ಅಭಿಮುಖವಾಗಿ ಜೋಡಣೆಯಾಗಿರುತ್ತವೆ ಎಲೆಗಳ ಮೇಲ್ಭಾಗ ನಸುಗೆಂಪಗಿದ್ದು ಕೆಳಭಾಗ ಬೂದು ಬಣ್ಣದಿಂದ ಕೂಡಿರುತ್ತದೆ ಗುಲಾಬಿಗೆಂಪಿನ ಹೂಗಳು ಗೊಂಚಲಾಗಿ ಎಲೆಯ ಕಂಕುಳಲ್ಲಿರುವ ಪುಷ್ಪಮಂಜರಿಯಲ್ಲಿರುತ್ತವೆ ಕೇಸರಗಳು ಹೂವಿನ ದಳಕೊಳವೆಯೊಳಗೆ ಹುದುಗಿರುತ್ತವೆ

ಅಡಕಪುಟ್ಟಿನ ಗಿಡದಲ್ಲಿ ಮತ್ತೊಂದು ಪ್ರಭೇದವಿದೆ ವೈಜ್ಞಾನಿಕವಾಗಿ ಬೊ. ಚೈನೆನ್ಸಿಸ್ (B chinensis) ಎಂದು ಕರೆಯುತ್ತಾರೆ ಈ ಗಿಡವು ಸಾಮಾನ್ಯವಾಗಿ ಬೇಲಿಯ ಹತ್ತಿರ ಹಬ್ಬಿದಂತೆ ಸ್ವಲ್ಪ ಎತ್ತರಕ್ಕೆ ಬೆಳೆಯುತ್ತದೆ ನೋಡಲು ಅಡಕಪುಟ್ಟಿನ ಗಿಡವನ್ನೇ ಎಲ್ಲಾ ವಿಧದಲ್ಲೂ ಹೋಲುತ್ತದೆ ಆದರೆ ಹೂವಿನ ಕೇಸರಗಳು ದಳಕೊಳವೆಯ ಹೊರಗೆ ಚಾಚಿಕೊಂಡಿರುತ್ತವೆ

ಅಡಕಪುಟ್ಟಿನ ಗಿಡವು ಆಯುರ್ವೇದ ವೈದ್ಯ ಪದ್ಧತಿಯಲ್ಲಿ 'ಪುನರ್ನವ' ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ ಶಾಸ್ತ್ರೀಯ ಗ್ರಂಥಗಳಲ್ಲಿ ಎರಡು ಬಗೆಯ ಪುನರ್ನವವನ್ನು ಗುರುತಿಸುತ್ತಾರೆ ಕೆಂಪು ಹೂ ಬಿಡುವ 'ರಕ್ತಪುನರ್ನವ' ಮತ್ತು ಬಿಳಿ ಹೂ ಬಿಡುವ 'ಶ್ವೇತ ಪುನರ್ನವ' ಎಂದು ಪ್ರಸ್ತುತ ಅಡಕಪುಟ್ಟಿನ ಗಿಡ ಮತ್ತು ಅದರ ಇನ್ನೊಂದು ಪ್ರಭೇದವೆರಡನ್ನೂ ರಕ್ತ ಪುನರ್ನವ ಎಂದು ಕರೆಯುತ್ತಾರೆ ಶ್ವೇತಪುನರ್ನವ ಎಂಬುದು ಮಾತ್ರ ಅಡಕಪುಟ್ಟಿನ ಜಾತಿಗೆ ಸೇರಿರದ ಮತ್ತೊಂದು ಜಾತಿಯ ಗಿಡ, ಕನ್ನಡದಲ್ಲಿ ಕೊಮ್ಮೆ ಬಿಳಿಕೊಮ್ಮೆ ಎಂದು ಕರೆಯುತ್ತಾರೆ ಇದೂ ಕೂಡ ಹಲವಾರು ಪ್ರಭೇದವನ್ನು ಹೊಂದಿದೆ ಎಲ್ಲವನ್ನು ಕೊಮ್ಮೆ ಎಂದು ಬಳಕೆಯಲ್ಲಿದ್ದರೂ ವೈಜ್ಞಾನಿಕವಾಗಿ ಟ್ರೈಯಾಂತಿಮ ಡಿಕ್ಯಾಂಡ್ರ (Trianthema decandra) ಟ್ರೈ ಪೆಂಟಾಂಡ್ರ (T pentandra), ಮತ್ತು ಟ್ರೈ ಪೋರ್ಟಲಕ್ಯಾಸ್ಟ್ರಮ್ (T portalacastrum) ಎಂದು ಗುರುತಿಸುತ್ತಾರೆ ಇವುಗಳ ಜೊತೆಗೆ ಬೋರ್‌ಹ್ಯಾವಿಯ ವರ್ಟಿಸಿಲಾಟವನ್ನು ಸೇರಿಸಿಕೊಳ್ಳುತ್ತಾರೆ ಆದರೆ ಇನ್ನು ಕೆಲವು ಆಯುರ್ವೇದ ಗ್ರಂಥಗಳಲ್ಲಿ ಬೋರ್ ಹಾವಿಯ ವರ್ಟಿಸಿಲಾಟವನ್ನು ಮಾತ್ರವೇ 'ಶ್ವೇತ ಪುನರ್ನವ' ಎಂದು ಪರಿಗಣಿಸುತ್ತಾರೆ ಬಿಳಿಕೊಮ್ಮೆಯ ಮಾಹಿತಿಯ ಬಗ್ಗೆ ಮುಂಬರುವ ಮಾಲಿಕೆಯನ್ನು ಗಮನಿಸುವುದು

ಆಯುರ್ವೇದ ಗ್ರಂಥಗಳಲ್ಲಿ ಔಷಧ ಪ್ರಯೋಗಗಳಲ್ಲಿ ಎಲ್ಲೆಲ್ಲಿ ರಕ್ತ ಮತ್ತು ಶ್ವೇತ ಪುನರ್ನವ ಎಂದು ಬಳಸಲಾಗಿದೆಯೋ ಅಲ್ಲಲ್ಲಿ ಆಯಾಯ ಮೂಲಿಕೆಗಳನ್ನೇ ಬಳಸಬೇಕು, ಕೇವಲ ಪುನರ್ನವ ಎಂದಿರುವ ಕಡೆ ಅಡಕಪುಟ್ಟಿನ ಗಿಡವನ್ನಾಗಲಿ ಅಥವ ಕೊಮ್ಮೆ ಗಿಡವನ್ನಾಗಲಿ ಬಳಸಿ ಔಷಧಿ ಮಾಡಿಕೊಳ್ಳಬಹುದು ಆಯುರ್ವೇದದಲ್ಲಿ ಬರುವ ಅಭಾವ ವರ್ಗದಲ್ಲಿ ತಿಳಿಸಿರುವಂತೆ ಶ್ವೇತಪುನರ್ನವ ದೊರೆಯದ ಪಕ್ಷದಲ್ಲಿ ರಕ್ತಪುನರ್ನವವನ್ನೇ ಅದಕ್ಕೆ ಬದಲಾಗಿ ಬಳಸಿ ಔಷಧಿ ಮಾಡಿಕೊಳ್ಳಬಹುದೆಂದೂ ಸಹ ತಿಳಿಸಲಾಗಿದೆ

## ಉಪಯೋಗಗಳು

1 ಬೇರನ್ನು ಚೂರ್ಣಮಾಡಿಕೊಂಡು ಹಸುವಿನ ತುಪ್ಪ ಸೇರಿಸಿ ಕಣ್ಣಿಗೆ ಅಂಜನದಂತೆ ಇಡುತ್ತಾ ಬಂದರೆ ನೇತ್ರರೋಗಗಳು ಗುಣವಾಗುತ್ತವೆ

2 ಅಡಕಪುಟ್ಟಿನ ಬೇರನ್ನು ತೇಯ್ದು ಹೊಟ್ಟೆಗೆ ಕುಡಿಸಿ ಬೇರಿನ ಗಂಧವನ್ನು ಕಣ್ಣಿಗೆ ಅಂಜನದಂತೆ ಇಟ್ಟು ವಿಷಜಂತುಗಳು ಕಚ್ಚಿದ ಸ್ಥಳದ ಮೇಲೆ ಲೇಪಿಸುವುದರಿಂದ ಹಾವಿನ, ಇಲಿಯ, ಮತ್ತು ಚೇಳಿನ ವಿಷ ಇಳಿಯುತ್ತದೆ ಕೆಲವರು ನಿಂಬೆರಸದಲ್ಲಿ ಈ ಬೇರನ್ನು ತ್ಕೇಯ್ದು ಉಪಯಯೋಗಿಸುತ್ತಾರೆ

3 ಬೇರಿನ ರಸ ಸುಮಾರು 14-28 ಮಿ ಲೀ ನಷ್ಟು ತಯಾರಿಸಿಕೊಂಡು ದಿವಸಕ್ಕೆ ಎರಡು ಬಾರಿ ಸೇವಿಸುವುದರಿಂದ ಜಲೋಧರ ರೋಗ ವಾಸಿಯಾಗುತ್ತದೆ

4 ಬೇರನ್ನು ಅರೆದು ತಿನ್ನಿಸುವುದರಿಂದ ರಕ್ತ ಪ್ರದರ (Dysmenorrhoea) ಗುಣವಾಗುತ್ತದೆ ಮತ್ತು ಕುಷ್ಠ ರೋಗವೂ ಸಹ ಗುಣವಾಗುತ್ತದೆ

5 ಬೇರಿನ ಗಂಧವನ್ನು ಮೈಗೆ ಲೇಪಿಸುವುದರಿಂದ ಮೈಮೇಲಿದ್ದಿರುವ ಗಂಧೆ (ದದ್ರು) ಕಡಿಮೆಯಾಗುತ್ತದೆ

6 ಸೊಪ್ಪಿನ ವಲ್ಯಮಾಡಿ ಸೇವಿಸುವುದರಿಂದ ರಕ್ತ ಶುದ್ಧಿಯಾಗುತ್ತದೆ.

7 ಗಿಡದ ಬಿಸಿಮಾಡಿದ ಕಷಾಯವನ್ನಾಗಲಿ ಅಥವಾ ಗಿಡವನ್ನು ಹೆಂಚಿನ ಮೇಲೆ ಬಾಡಿಸಿ ಬಿಸಿಯಿರುವಾಗಲೆ ಊತ ಬಂದ ಕಡೆ ಹಾಕುವುದರಿಂದ ಅಥವಾ ಪಟ್ಟು ಕಟ್ಟುವುದರಿಂದ ಊತ ಕಡಿಮೆಯಾಗುತ್ತದೆ.

8 ಅಡಕಪುಟ್ಟಿನ ಗಿಡದ ಚೂರ್ಣವನ್ನು ಹಸುವಿನ ತುಪ್ಪದೊಡನೆ ಸೇವಿಸಿದರೆ ಹೊಟ್ಟೆನೋವು ಗುಣವಾಗುತ್ತದೆ ಇದೇ ಚೂರ್ಣವನ್ನು ಅಥವಾ ಬೀಜವನ್ನು ಹಾಲು ಸಕ್ಕರೆಯೊಡನೆ ಕೆಲಕಾಲ ಉಪಯೋಗಿಸಿದರೆ ಬಲ ವೀರ್ಯ ವೃದ್ಧಿಯಾಗುತ್ತದೆ

9 ನಾಯಿ ಕಡಿದವರಿಗೆ ಅಡಕಪುಟ್ಟಿನ ಗಿಡದ ಸ್ವರಸವನ್ನು ಕುಡಿಸುತ್ತಾರೆ.



# ಅಣ್ಣೆ ಸೊಪ್ಪು

| | |
|---|---|
| ವೈಜ್ಞಾನಿಕ ಹೆಸರು | ಸಿಲೋಶಿಯ ಅರ್ಜೆಂಶಿಯ<br>(Celosia argentea L ) |
| ಸಸ್ಯದ ಕುಟುಂಬ | ಅಮರಾಂಥೇಸಿ (Amaranthaceae) |
| ಕನ್ನಡದ ಇತರ ಹೆಸರುಗಳು | ಅನ್ನೆಸೊಪ್ಪು, ಖಡಕತಿರಾ, ಹಣ್ಣೆಸೊಪ್ಪು |
| ಇತರ ಭಾಷೆಯ ಹೆಸರುಗಳು | ಸಂ-ವಿತುನ<br>ಹಿಂ -ಸಫೇದ್ ಮೂರ್ಘ, ಸರ್ವಾರಿ<br>ತ -ವನ್ನೈ<br>ತೆ -ಗುರುಗು, ಗುಲುಗ್ ಕುರ, ಪಂಚಿಚೆಟ್ಟು<br>ಇಂ -ವೈಟ್ ಸ್ಪೈಕ್ಡ್ ಕೂಂ, ವೈಟ್-ಕಾಕ್ಸ್-ಕೂಂ |

## ಪರಿಚಯ

ಈ ಮೂಲಿಕೆಯು ಹುಲ್ಲು ಗಾವಲಿನಲ್ಲಿ, ಬೀಳು ಭೂಮಿಯಲ್ಲಿ ಬೆಳೆಯುತ್ತದೆ ರಾಗಿಯ ಹೊಲದಲ್ಲಿ ಕಳೆಯಂತೆ ಬೆಳೆಯುತ್ತದೆ ಈ ಗಿಡವನ್ನು ಸೊಪ್ಪು ತರಕಾರಿಯಂತೆ ಬಳಸುತ್ತಾರೆ ಇದು 1-3 ಅಡಿ ಎತ್ತರ ಬೆಳೆಯುತ್ತದೆ ಕಾಂಡವು ವಿರಳವಾಗಿ ಕವಲೊಡೆದಿರುತ್ತದೆ ಸರಳವಾದ, ನೀಳ ಅಥವಾ ಕರ್ನೆಯಾಕಾರದ ಎಲೆಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ ಉದ್ದನೆಯ ಪುಷ್ಪಮಂಜರಿಯು ಕಾಂಡದ ತುದಿ ಮತ್ತು ಎಲೆಯ ಕಂಕುಳಲ್ಲಿರುತ್ತವೆ ಹೂಗಳು ಮೊದಲು ಕೆಂಪಾಗಿರುತ್ತವೆ ಬಲಿತಂತೆ ಬಿಳಿ ಬಣ್ಣಕ್ಕೆ ತಿರುಗುತ್ತವೆ ಹೂಗಳನ್ನು ಕಾಪಾಡುವ ಹೂಸೂಚಿಗಳು ಬೆಳ್ಳಗೆ ಹೊಳಪಿರುವ ಪೊರೆಯಂತಿರುತ್ತವೆ ಹಣ್ಣುಗಳಲ್ಲಿ ಕಪ್ಪಾದ ಹೊಳಪಿನಿಂದ ಕೂಡಿದ ಸಣ್ಣ ಬೀಜಗಳಿರುತ್ತವೆ

## ಉಪಯೋಗಗಳು

1 ಅಣ್ಣೆಸೊಪ್ಪಿನ ಬೇರನ್ನು ಅರೆದು ಕುಡಿಸುವುದರಿಂದ ಭಂಗಿಸೊಪ್ಪಿನ ಸೇವನೆಯಿಂದುಂಟಾದ ದೋಷ ಪರಿಹಾರವಾಗುತ್ತದೆ

2 ಎಲೆಯ ರಸ, ಕಷಾಯ ಅಥವಾ ಚೂರ್ಣ ಸೇವನೆಯಿಂದ ಪಿತ್ತಕೋಶ (ಲಿವರ್) ಬಲಗೊಳ್ಳುತ್ತದೆ ಹಾಗೂ ಗೊನೊರ್ರಿಯು ರೋಗವೂ ವಾಸಿಯಾಗುತ್ತದೆ

3 ಬೀಜಗಳನ್ನು ಅರೆದು ಕುಡಿಸಿದರೆ ಭೇದಿ ನಿಲ್ಲುತ್ತದೆ

4 ಬೀಜದ ಚೂರ್ಣ ಅಥವಾ ಬೀಜಗಳನ್ನು ಅರೆದು ಸೇವಿಸುವುದರಿಂದ ವೀರ್ಯವೃದ್ಧಿಯಾಗುತ್ತದೆ

5 ಬೀಜವನ್ನು ಅರೆದು ಗಂಧ ಮಾಡಿಕೊಂಡು ಕಣ್ಣಿಗೆ ಕಣ್ಕಪ್ಪಿನಂತೆ ಹಚ್ಚುವುದರಿಂದ ಕಣ್ಣಿನ ರೋಗಗಳು ವಾಸಿಯಾಗುತ್ತವೆ



# ಅಮೃತಬಳ್ಳಿ

| | |
|---|---|
| ವೈಜ್ಞಾನಿಕ ಹೆಸರು | ಟಿನೊಸ್ಪೊರ ಕಾರ್ಡಿಫೊಲಿಯ (Tinospora cordifolia (Willd ) Miers ) |
| ಸಸ್ಯದ ಕುಟುಂಬ | ಮೇನಿಸ್ಪರ್ಮೇಸಿ (Menispermaceae) |
| ಕನ್ನಡದ ಇತರ ಹೆಸರುಗಳು | ಕಾಡುಹಾಕು ಕಾರೇ, ಗುಡೂಚಿ, ಮಧುಪರ್ಣಿ, ಮಧುಪರ್ಕ |
| ಇತರ ಭಾಷೆಯ ಹೆಸರುಗಳು | ಸಂ -ಅಮೃತ, ಗುಡೂಚಿ, ಮಧುಪರ್ಣಿ, ವತ್ಸಾದನಿ, ಛಿನ್ನರುಹಾ, ತಂತ್ರಿಕಾಮೃತ, ಜೀವಂತಿಕಾ, ಸೋಮವಲ್ಲಿ, ವಿಶಲ್ಯಾ<br>ಹಿಂ - ಗಿಲೊಯ, ಗುಡಿಚ, ಗುಲಂಚ<br>ತ - ಅಮುದಂ, ಅಮೃತವಳ್ಳಿ, ಸಿಂದಾಲ್<br>ತೆ - ಗುಡುಚಿ, ಸೊಮಿಡ<br>ಇಂ - ಹಾರ್ಟ ಲೀವ್ಡ್ ಮೂನ್ ಸೀಡ್, ಗುಲಂಚ ಟಿನೊಸ್ಪೊರ |

**ಪರಿಚಯ**

ಅಮೃತವಳ್ಳಿಯು ಇತರೆ ಬಳ್ಳಿಗಿಡಗಳಂತೆ ಸಾಮಾನ್ಯವಾಗಿ ಕಂಡುಬರುವುದಿಲ್ಲ ಅಪರೂಪವಾಗಿ ಕಂಡುಬರುವ ಈ ಬಳ್ಳಿಯು ಉಷ್ಣವಲಯದ ಭಾಗಶಃ ನಿತ್ಯ ಹರಿದ್ವರ್ಣ ಸಸ್ಯಾವರಣ, ಬೇಸಿಗೆಯಲ್ಲಿ ಎಲೆಯುದುರುವ ಮಲೆನಾಡಿನ ಸಸ್ಯಾವರಣ, ಬೇಸಿಗೆಯಲ್ಲಿ ಎಲೆಯುದುರುವ ಮೈದಾನ ಸೀಮೆಯ ಒಣ ಸಸ್ಯಾವರಣ ಮತ್ತು ಕಳ್ಳಿ ಕುರುಚಲು ಗಿಡಗಳೊನ್ನೊಳಗೊಂಡ ಸಸ್ಯಾವರಣಗಳಲ್ಲಿ ಅಲ್ಲಲ್ಲಿ ಪೊದೆಗಿಡಗಳ ಮೇಲೆ ಹಬ್ಬಿ ಬೆಳೆಯುತ್ತದೆ ಬೇಸಿಗೆಯಲ್ಲಿ ಬಳ್ಳಿಯ ಎಲೆಗಳು ಉದುರಿಹೋಗುತ್ತವೆ ಹೃದಯಾಕಾರದ ಹೊಳಪಿನ ಎಲೆಗಳು ಬಳ್ಳಿ ಕಾಂಡದ ಮೇಲೆ ಪರ್ಯಾಯವಾಗಿ

ಜೋಡಣೆಯಾಗಿರುತ್ತವೆ ಅಂತ್ಯಾರಂಭಿ ಪುಷ್ಪಮಂಜರಿಯಲ್ಲಿ ಬಿಳುವಾದ ಏಕಲಿಂಗ ಹೂಗಳಿರುತ್ತವೆ ದುಂಡನೆಯ ಕಾಯಿಗಳು ಹಣ್ಣಾದಾಗ ಕೆಂಪಗಾಗುತ್ತವೆ

ಇತ್ತೀಚೆಗೆ ಈ ಗಿಡವನ್ನು ಕೆಲವರು ಅಲಂಕಾರಿಕ ಬಳ್ಳಿ ಗಿಡವಾಗಿ ಮನೆಯಂಗಳದಲ್ಲಿ ಬೆಳೆಸುತ್ತಿದ್ದಾರೆ

## ಉಪಯೋಗಗಳು

1 ಅಮೃತ ಬಳ್ಳಿಯ ಘನಕ್ವಾಥ (Condenced decoction) ಅಥವಾ ಕಾಷಾಯ ಸೇವನೆಯಿಂದ ಮಧುಮೇಹ ರೋಗ ಹತೋಟಿಗೆ ಬರುತ್ತದೆ

2 ಅಮೃತ ಬಳ್ಳಿಯ ಚೂರ್ಣ, ಕಷಾಯ, ಸತ್ವ ಮುಂತಾದವು ಆಯುರ್ವೇದ ಗ್ರಂಥಗಳಲ್ಲಿ ಒಂದು ಉತ್ತಮವಾದ ಕಾಯಕಲ್ಪ (Rejuvenater) ಔಷಧ ಎಂದು ಪರಿಗಣಿಸಲ್ಪಟ್ಟಿದೆ

3 ಅಮೃತಬಳ್ಳಿ ರಸ ಸುಮಾರು 1 $^1/_2$-2 ಚಮಚ ತೂಕ ತೆಗೆದುಕೊಂಡು ಸ್ವಲ್ಪ ಜೇನುತುಪ್ಪ ಸೇರಿಸಿ ದಿನವೂ ಬೆಳಿಗ್ಗೆ ಒಂದು ಹೊತ್ತಿನಂತೆ ಒಂದು ವಾರ ಕುಡಿಸುವುದರಿಂದ ಕಾಮಾಲೆ (Jaundice) ಗುಣವಾಗುತ್ತದೆ

4 ಅಮೃತಬಳ್ಳಿಯ ರಸ ಸುಮಾರು $^1/_2$ ತೊಲದಷ್ಟು ತೆಗೆದುಕೊಂಡು ಅದಕ್ಕೆ ಸ್ವಲ್ಪ ಜೇನುತುಪ್ಪ ಸೇರಿಸಿ ದಿವಸಕ್ಕೆ 2-3 ಸಾರಿ ಕುಡಿಸುವುದರಿಂದ ಅತಿಯಾದ ಬಾಯಾರಿಕೆ ಗುಣವಾಗುತ್ತದೆ

5 ಅಮೃತ ಬಳ್ಳಿಯ ಅಥವಾ ಎಲೆಯ ರಸ 1$^1/_4$ ತೊಲಕ್ಕೆ ಸ್ವಲ್ಪ ಸಕ್ಕರೆ ಬೆರಸಿ ದಿವಸಕ್ಕೆ ಎರಡು ವೇಳೆ, 3-5 ಕುಡಿಸುವುದರಿಂದ ರಕ್ತ ಪ್ರದರವು ಗುಣವಾಗುತ್ತದೆ

6 ಬಳ್ಳಿಕಾಂಡದ ಚೂರ್ಣವನ್ನು ಹಾಲಿನಲ್ಲಿ ಕಲಸಿ ಕುಡಿಯುವುದರಿಂದ ವೀರ್ಯವೃದ್ಧಿಯಾಗುತ್ತದೆ

7 ಸಮೂಲವನ್ನು ಅರೆದು ಮೂಳೆಮುರಿದ ಕಡೆ ಪಟ್ಟುಹಾಕಿ ಕಟ್ಟುತ್ತಾರೆ

8 ಬಳ್ಳಿಕಾಂಡದಿಂದ ಆಗತಾನೆ ತೆಗೆದ 7-14ಮಿ ಲೀ ರಸಕ್ಕೆ ಜೇನುತುಪ್ಪ ಸೇರಿಸಿ ದಿವಸಕ್ಕೆ ಎರಡುಬಾರಿ ಕುಡಿಯುವುದರಿಂದ ಕುಷ್ಠರೋಗ ವಾಸಿಯಾಗುತ್ತದೆ

9 ಬಳ್ಳಿಕಾಂಡದ ಕಷಾಯ ಸುಮಾರು 14-28 ಮಿ ಲೀ ನಷ್ಟು ತೆಗೆದುಕೊಂಡು ಅದಕ್ಕೆ 2 ಗ್ರಾಂ ಗುಗ್ಗುಲವನ್ನು ಸೇರಿಸಿ ದಿವಸಕ್ಕೆ ಎರಡು ಬಾರಿ ಕುಡಿಯುವುದರಿಂದ ಸಂದಿವಾತ (Arthritis) ಗುಣವಾಗುತ್ತದೆ

10 ಅಮೃತಬಳ್ಳಿ, ಶುಂಠಿ, ನೆಲಗುಳ್ಳವನ್ನು ಸಮಪ್ರಮಾಣದಲ್ಲಿ ತೆಗೆದುಕೊಂಡು ಚೂರ್ಣಮಾಡಿ, 2 ಚಮಚ ಚೂರ್ಣವನ್ನು 1 ಸೇರು ನೀರಿಗೆ ಹಾಕಿ ಅಷ್ಟಾವಶೇಷ ಕಷಾಯಮಾಡಿ ಅದನ್ನು ಬೆಳಗ್ಗೆ ರಾತ್ರಿ 5-6 ದಿವಸ ಕುಡಿಯುವುದರಿಂದ ವಾತಶ್ಲೇಷ್ಮ (ಫ್ಲೂ, ಇನ್ ಫ್ಲೂಯೆರ್ಜಾ) ಜ್ವರ ವಾಸಿಯಾಗುತ್ತದೆ

11 ಅಮೃತಬಳ್ಳಿಯ ರಸ 1 ತೊಲಕ್ಕೆ 1 ತೊಲ ಜೇನುತುಪ್ಪ ಸೇರಿಸಿ ನಿತ್ಯ ಬೆಳಿಗ್ಗೆ ರಾತ್ರಿ ಕುಡಿಯುವುದರಿಂದ ಶ್ಲೇಷ್ಮ ಪರಿಹಾರವಾಗುತ್ತದೆ

12 ಅಮೃತಬಳ್ಳಿ ಮತ್ತು ಒಂದೆಲಗವನ್ನು ಸಮಪ್ರಮಾಣ ತಂದು ನೆರಳಲ್ಲಿ ಒಣಗಿಸಿ ಚೂರ್ಣ ಮಾಡಿಕೊಂಡು ಹೊತ್ತಿಗೆ 2 ತೊಲ ಚೂರ್ಣ ತೆಗೆದುಕೊಂಡು ಒಂದು ಲೋಟ ನೀರಿನಲ್ಲಿ ಕಷಾಯಕ್ಕಿಟ್ಟು ಒಂದು ಚಟಾಕಿಗಿಳಿಸಿ ನಿತ್ಯ ಎರಡು ಹೊತ್ತಿನಂತೆ 20-40 ದಿವಸ ಸೇವಿಸುವುದರಿಂದ ಉನ್ಮಾದ (Hysteria) ವು ಪರಿಹಾರವಾಗುತ್ತದೆ

13 ಅಮೃತಬಳ್ಳಿ, ಆಡುಸೋಗೆ, ಜೇಷ್ಠಮಧು ಈ ಮೂರರ ಪ್ರತಿಯೊಂದನ್ನೂ $^1/_4$ ತೊಲ ಪ್ರಮಾಣ ತೆಗೆದುಕೊಂಡು ಚತುರ್ಥಾಂಶ ಕಷಾಯ ಮಾಡಿ ಇದನ್ನು ನಿತ್ಯ ನಾಲ್ಕು ಬಾರಿಯಂತೆ 2-3 ತಿಂಗಳು ಸೇವಿಸುವುದರಿಂದ ಕ್ಷಯ ವಾಸಿಯಾಗುತ್ತದೆ

14 ಅಮೃತಬಳ್ಳಿಯ ಎಲೆ ಅಥವಾ ಕಾಯಿಯ ರಸವನ್ನು ನಿತ್ಯ ರಾತ್ರಿ ಮುಖಕ್ಕೆ ಲೇಪಿಸಿ ಬೆಳಿಗ್ಗೆ ತೊಳೆಯುವ ಪದ್ಧತಿಯನ್ನು ರೂಡಿಸಿಕೊಂಡರೆ ಮುಖದ

ಕಾಂತಿ ಹೆಚ್ಚಾಗುತ್ತದೆ

15 ಅಮೃತಬಳ್ಳಿಯ ರಸ 2-3 ಮಿ.ಲೀ.ನಷ್ಟನ್ನು ಜೇನುತುಪ್ಪದೊಡನೆ ಸೇವಿಸಿ ಉದ್ದಿನಕಾಳಿನ ಕಟ್ಟಿನ ಸಾರು ಅನ್ನ ಊಟಮಾಡುವುದರಿಂದ ತೊನ್ನು ನಿವಾರಣೆಯಾಗುತ್ತದೆ. ಈ ಚಿಕಿತ್ಸೆಯನ್ನು ಬಿಡದೆ ಹಲವು ತಿಂಗಳು ಅನುಸರಿಸಬೇಕಾಗುತ್ತದೆ

**ಪಶುರೋಗ ಚಿಕಿತ್ಸೆಯಲ್ಲಿ**

ಅಮೃತ ಬಳ್ಳಿಯ ಸಮೂಲವನ್ನು ಕುಟ್ಟಿ 1 ಲೀಟರ್ ನಷ್ಟು ರಸ ಮಾಡಿಕೊಂಡು ಹಾವು ಕಡಿದಾಗ ಸ್ವಲ್ಪ ರಸವನ್ನು ಕಡಿದ ಜಾಗದ ಮೇಲೆ ಲೇಪಿಸಿ ಉಳಿದ ರಸವನ್ನು ಕುಡಿಸುತ್ತಾರೆ



# ಅರಳಿಮರ (ಅಶ್ವತ್ಥ)

| | |
|---|---|
| ವೈಜ್ಞಾನಿಕ ಹೆಸರು | ಫೈಕಸ್ ರಿಲಿಜಿಯೋಸ (Ficus religiosa L ) |
| ಸಸ್ಯದ ಕುಟುಂಬ | ಮೊರೇಸಿ (Moraceae) |
| ಕನ್ನಡದ ಇತರ ಹೆಸರುಗಳು | ಅಗಿಕಿ, ಅಟ್ಟಸ, ಅತಸ, ಅರಣಿ, ಅರಯಾಲು, ಅರಿಸೆ, ಅಶ್ವೇಲ, ಒಳ್ಳೆಬಸ್ರಿ, ಪಿಪ್ಪಲಿ, ಬ್ರಹ್ಮದ್ರಾರು, ರಾಗಿಮರ, ರಾಗಿಬಸ್ರಿ |
| ಇತರ ಭಾಷೆಯ ಹೆಸರುಗಳು | ಸಂ - ಅಶ್ವತ್ಥ, ಚಲಪತ್ರ, ಪಿಪ್ಪಾಲ, ಶ್ರೀವೃಕ್ಷ<br>ಹಿಂ - ಪಿಪಾಲ<br>ತ - ಅಶ್ವತ್ಥಂ, ಅರಶಮರಂ<br>ತೆ - ಅಶ್ವತ್ಥಮು, ರಾವಿ, ರಾವಿಚೆಟ್ಟು<br>ಇಂ - ಪೀಪಲ್ ಟ್ರೀ, ಸೇಕ್ರೆಡ್ ಅಶ್ವತ್ಥ, ಸೇಕ್ರೆಡ್ ಫಿಗ್ |

## ಪರಿಚಯ

ಅರಳಿ ಅಥವಾ ಅಶ್ವತ್ಥ ಸರ್ವರಿಗೂ ಚಿರಪರಿಚಿತವಾದ ಮರ ಈ ಮರದಲ್ಲಿ ತ್ರಿಮೂರ್ತಿಗಳು ನೆಲೆಸಿರುತ್ತಾರೆಂಬ ನಂಬಿಕೆಯಿಂದ ಮರವನ್ನು ಪೂಜಿಸುತ್ತಾರೆ ಹಾಗೆಯೇ ಅರಳಿಮರದ ಬುಡದಲ್ಲಿ ನಾಗರ ಶಿಲೆಯನ್ನು ಸ್ಥಾಪನೆ ಮಾಡಿ ಪೂಜೆಸಲ್ಲಿಸುತ್ತಾರೆ ಅರಳಿ ಕಟ್ಟಿಗೆಯನ್ನು ಹೋಮ ಕಾರ್ಯಕ್ಕೆ ಬಳಸುತ್ತಾರೆ ಈ ಮರವು ಸಾಮಾನ್ಯವಾಗಿ ದೇವಾಲಯಗಳ ಸಮೀಪ ಕಂಡುಬರುತ್ತದೆಯಾದರೂ ಇದನ್ನು ಸಾಲು ಮರವಾಗಿಯೂ ಸಹ ಬೆಳೆಸುತ್ತಾರೆ.

ಅರಳಿ ಮರವು 30 ರಿಂದ 100 ಅಡಿಗಳಷ್ಟು ಎತ್ತರ ಬೆಳೆಯುತ್ತದೆ ಮರದ ಚಿಗುರೆಲೆಗಳು ತಾಮ್ರವರ್ಣಕ್ಕಿರುತ್ತವೆ ಬಲಿತಂತೆ ಹಸಿರಾಗುತ್ತವೆ ಎಲೆಗಳು ಹೃದಯಾಕಾರವಾಗಿದ್ದು ಅವುಗಳ ತುದಿ ಉದ್ದವಾಗಿರುತ್ತವೆ

## ಉಪಯೋಗಗಳು

1 ಒಣಗಿದ ಅರಳಿ ಮರದ ಚಕ್ಕೆಯನ್ನು ಹೊತ್ತಿಸಿ ಅದು ಉರಿಯುತ್ತಿದ್ದಾಗ, ಪಾತ್ರೆಯಲ್ಲಿಟ್ಟುಕೊಂಡಿರುವ ತಣ್ಣೀರಿನಲ್ಲಿ ಅದ್ದಿ ನೀರನ್ನು ಮಾತ್ರ ಶೋಧಿಸಿಕೊಂಡು ಆಗಾಗ ಸ್ವಲ್ಪ ಕುಡಿಯುವುದರಿಂದ ಜ್ವರದಲ್ಲಿ ಬರುವ ಅತಿಯಾದ ಬಿಕ್ಕಳಿಕೆ ಕಡಿಮೆಯಾಗುತ್ತದೆ ಈ ಔಷಧ ಸೇವನೆಯಿಂದ ವಾಂತಿಯೂ ನಿಲ್ಲುತ್ತದೆ

2 ಅರಳಿಮರದ ಚಕ್ಕೆಯನ್ನು ಸುಟ್ಟು ಬೂದಿ ಮಾಡಿಕೊಂಡು, ವಾಂತಿ, ವಾಕರಿಕೆ ಕಾಣಿಸಿಕೊಂಡಾಗ ಸ್ವಲ್ಪ ನೀರಿಗೆ ಬೆರಸಿ ಕುಡಿಸಬೇಕು

3 ಅರಳಿಮರದ ತೊಗಟೆಯ ನಯವಾದ ಚೂರ್ಣವನ್ನು, ಬೆಂಕಿ, ಬಿಸಿಯಾದ ಎಣ್ಣೆ, ನೀರು ಬಿದ್ದು ಬೆಂದ ಜಾಗದ ಮೇಲೆ ಸಿಂಪಡಿಸುತ್ತಾರೆ (ಕೆಲವರು ಅರಳಿ ಎಲೆಯನ್ನು ಸುಟ್ಟ ಬೂದಿಯನ್ನು ಎಳ್ಳೆಣ್ಣೆಯೊಡನೆ ಲೇಪಿಸುತ್ತಾರೆ )

4 ಅರಳಿಮರದ ಚಕ್ಕೆಯ ಒಳನಾರು, ಹಿಪ್ಪಲಿ, ಶುಂಠಿ ಮತ್ತು ಜೀರಿಗೆ ಇವುಗಳನ್ನು ಮೊಸರಿನೊಡನೆ ಅರೆದು ಕೊಡವುದರಿಂದ ದಾಹದಿಂದ ಕೂಡಿದ ಜ್ವರ ವಾಸಿಯಾಗುತ್ತದೆ

5 ಅರಳಿಮರದ ಚಕ್ಕೆಯ ಒಳನಾರಿನ ಕಷಾಯಮಾಡಿ ಕುಡಿಸುವುದರಿಂದ ಸಕಲ ಬಗೆಯ ಜ್ವರಗಳು ವಾಸಿಯಾಗುತ್ತವೆ

6 ಅರಳಿಮರದ ತೊಗಟೆಯ ಚೂರ್ಣ ಅಥವಾ ಕಷಾಯ ಸೇವನೆಯಿಂದ ರಕ್ತ ಮತ್ತು ಶ್ವೇತಪ್ರದರ (Leucorrhoea) ರೋಗಗಳು ವಾಸಿಯಾಗುತ್ತವೆ.

7 ಅರಳಿಮರದ ಚಕ್ಕೆಯ ಕಷಾಯ ಸೇವನೆಯಿಂದ ವಾತರಕ್ತ (ಸಂದಿವಾತ) ಶಮನವಾಗುತ್ತದೆ

8 ಅರಳಿಮರದ ಮೂರು ಎಳೆಯ ಎಲೆಯನ್ನು ತಂದು ಸಮಭಾಗ ಬೆಲ್ಲದೊಡನೆ ಅರೆದು ನಿತ್ಯ ಎರಡು ಹೊತ್ತು 2-3 ವಾರ ಸೇವಿಸುವುದರಿಂದ ಉದರ ಶೂಲೆ ನಿವಾರಣೆಯಾಗುತ್ತದೆ.

9 ಅರಳಿಮರದ ಹಾಲನ್ನು ನೋವಿರುವ ಜಾಗದ ಮೇಲೆ, ಊತವಿರುವ ಕಡೆ, ಮತ್ತು ರಕ್ತಸ್ರಾವವಾಗುತ್ತಿರುವ ಗಾಯದ ಮೇಲೆ ಹೊರಲೇಪನವಾಗಿ ಬಳಸಬಹುದು

10 ಅರಳಿ ಮರದ ಬೇರನ್ನು ಅಥವಾ ಆ ಮರದ ಮೇಲೆ ಬೆಳೆಯುವ ಬದನಿಕೆಯುನ್ನು ಶುಭದಿವಸ ತಂದು ಹಾಲಿನೊಡನೆ ಅರೆದು ಋತುಮತಿಯಾದ ಸ್ತ್ರೀಗೆ ಕುಡಿಸಿದರೆ ಗರ್ಭ ನಿಲ್ಲುತ್ತದೆ. ಎರಡನ್ನು ನೇರಿಸಿ ಹಾಲಿನಲ್ಲಿ ಅರೆದು ಬೇಕಾದರೂ ಕುಡಿಸಬಹುದು

11 ಅರಳಿಮರದ ಚೂರ್ಣ(ಬೇರು, ತೊಗಟೆ, ಫಲ, ಎಲೆ) $^1/_2$ ತೊಲೆ ತೆಗೆದುಕೊಂಡು $^1/_4$ ತೊಲ ಮುಸುಕಿನ ಜೋಳವನ್ನು ಸುಟ್ಟು ಮಾಡಿದ ಭಸ್ಮವನ್ನು ಸೇರಿಸಿ. ಈ ಎರಡರ ಜೊತೆಗೆ $^1/_2$ ತೊಲ ಸಕ್ಕರೆ ಕೂಡಿಸಿ ನಿತ್ಯ ಎರಡು ಹೊತ್ತು 14-21 ದಿವಸ ತಿಂದು ಮೇಲೆ ನೀರು ಕುಡಿಯುವುದರಿಂದ ಮೂಲವ್ಯಾಧಿ (Piles) ನಿವಾರಣೆಯಾಗುತ್ತದೆ

12 ಅರಳಿಮರದ ಕಾಯಿಗಳನ್ನು ತಂದು ಬಿಸಿಲಿನಲ್ಲಿ ಒಣಗಿಸಿ ಚೂರ್ಣಮಾಡಿಕೊಂಡು ಹೊತ್ತಿಗೆ $^1/_4$ ರಿಂದ $^1/_2$ ತೊಲೆ ಚೂರ್ಣ ತೆಗೆದುಕೊಂಡು ನೀರಿನೊಡನೆ ಸೇವಿಸಬೇಕು ದಿವಸಕ್ಕೆ 3 ಬಾರಿಯಂತೆ 20-40 ದಿವಸ ಸೇವಿಸುವುದರಿಂದ ದಮ್ಮಿನ ಕೆಮ್ಮು ನಿವಾರಣೆಯಾಗುತ್ತದೆ. ಈ ಚೂರ್ಣದೊಡನೆ ತೊಗಟೆ ಚೂರ್ಣ ಸೇರಿಸಿ ಸೇವಿಸುವುದರಿಂದ ಎಲ್ಲಾ ವಿಧವಾದ ಪ್ರಮೇಹಗಳೂ ಸಹ ನಿವಾರಣೆಯಾಗುತ್ತವೆ

13 ಅರಳಿಮರದ ಹಣ್ಣನ್ನು ತಂದು ಒಣಗಿಸಿ ಚೂರ್ಣಮಾಡಿಟ್ಟುಕೊಂಡು ಪ್ರತಿದಿವಸ ರಾತ್ರಿ 5 ಗ್ರಾಂನಷ್ಟು ಚೂರ್ಣವನ್ನು ಒಂದು ಲೋಟ ಹಾಲಿಗೆ ಸೇರಿಸಿ ಕುಡಿಯುವುದರಿಂದ ವೀರ್ಯವೃದ್ಧಿಯಾಗುತ್ತದೆ ಮತ್ತು ಶೀಘ್ರವೀರ್ಯಸ್ಖಲನವೂ ಹತೋಟಿಗೆ ಬರುತ್ತದೆ





ಚಿತ್ರ 11 ಅರಿಶಿನ ಬೂರುಗ - ಹೂ ಮತ್ತು ಕಾಯಿ

# ಅರಿಸಿನ ಬೂರುಗ

| | |
|---|---|
| ವೈಜ್ಞಾನಿಕ ಹೆಸರು | ಕಾಕ್ಲೊಸ್ಪರ್ಮಂ ರಿಲಿಜಿಯೋಸಂ (Cochlospermum religiosum L ) = ಕಾ. ಗಾಸಿಪಿಯಂ (=C gossypium DC ,) |
| ಸಸ್ಯದ ಕುಟುಂಬ | ಕಾಕ್ಲೊಸ್ಪರ್ಮೇಸಿ (Cochlospermaceae) |
| ಕನ್ನಡದ ಇತರ ಹೆಸರುಗಳು | ಕಾಡುಬೂರುಗ, ಗಣೇರಿ, ಗಾಪ್ಲಿ, ಬಲುವರಿ, ಮರ್‌ಗಾಡೆ, ಹೂಗಾರ |
| ಇತರ ಭಾಷೆಯ ಹೆಸರುಗಳು | ಸಂ - ಪೀತ ಶಾಲ್ಮಲಿ<br>ಹಿಂ - ಕತೀರಗೊಂಡ್, ಕುಂಬಿ, ಗಜಿರಕುಂಬಿ, ಪಿಲಿತವಸ್<br>ತ - ಕಾಟ್ಟಿಲವನ್, ತನಕ್ಕುಮರಂ<br>ತೆ - ಅಡವಿಬೂರುಗ, ಕೊಂಡುಗೂಗು, ಪಿಸುನ<br>ಇಂ - ಗೋಲ್ಡನ್ ಸಿಲ್ಕ ಕಾಟನ್, ಯಲ್ಲೊಫ್ಲವರ್ಡ್ ಕಾಟನ್ |

**ಪರಿಚಯ**

ಮೂಲತಃ ಭಾರತವಾಸಿಯಾದ ಈ ಮರವು ಕರ್ನಾಟಕದಲ್ಲಿ ಬೇಸಿಗೆಯಲ್ಲಿ ಎಲೆಯುದುರುವ ಮಲೆನಾಡಿನ ಸಸ್ಯಾವರಣ, ಬೇಸಿಗೆಯಲ್ಲಿ ಎಲೆಯುದುರುವ ಮೈದಾನ ಸೀಮೆಯ ಒಣ ಸಸ್ಯಾವರಣ, ಮುಂತಾದ ಬಗೆಯ ಸಸ್ಯಾವರಣದಲ್ಲಿ ಬೆಳೆಯುತ್ತದೆ ಕೆಲವು ಕಡೆ ಈ ಮರವನ್ನು ಅಲಂಕಾರಿಕ ಹೂವಿನ ಮರವಾಗಿಯೂ ಸಹ ಬೆಳೆಸಲಾಗುತ್ತಿದೆ ಈ ಮರದಲ್ಲಿನ ಎಲೆಗಳು ಬೇಸಿಗೆ ಆರಂಭವಾಗುತ್ತಿದ್ದಂತೆ ಉದುರಿಹೋಗಿ ಮಾರ್ಚ ವೇಳೆಗೆ ಹೊಂಬಣ್ಣದ ಹೂಗಳಿಂದ ತುಂಬಿ ಆಕರ್ಷಕವಾಗಿರುತ್ತದೆ. ಎಲೆಗಳು ಹೃದಯಾಕಾರವಾಗಿರುತ್ತವೆ

ಮತ್ತು ಅವುಗಳಲ್ಲಿ ಎಳುಪತ್ರನರಗಳಿರುತ್ತವೆ ಎಲೆಗಳ ಕೆಳಭಾಗದಲ್ಲಿ ಮೃದುವಾದ ತುಪ್ಪಳವಿರುತ್ತದೆ ಕಾಯಿಯೊಳಗಿನ ಬೀಜಗಳ ಸುತ್ತ ಮೃದುವಾದ ಹತ್ತಿಯಿರುತ್ತದೆ.

## ಉಪಯೋಗಗಳು

1 ಎಲೆಯ ರಸದಿಂದ ತಲೆತೊಳೆಯುವುದರಿಂದ ತಲೆತಂಪಾಗುತ್ತದೆ

2 ಗೋಂದನ್ನು (ಬಂಕೆ) ಮಜ್ಜಿಗೆಯೊಡನೆ ಸೇವಿಸುವುದರಿಂದ ಭೇದಿ, ರಕ್ತಭೇದಿ ನಿಲ್ಲುತ್ತದೆ.

3 ಗೋಂದನ್ನು (ಬಂಕೆ) ನೀರಿನಲ್ಲಿ ಕಲಸಿ ಗಂಟಲಿಗೆ ಹಾಕಿ ಗಳಗಳ ಮಾಡುವುದರಿಂದ ಕೆಮ್ಮು ಮತ್ತು ಗಂಟಲದೋಷ ವಾಸಿಯಾಗುತ್ತದೆ.

4 ಎಲೆಯು ಮತ್ತು ಹೂವಿನ ಚೂರ್ಣವನ್ನು ಸೇವಿಸುವುದರಿಂದ ಉತ್ತೇಜನಕಾರಿಯಂತೆ (Stimulents) ಕೆಲಸಮಾಡುತ್ತದೆ

5 ಹೂವನ್ನು ಎಳ್ಳೆಣ್ಣೆಯೊಡನೆ ಸೇರಿಸಿ ತಯಾರಿಸಿದ ತೈಲವು ಕೂದಲಿಗೆ ವರ್ಣಕಾರಿ.



# ಅಶೋಕ ವೃಕ್ಷ

| | |
|---|---|
| ವೈಜ್ಞಾನಿಕ ಹೆಸರು | ಸರಾಕ ಅಸೊಕ<br>(Saraca asoca (Roxb ) de Wılde)<br>= ಸರಾಕ ಇಂಡಿಕ<br>(= S ındıca auct non L ) |
| ಸಸ್ಯದ ಕುಟುಂಬ | ಸಿಸಾಲ್‌ಪಿನಿಯೇಸಿ (Caesalpınıaceae) |
| ಕನ್ನಡದ ಇತರ ಹೆಸರುಗಳು | ಅಕ್ಷತ, ಅಚಂಗೆ, ಅಸುಗೆ, ಕಂಕೆಲ್ಲಿ, ಕುಸ್ಗೆ, ಗಂಧಪುಷ್ಪಿ, ಜಾಸುಂಡಿ |
| ಇತರ ಭಾಷೆಯ ಹೆಸರುಗಳು | ಸಂ - ಅಶೋಕ, ಕಂಕೇಲಿ, ವಕುಳ ವೃಕ್ಷ ವಂಜುಲ<br>ಹಿಂ - ಅಶೋಕ್<br>ತ - ಅಸೋಗಂ, ಅಸೋಗು, ಅನಗಂ<br>ತೆ - ಅಶೋಕ್, ಕಂಕೇಲಿ<br>ಇಂ - ಅಶೋಕ ಟ್ರೀ |

**ಪರಿಚಯ**

ಈ ಮರವು ಮಲೆನಾಡಿನ ನಿತ್ಯ ಹರಿದ್ವರ್ಣ ಸಸ್ಯಾವರಣದಲ್ಲಿ ವಿಶೇಷವಾಗಿ ಬೆಳೆಯುತ್ತದೆ. ಅರಣ್ಯ ಮತ್ತು ತೋಟಗಾರಿಕೆ ಇಲಾಖೆಯವರು ಇತ್ತೀಚೆಗೆ ರಾಜ್ಯದ ವಿವಿಧ ಭಾಗಗಳಲ್ಲಿ ಈ ಮರವನ್ನು ಸಾಲುಮರವಾಗಿ ಮತ್ತು ಅಲಂಕಾರಿಕ ಮರವಾಗಿ ಉದ್ಯಾನವನಗಳಲ್ಲಿ ಬೆಳೆಸುತ್ತಿದ್ದಾರೆ. ಅಶೋಕ ವೃಕ್ಷವು ಹಿಂದೂಗಳಿಗೆ ಪವಿತ್ರವಾದ ಒಂದು ಮರ ಈ ಮರದ ಕೆಳಗೆ ರಾವಣನಿಂದ ಅಪಹರಿಸಲ್ಪಟ್ಟ ಸೀತಾಮಾತೆ ಕುಳಿತಿದ್ದಳೆಂದು ರಾಮಾಯಣದಲ್ಲಿ ವರ್ಣಿಸಲಾಗಿದೆ ಸಿದ್ಧಾರ್ಥನು ಬುದ್ಧನಾದ ಮೇಲೆ ಪ್ರಥಮ ಉಪದೇಶವನ್ನು ಈ ಮರದ ಕೆಳಗೆ ನೀಡಿದನಂತೆ ಉತ್ತರ ಭಾರತದಲ್ಲಿ ಈ ಮರವನ್ನು ಪ್ರೇಮದ ಸಂಕೇತವೆಂದು ಪರಿಗಣಿಸುತ್ತಾರೆ ಮತ್ತು ಪ್ರತಿ ಚೈತ್ರಮಾಸದ ಹದಿಮೂರನೆ ದಿವಸ ವಿರಹಿಗಳು, ಪ್ರೇಮಿಗಳು ತಮ್ಮ ಇಷ್ಟಾರ್ಥಗಳು ಈಡೇರಲೆಂದು ಈ ಮರಕ್ಕೆ ಪೂಜೆ ಸಲ್ಲಿಸುತ್ತಾರೆ



ಚಿತ್ರ 12 ಅಶೋಕ ವೃಕ್ಷ - ಮೇಲಿನ ಚಿತ್ರ ಮರ ,
ಕೆಳಗಿನ ಚಿತ್ರ ರೆಂಬೆಯ ಮೇಲಿನ ಹೂಗೊಂಚಲುಗಳು

ಅಶೋಕ ಮರವು 20-30 ಅಡಿ ಎತ್ತರ ಬೆಳೆಯುತ್ತದೆ ಮರದಲ್ಲಿ ಸಂಯುಕ್ತ ಪತ್ರಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ ಒಂದು ಸಂಯುಕ್ತ ಎಲೆಯಲ್ಲಿ 4-5 ಜೊತೆ ಕಿರುಪತ್ರಗಳಿರುತ್ತವೆ ತೆಳ್ಳಗಿನ ಎಲೆಗಳು ಮಾವಿನ ಚಿಗುರೆಲೆಯಂತಿರುತ್ತವೆ ಈ ಮರವು ಜನವರಿ ತಿಂಗಳಿನಿಂದ ಆರಂಭಗೊಂಡು ಮೇ ತಿಂಗಳವರೆಗೂ ಹೂಗಳನ್ನು ಬಿಡುತ್ತಿರುತ್ತದೆ ಗುಂಪು ಗುಂಪಾಗಿ ಬಿಡುವ ಹೂಗಳು ಪ್ರಾರಂಭದಲ್ಲಿ ಹೊಳಪಾದ ಕಿತ್ತಳೆ ಬಣ್ಣಕ್ಕಿರುತ್ತವೆ ನಂತರ ಕೆಂಬಣಕ್ಕೆ ತಿರುಗುತ್ತವೆ ಹೂವಿನ ಕಾಲದಲ್ಲಿ ಮರ ಬಹಳ ಆಕರ್ಷಕವಾಗಿ ಕಾಣುತ್ತದೆ

## ಉಪಯೋಗಗಳು

1 ಮರದ ತೊಗಟೆಯ ಕಷಾಯ ಸೇವನೆಯಿಂದ ಅತಿಯಾದ ಮುಟ್ಟಿನ ಸ್ರಾವ ನಿಲ್ಲುತ್ತದೆ ಶ್ವೇತ ಮತ್ತು ರಕ್ತ ಪ್ರದರ ವಾಸಿಯಾಗುತ್ತದೆ. ಕಷಾಯ ಮಾಡಿಕೊಳ್ಳುವ ಕ್ರಮ ಮರದ ತೊಗಟೆ 4 ಔನ್ಸ, ಹಾಲು 4 ಔನ್ಸ ಮತ್ತು ನೀರು 16 ಔನ್ಸ ತೆಗೆದುಕೊಂಡು ಮಂದಾಗ್ನಿಯಲ್ಲಿ ಕಾಯಿಸಿ ನೀರಿನ ಅಂಶವನ್ನೆಲ್ಲ ಇಂಗಿಸಿ ಕಷಾಯ ಮಾಡಿಕೊಳ್ಳಬೇಕು ಈ ಕಷಾಯವನ್ನು 2 ಅಥವಾ 3 ನಮ ಭಾಗಮಾಡಿ 2 ಅಥವಾ 3 ಹೊತ್ತು ಮುಟ್ಟಾದ ದಿವಸ ಪ್ರಾರಂಭಿಸಿ ಮುಟ್ಟು ನಿಲ್ಲುವವರೆಗೂ ಉಪಯೋಗಿಸಬೇಕು

2 ತೊಗಟೆ ಅಥವಾ ಎಲೆಯನ್ನು ಅರೆದು ಪಟ್ಟುಕಟ್ಟುವುದರಿಂದ ಊತ ಮತ್ತು ನೋವು ಗುಣವಾಗುತ್ತವೆ

3 ತೊಗಟೆಯ ಕಷಾಯ ಸೇವನಯಿಂದ ರಕ್ತ ಶುದ್ಧಿಯಾಗುತ್ತದೆ

4 ತೊಗಟೆಯು ಚೂರ್ಣ ಸೇವನೆಯಿಂದ ರಕ್ತಮೂಲವ್ಯಾಧಿ ವಾಸಿಯಾಗುತ್ತದೆ

5 ಹೂಗಳನ್ನು ಅರೆದು ಸೇವಿಸುವುದರಿಂದ ರಕ್ತಭೇದಿ ವಾಸಿಯಾಗುತ್ತದೆ

6 ಹೂಗಳನ್ನು ಒಣಗಿಸಿ ಚೂರ್ಣಮಾಡಿ ಸೇವಿಸುವುದರಿಂದ ಮಧುಮೇಹ ಶಮನವಾಗುತ್ತದೆ

7 ಬೀಜದ ಚೂರ್ಣಸೇವನೆಯಿಂದ ಮೂತ್ರತಡೆ ಮತ್ತು ಮೂತ್ರಕೋಶದ ಕಲ್ಲು ಕರಗುತ್ತದೆ





ಚಿತ್ರ 13 · ಆಡುಮಟ್ಟದ ಬಳ್ಳಿ

# ಆಡುಮುಟ್ಟದ ಬಳ್ಳಿ

| | |
|---|---|
| ವೈಜ್ಞಾನಿಕ ಹೆಸರು | ಟೈಲೊಫೊರ ಇಂಡಿಕ (Tylophora indica (N Burman) Merrill)<br>= ಟೈ. ಆಸ್ತಮ್ಯಾಟಿಕ<br>(=T asthmatica (L f ) Wight & Arn ) |
| ಸಸ್ಯದ ಕುಟುಂಬ . | ಆಸ್ಕ್ಲಿಪಿಯಡೇಸಿ (Asclepiadaceae) |
| ಕನ್ನಡದ ಇತರ ಹೆಸರುಗಳು | ಅಂತಮೂಲ, ಆಡುಮುತ್ತಡ, ಕಿರುಮಂಜಿ |
| ಇತರ ಭಾಷೆಯ ಹೆಸರುಗಳು · | ಸಂ - ಅನಂತಮೂಲ, ಆಂತ್ರಪಾಚಕ<br>ಹಿಂ - ಅಂತಮೂಲ್, ಜಂಗ್ಲಪಿಕ್ವನ್<br>ತ. - ಪೈಪ್ಪಾಲೈ, ನಾಚೊಹೊರಪ್ಪನ್, ನಾಯ್ ಪಾಲೈ<br>ತೆ. - ಕಾಕಪಾಲ, ಕುಕ್ಕಪಾಲ, ವೆಟ್ಟಿಪಾಲ, ವೇರಿಫಲ<br>ಇಂ - ಕಂಟ್ರಿ ಇಪಿಕಾಕ್ಯುನ |

**ಪರಿಚಯ**

ಈ ಬಳ್ಳಿಯು ಬೀಳು ಭೂಮಿಯಲ್ಲಿ ಮತ್ತು ಹಾದಿಬದಿಯಲ್ಲಿ ಬೆಳೆಯುತ್ತದೆ ದುಂಡನೆಯ ಬಳ್ಳಿಕಾಂಡವು ಬೇಲಿಗಿಡಗಳ ಮೇಲೆ ಇಲ್ಲವೆ ನೆಲದ ಮೇಲೆ ಹಬ್ಬಿಬೆಳೆಯುತ್ತದೆ. ಸರಳವಾದ ಉದ್ದ-ಅಂಡಾಕಾರದ ಮತ್ತು ಸ್ವಲ್ಪ ದಪ್ಪನೆಯ ಎಲೆಗಳು ಕಾಂಡದ ಮೇಲೆ ಅಭಿಮುಖವಾಗಿ ಜೋಡಣೆಯಾಗಿರುತ್ತವೆ ಎಲೆಯ ಮೇಲ್ಭಾಗ ಹೊಳಪಿನಿಂದ ಕೂಡಿರುತ್ತದೆ ಮತ್ತು ಕೆಳಭಾಗದಲ್ಲಿ ಸೂಕ್ಷ್ಮಮೃದು ರೋಮಗಳಿರುತ್ತವೆ. ಎಲೆಯ ಕಂಕುಳಲ್ಲಿ ಛತ್ರಿಯಾಕಾರದ ಪುಷ್ಪಮಂಜರಿಯಲ್ಲಿ ಎಕ್ಕದ ಹೂವನ್ನು ಹೋಲುವ ಹಳದಿ ಬಣ್ಣದ ಹೂಗಳಿರುತ್ತವೆ ಒಂದು ಹೂತೊಟ್ಟಿನ ಮೇಲೆ ಎರಡು ಕಾಯಿಗಳು ಅಭಿಮುಖವಾಗಿ ಜೋಡಣೆಯಾಗಿರುತ್ತವೆ.

## ಉಪಯೋಗಗಳು

1 ಎಲೆ ಮತ್ತು ಬೇರನ್ನು ಅರೆದು ಕುಡಿಸುವುದರಿಂದ ಗೂರಲು, ದಮ್ಮು ಮತ್ತು ಭೇದಿ, ರಕ್ತಭೇದಿ ಶಮನವಾಗುತ್ತವೆ

(ಸೂಚನೆ ಈ ಗಿಡದ ಬೇರಿನ ಗಂಧವನ್ನು ವಾಂತಿ ಮಾಡಿಸಲು ಯೋಗ್ಯವಾದ ಶ್ವಾಸಕೋಶ ರೋಗಿಗಳಿಗೆ ಮಾತ್ರ ಬಳಸಬೇಕು )

2 ಆಡುಮುಟ್ಟದ ಸೊಪ್ಪಿನರಸ ¼ ಲೀಟರ್ ಗೆ, ಅರಿಸಿನ 20 ಗ್ರಾಂ ಮತ್ತು ಕೊಬ್ಬರಿಎಣ್ಣೆ ¼ ಲೀಟರ್ ಸೇರಿಸಿ ಜೊತೆಗೆ ಸ್ವಲ್ಪ ಬಜೆಯ ಗಂಧ ಸೇರಿಸಿ ಇಡಬೇಕು ಮರುದಿವಸ ಈ ರಸವನ್ನು ಕಾಯಿಸಿ ತೈಲಮಾಡಿ ಬಾಟಲ್ ನಲ್ಲಿ ಸಂಗ್ರಹಿಸಿಟ್ಟುಕೊಂಡು, ಪ್ರತಿದಿವಸ ಮುಖಕ್ಕೆ ಈ ಎಣ್ಣೆಯನ್ನು ಲೇಪಿಸಿ ಅರ್ಧ ಗಂಟೆಯನಂತರ ಮುಖವನ್ನು ಹೆಸರುಬೇಳೆ ಹಿಟ್ಟಿನಿಂದ ತೊಳೆದುಕೊಳ್ಳಬೇಕು ಈ ರೀತಿ ಕೆಲವು ದಿವಸ ಚಿಕಿತ್ಸೆಯನ್ನು ಅನುಸರಿಸುವುದರಿಂದ ಮುಖದಲ್ಲಿ ಮೊಡಿಮೆಗಳು ಏಳುವುದಿಲ್ಲ ಜೊತೆಗೆ ಮುಖವು ಕಾಂತಿಯುಕ್ತವಾಗುತ್ತದೆ

3 ಆಡುಮುಟ್ಟದ ಬಳ್ಳಿಯ ಬೇರಿನ ರಸ ಸುಮಾರು 15-20 ತೊಟ್ಟುಗಳನ್ನು ಹಾಲಿಗೆ ಹಾಕಿ ಕುಡಿಯಲಿಕ್ಕೆ ಕೊಟ್ಟರೆ ಪಿತ್ತಯುಕ್ತ ಕಫ ವಾಂತಿಯಾಗುವುದು

4 ಆಡುಮುಟ್ಟದ ಬಳ್ಳಿಯ ಬೇರು 1 ತೊಲ ಮತ್ತು ಎಲೆ 1 ತೊಲದಷ್ಟನ್ನು ಹಾಲಿನೊಡನೆ ಅರೆದು ಮದ್ದೀಡಾದವರಿಗೆ (ಕೈಮುಸುಕಿನ ವಿಷಕ್ಕೆ ಒಳಗಾದವರಿಗೆ) ಕುಡಿಸಿದರೆ ವಾಂತಿಯಾಗಿ ಮದ್ದು ಹೊರಬಂದು ಆರೋಗ್ಯವಂತರಾಗುತ್ತಾರೆ. ಪಥ್ಯ ಮಜ್ಜಿಗೆ ಅನ್ನ

## ಪಶುರೋಗ ಚಿಕಿತ್ಸೆಯಲ್ಲಿ

1 ಆಡುಮುಟ್ಟದ ಸೊಪ್ಪು 2 ತೊಲ, ಲಕ್ಕಿ ಸೊಪ್ಪು 1 ತೊಲ, ತುಂಬೆಸೊಪ್ಪು 2 ತೊಲ, ಹಾಲಿವಾಣದ ಸೊಪ್ಪು 2 ತೊಲ, ಕರಿಮೆಣಸು 1/2 ತೊಲ, ಬೆಳ್ಳುಳ್ಳಿ 1 ತೊಲ, ಇವುಗಳೆಲ್ಲವನ್ನು ನೀರಿನಲ್ಲಿ ಅರೆದು ದಿವಸಕ್ಕೆ ಎರಡು ಬಾರಿಯಂತೆ ಮೂರು ದಿವಸ ಕುಡಿಸಿದರೆ ಪಶುಗಳ ತಲೆದೂಗುವ ರೋಗ ವಾಸಿಯಾಗುತ್ತದೆ

2 ಬಳ್ಳಿಯನ್ನು ಹಾವು ಕಡಿದಾಗ ಉಪಯೋಗಿಸುತ್ತಾರೆ. ಚಿಕಿತ್ಸಾಕ್ರಮಕ್ಕೆ ಮುತ್ತುಗದ ಉಪಯೋಗಗಳನ್ನು ನೋಡುವುದು

3 ಆಡುಮುಟ್ಟದ ಬೇರನ್ನು ಕೆಮ್ಮು, ದಮ್ಮು ಗೂರಲಿಗೆ ಬಳಸುತ್ತಾರೆ ಚಿಕಿತ್ಸಾ ಕ್ರಮಕ್ಕೆ ಪಡವಾರದ ಉಪಯೋಗಗಳನ್ನು ನೋಡುವುದು



# ಆಡುಸೋಗೆ

| | |
|---|---|
| ವೈಜ್ಞಾನಿಕ ಹೆಸರು | ಅಧತೊಡ ಜೈಲಾನಿಕ<br>(Adhatoda zeylanica Medic )<br>= ಅ. ವಾಸಿಕ<br>(= A vasica Nees) |
| ಸಸ್ಯದ ಕುಟುಂಬ | ಅಕ್ಯಾಂಥೇಸಿ (Acanthaceae) |
| ಕನ್ನಡದ ಇತರ ಹೆಸರುಗಳು | ಅಲ್ಯೂಗೆ, ಆಡುಸೋಕದ ಗಿಡ,<br>ಎಡೆಮುತ್ತಂಡಿ ಸೊಪ್ಪು |
| ಇತರ ಭಾಷೆಯ ಹೆಸರುಗಳು | ಸಂ. - ವಾಸ, ವಾಸಕ, ಸಿಂಹಪರ್ಣಿ<br>ಹಿಂ - ಅಡಲ್ಸ, ಅಡುಲಾಸ, ಅರುಸ,<br>ವಾಸ,<br>ತ. - ಅಡದೊಡ್ಡೈ<br>ತೆ - ಅಡಸರಮು<br>ಇಂ - ಮಲಬಾರ್ ನಟ್ |

**ಪರಿಚಯ**

ನಿತ್ಯ ಹರಿದ್ವರ್ಣದ ಗಿಡವಾದ ಆಡುಸೋಗೆಯನ್ನು ಬೆಂಗಳೂರು, ಮೈಸೂರು, ಮಂಡ್ಯ ಮುಂತಾದ ಜಿಲ್ಲೆಗಳಲ್ಲಿ ಬೇಲಿ ಗಿಡವಾಗಿ ಬೆಳೆಸಲಾಗುತ್ತಿದೆ ಕೆಲವು ಕಡೆ ಈ ಗಿಡವು ಪ್ರಾಕೃತಿಕವಾಗಿ ಬೆಳೆದಿರುವುದನ್ನು ಕಾಣಬಹುದು

ಗಿಡದ ಕಾಂಡವು ಹೆಚ್ಚು ಹೆಚ್ಚಾಗಿ ಕವಲೊಡೆದು ಬೆಳೆಯುವುದರಿಂದ ಗಿಡವು ಪೊದೆಯಂತಾಗುತ್ತದೆ ಕಾಂಡವು ಬೂದು ಬಣ್ಣಕ್ಕಿದ್ದು ನಯವಾಗಿರುತ್ತದೆ ಸರಳವಾದ ಎಲೆಗಳು ಕಾಂಡದ ಮೇಲೆ ಅಭಿಮುಖವಾಗಿ ಜೋಡಣೆಯಾಗಿರುತ್ತವೆ. ಬಿಳುಪಾದ ಹೂವಿನ ದಳಗಳ ಮೇಲೆ ಅಲ್ಲಲ್ಲಿ ಕೆಂಪು ಚುಕ್ಕೆಗಳು ಮತ್ತು ಗೆರೆಗಳಿರುತ್ತವೆ

## ಉಪಯೋಗಗಳು

1 ಬೇರನ್ನು ಅರೆದು ಕೆಮ್ಮು ಇರುವ ಮಕ್ಕಳಿಗೆ ತಿನ್ನಿಸುವುದರಿಂದ ವಾಂತಿಯಾಗಿ ಕಫ ಹೊರಬಂದು ಕೆಮ್ಮು ಶಮನವಾಗುತ್ತದೆ

2 ಎಲೆಯ ರಸ 14-28 ಮಿ ಲೀ ನಷ್ಟು ತೆಗೆದುಕೊಂಡು ಅದಕ್ಕೆ ತಕ್ಕಷ್ಟು ಜೇನುತುಪ್ಪ ಅಥವಾ ಬೆಲ್ಲಸೇರಿಸಿ ದಿವಸಕ್ಕೆ 3 ಬಾರಿ ಕುಡಿಯುವುದರಿಂದ ಕೆಮ್ಮು, ಜ್ವರ, ಕ್ಷಯರೋಗಗಳು ವಾಸಿಯಾಗುತ್ತವೆ

3 ಎಲೆಯ ರಸ 14-28 ಮಿ ಲೀ ನಷ್ಟು ತೆಗೆದುಕೊಂಡು ಸ್ವಲ್ಪ ಜೇನುತುಪ್ಪ ಸೇರಿಸಿ ದಿವಸಕ್ಕೆರಡು ಬಾರಿ ಸೇವಿಸುವುದರಿಂದ ಪ್ರದರ (ಬಿಳಿಸೆರಗುರೋಗ Leucorrhoea) ಗುಣವಾಗುತ್ತದೆ

4 ಎಲೆಯ ರಸ 7-14 ಮಿ ಲೀ ನಷ್ಟು ತೆಗೆದುಕೊಂಡು ಜೇನುತುಪ್ಪ ಸೇರಿಸಿ ಎರಡು ಬಾರಿ ಸೇವಿಸುವುದರಿಂದ ರಕ್ತವಾಂತಿ ನಿಲ್ಲುತ್ತದೆ

5 ಎಲೆಯನ್ನು ಅರೆದು ಅರಿಶಿನ ಮತ್ತು ಗೋಮೂತ್ರ ಸೇರಿಸಿ ಮೈಗೆ ಲೇಪಿಸುವುದರಿಂದ ಕಜ್ಜಿ ಮತ್ತು ಸೆಕೆಗುಳ್ಳೆ ವಾಸಿಯಾಗುತ್ತದೆ

6 ಆಡುಸೋಗೆ ಎಲೆಯ ರಸ ಎರಡು ತೊಲಕ್ಕೆ ಎರಡು ಚಮಚ ಜೇನುತುಪ್ಪ ಸೇರಿಸಿ ನಿತ್ಯ ಬೆಳಿಗ್ಗೆ ರಾತ್ರಿ ಸೇವಿಸುವುದರಿಂದ ಕಫಜನ್ಯ ಪಾಂಡುರೋಗ ವಾಸಿಯಾಗುತ್ತದೆ

7 ಎಲೆಯನ್ನು ಅರೆದು ಕೀಲುನೋವು, ಊತವಿರುವ ಕಡೆ ಲೇಪಮಾಡಿದರೆ ನೋವು ಕಡಿಮೆಯಾಗುತ್ತದೆ

8 ಎಲೆಯ ಸ್ವರಸ ಅಥವಾ ಕಷಾಯ ಸೇವನೆಯಿಂದ ರಕ್ತ ಮೂಲವ್ಯಾಧಿ ಗುಣವಾಗುತ್ತದೆ ಜೊತೆಗೆ ಎಲೆಯನ್ನು ಬಿಸಿಮಾಡಿ ಮೂಲವ್ಯಾಧಿಯ ಮೊಳಕೆಯ ಮೇಲೆ ಕಾವುಟ ಕೊಡುವುದರಿಂದ ನೋವು ಶಮನವಾಗುತ್ತದೆ.

9 ಹೂವಿನ ಚೂರ್ಣ ½ - 1 ಗ್ರಾಂ ತೆಗೆದುಕೊಂಡು ತಕ್ಕಷ್ಟು ಜೇನುತುಪ್ಪ

ಅಥವಾ ಬೆಲ್ಲ ಸೇರಿಸಿ ದಿವಸಕ್ಕೆ 3 ಸಾರಿ ತಿನ್ನಿಸುವುದರಿಂದ ಮಕ್ಕಳ ಕೆಮ್ಮು ವಾಸಿಯಾಗುತ್ತದೆ

10 ಹೂವಿನ ಚೂರ್ಣ ಅಥವಾ ಕಷಾಯ ಸೇವನೆಯಿಂದ ಉರಿಮೂತ್ರ (Strangury) ಮತ್ತು ಮೂತ್ರತಡೆ (Oliguria) ಯನ್ನು ನಿವಾರಿಸುತ್ತದೆ

**(ಎಲೆಯ ರಸ ತೆಗೆಯ ಬೇಕಾದಲ್ಲಿ ಎಲೆಗಳನ್ನು ಕೆಂಡದ ಮೇಲೆ ಬಿಸಿಮಾಡಿ ಹಿಂಡಿದರೆ ರಸ ಬರುತ್ತದೆ)**





ಚಿತ್ರ 15 ಉತ್ತರಾಣಿ

# ಉತ್ತರಾಣಿ

| | |
|---|---|
| ವೈಜ್ಞಾನಿಕ ಹೆಸರು | ಅಕಿರ್‍ಯಾಂಥಸ್ ಆಸ್ಪೆರಾ (Achyranthes aspera L ) |
| ಸಸ್ಯದ ಕುಟುಂಬ | ಅಮರಾಂಥೇಸಿ (Amaranthaceae) |
| ಕನ್ನಡದ ಇತರ ಹೆಸರುಗಳು | ಉತ್ತರೇನಿ, ಕೆಂಪುಉತ್ರಾಣಿ, ಮಯೂರಕ, ಶೈಖರಿಕ |
| ಇತರ ಭಾಷೆಯ ಹೆಸರುಗಳು | ಸಂ - ಅಘತ, ಅಘಮಾರ್ಗ, ಖರಮಂಜರಿ<br>ಹಿಂ - ಚಿರ್‌ಚಿತ್ರ, ಲತ್‌ಜೀರ<br>ತ - ನಾಯುರಿವಿ, ಶಿರುಕಡಲಾಡೈ<br>ತೆ - ಅಂತಿಶ, ಅಘಮಾರ್ಗಮು, ಉತ್ತರೇಣಿ<br>ಇಂ. - ಪ್ರಿಕ್ಲಿ ಚಾಫ್ ಫ್ಲವರ್, ರಫ್ ಚಾಫ್ ಟ್ರೀ |

**ಪರಿಚಯ**

ಉತ್ತರಾಣಿ ಗಿಡವು ಬರಡು ಭೂಮಿಯಲ್ಲಿ, ಬಯಲಿನಲ್ಲಿ ಮತ್ತು ಸಾಗುವಳಿ ಜಮೀನಿನ ಬದುಗಳಲ್ಲಿ ಕವಲೊಡೆದು ನೆಟ್ಟಗೆ ಬೆಳೆಯುವ ಒಂದು ಬಹುವಾರ್ಷಿಕ ಮೂಲಿಕೆ. ಕರ್ನೆಯಾಕಾರದ ಎಲೆಗಳು ಕಾಂಡದ ಮೇಲೆ ಅಭಿಮುಖವಾಗಿ ಜೋಡಣೆಯಾಗಿರುತ್ತವೆ. ಕಾಂಡದ ತುದಿಯಿಂದ ಹೊರಡುವ ಪುಷ್ಪಮಂಜರಿಯ ದೇಟಿನ ಮೇಲೆ ತೊಟ್ಟಿಲ್ಲದ ಹೂಗಳು ಜೋಡಣೆಯಾಗಿರುತ್ತವೆ ಹೂಗಳ ಬಣ್ಣ ಕೆಲವು ಪ್ರದೇಶದಲ್ಲಿ ಬೆಳೆಯುವ ಗಿಡದಲ್ಲಿ ತಿಳಿಹಸಿರಾಗಿರುತ್ತದೆ ಇನ್ನು ಕೆಲವು ಕಡೆ ಬೆಳೆಯುವ ಗಿಡಗಳಲ್ಲಿ ನಸುಗೆಂಪಾಗಿರುತ್ತವೆ ಹೂಗಳ ಬಣ್ಣದ ಆಧಾರದ ಮೇಲೆ ಉತ್ತರಾಣಿಯನ್ನು ಬಿಳಿ ಮತ್ತು ಕೆಂಪು ಉತ್ತರಾಣಿ ಎಂಬುದಾಗಿ ಆಯುರ್ವೇದ ಗ್ರಂಥಗಳಲ್ಲಿ ಗುರುತಿಸುತ್ತಾರೆ ಪ್ರತಿ ಹೂವಿನಲ್ಲೂ

ಉದುರದೆಯಿರುವ ಮುಳ್ಳಿನಂತಹ ಹೂ ಸೂಚಿ (ಬ್ರಾಕ್ಟ್ಸ್)ಗಳಿರುತ್ತವೆ ಈ ಹೂಸೂಚಿ ಎಲೆಗಳು ಬೀಜಪ್ರಸಾರಕ್ಕೆ ನೆರವಾಗುತ್ತವೆ

## ಉಪಯೋಗಗಳು

1 ಕೆಂಪು ಉತ್ತರಾಣಿಯ* ಬೇರನ್ನು ಎಳನೀರಿನಲ್ಲಿ ಅರೆದು ಹೊತ್ತಿಗೆ 1 ತೊಲದಂತೆ ನಿತ್ಯ ಬೆಳಿಗ್ಗೆ ಒಂದು ವಾರ ಔಷಧ ಸೇವಿಸುವುದರಿಂದ ರಕ್ತಪ್ರಮೇಹ ಗುಣವಾಗುತ್ತದೆ

2 ಉತ್ತರಾಣಿ ಬೇರು ನಾಲ್ಕು ವರಹದಷ್ಟು ತೆಗೆದುಕೊಂಡು ಚೆನ್ನಾಗಿ ಅರೆದು ಅಷ್ಟೇ ಪ್ರಮಾಣದಷ್ಟು ಜೇನುತುಪ್ಪ ಸೇರಿಸಿ ತಿನ್ನಿಸುವುದರಿಂದ ನಾಯಿ ಕಡಿದ ವಿಷ ಪರಿಹಾರವಾಗುತ್ತದೆ

3 ಉತ್ತರಾಣಿಯ ಬೇರನ್ನು ಎಣ್ಣೆಯಲ್ಲಿ ಬಾಡಿಸಿ ತಿನ್ನುವುದರಿಂದ, ಬಿಳಿಸೆರಗು ಮತ್ತು ರಕ್ತ ಪ್ರದರ ವಾಸಿಯಾಗುತ್ತದೆ ಪ್ರದರದಿಂದಾಗಿ ಯೋನಿಯಲ್ಲಿ ನೋವುಂಟಾದರೆ ಉತ್ತರಾಣಿಯ ಸಮೂಲವನ್ನು ಅರೆದು ಬೆಚ್ಚಗೆ ಮಾಡಿ ಯೋನಿಯ ಮೇಲೆ ಕಟ್ಟಿದರೆ ನೋವು ಕಡಿಮೆಯಾಗುತ್ತದೆ

4 ಕೆಂಪುಉತ್ತರಾಣಿ ಬೇರು ಅಥವಾ ಸೊಪ್ಪನ್ನು ಅರೆದು ತೊಡೆವಾಳೆಗೆ ಕಟ್ಟಿದರೆ ಗಡ್ಡೆ ಕರಗಿ ಹೋಗುತ್ತದೆ

5 ಕೆಂಪುಉತ್ತರಾಣಿ ಸಮೂಲ ಅಥವಾ ಬೇರನ್ನು ಅರೆದು ಚೇಳು ಕುಟುಕಿದ ಜಾಗದಮೇಲೆ ಲೇಪಿಸಿದರೆ ನೋವು ಕಡಿಮೆಯಾಗುತ್ತದೆ

6 ಕೆಂಪುಉತ್ತರಾಣಿ ಸೊಪ್ಪು 6 ತೊಲ, ಈರುಳ್ಳಿ 12 ತೊಲ, ಇವನ್ನು ಸಣ್ಣಗೆ ಕತ್ತರಿಸಿ ತುಪ್ಪದಲ್ಲಿ ಹುರಿದು ಪ್ರತಿದಿವಸ 3-4 ಸಾರಿ ಒಂದೊಂದು ತೊಲೆಯಷ್ಟು ತಿನ್ನಬೇಕು. ಉಳಿದಷ್ಟನ್ನು ಸ್ವಲ್ಪ ಬೆಚ್ಚಗೆಮಾಡಿ ಮೂಲದ ಮೊಳಕೆಗೆ ಕಟ್ಟುವುದರಿಂದ, ಮೊಳಕೆಯಿರುವ ಮೂಲವ್ಯಾಧಿ ಕ್ರಮೇಣ ಗುಣವಾಗುತ್ತದೆ

7 ಕೆಂಪುಉತ್ತರಾಣಿ ಸೊಪ್ಪಿನ ರಸವನ್ನು 1-2 ತೊಲದಷ್ಟು ತೆಗೆದುಕೊಂಡು ಸ್ವಲ್ಪ ಹಳೇಬೆಲ್ಲ ಹಾಕಿ ದಿವಸಕ್ಕೆ ಒಂದು ಬಾರಿಯಂತೆ ಬೆಳಗಿನ ಹೊತ್ತು 5-7 ದಿವಸಗಳ ಕಾಲ ಸೇವಿಸುವುದರಿಂದ ಊದು ಪಾಂಡುರೋಗ (Anaemia) ಗುಣವಾಗುತ್ತದೆ (ಔಷಧ ಸೇವನೆಯ ಕಾಲದಲ್ಲಿ ಹಾಲು ಅನ್ನ ಪಥ್ಯವಿರಬೇಕು)

8 ಕೆಂಪುಉತ್ತರಾಣಿ ಗಿಡದ ಎಲೆಯ ರಸವನ್ನು ಉಗುರು ಬೆಚ್ಚಗಿನ ನೀರಿನೊಡನೆ ಕುಡಿಸುವುದರಿಂದ ಬಾಯಿಯಿಂದ ಅಥವಾ ದೇಹದ ಇತರ ಭಾಗದಿಂದ ರಕ್ತ ಸುರಿಯುತ್ತಿದ್ದರೆ ನಿಲ್ಲುತ್ತದೆ ಒಂದು ಹೊತ್ತಿಗೆ 2 ಚಮಚದಂತೆ, ದಿವಸಕ್ಕೆ ಎರಡು ಹೊತ್ತು 2-3 ದಿವಸ ಕುಡಿಸಬೇಕು

9 ಕೆಂಪುಉತ್ತರಾಣಿ ಸೊಪ್ಪಿನ ರಸವನ್ನು ಆಗತಾನೆ ಆದ ಗಾಯದ ಮೇಲೆ ಹಾಕಿದರೆ ರಕ್ತಸೋರುವುದು ನಿಲ್ಲುತ್ತದೆ ಮತ್ತು ಗಾಯವೂ ಗುಣವಾಗುತ್ತದೆ

10 ಕೆಂಪುಉತ್ತರಾಣಿ ಗಿಡವನ್ನು ಬೇರುಸಹಿತ ಕಿತ್ತು ಒಣಗಿಸಿ ಸುಟ್ಟು ಭಸ್ಮ ಮಾಡಿಕೊಂಡು ಒಂದು ಹೊತ್ತಿಗೆ 3-4 ಚಿಟಿಕೆ ಭಸ್ಮವನ್ನು ತಕ್ಕಷ್ಟು ಜೇನುತುಪ್ಪಕ್ಕೆ ಸೇರಿಸಿ ದಿವಸಕ್ಕೆ ಎರಡಾವರ್ತಿ ಸೇವಿಸುವುದರಿಂದ ನೆಗಡಿ ಕೆಮ್ಮು ಗುಣವಾಗುತ್ತದೆ

11 ಕೆಂಪುಉತ್ತರಾಣಿ ಗಿಡ, ಬೇರುಸಹಿತ ಸುಟ್ಟಬೂದಿ 4 ತೊಲ, ಸುಣ್ಣ 1 ತೊಲ, ಅರಿಸಿನ 1 ತೊಲ, ಇವನ್ನು ಶೋಧಿಸಿದ ಗೋಮೂತ್ರದಲ್ಲಿ ಅರೆದು ಹಚ್ಚುವುದರಿಂದ ಇಸಬು (Eczema) ಬೇಗ ಗುಣವಾಗುತ್ತದೆ

12 ಉತ್ತರಾಣಿಯ* ರಸಕ್ಕೆ ಹಿಪ್ಪಲಿ ಚೂರ್ಣ ಸೇರಿಸಿ, ಸನ್ನಿಯಾಗಿ ಮಾತನಾಡದೆ ಇದ್ದ ಸ್ಥಿತಿಯಲ್ಲಿ, ಸುಮಾರು 10 ಹನಿ ರಸವನ್ನು ಮೂಗಿಗೆ ಹಾಕಬೇಕು

13 ಉತ್ತರಾಣಿ ಸೊಪ್ಪಿನ ರಸ 2 ತೊಲ ಮತ್ತು ¼ ಸೇರು ಮೊಸರು, ಎರಡನ್ನು ಮಿಶ್ರಮಾಡಿ ಕುಡಿಸುವುದರಿಂದ ಅತಿಸಾರ ಕಡಿಮೆಯಾಗುತ್ತದೆ.

14 ಉತ್ತರಾಣಿ ತೊಪ್ಪಲನ್ನು (ಸೊಪ್ಪನ್ನು) ಗೋಮೂತ್ರದಲ್ಲಿ ಅರೆದು, ಮೈಯಲ್ಲೇಳುವ ದದ್ದಿಗೆ ಹೊರಲೇಪನವಾಗಿ ಬೆಳಿಗ್ಗೆ ಮತ್ತು ಸಂಜೆ ಹಚ್ಚಬೇಕು

15 ಉತ್ತರಾಣಿ ಸಮೂಲ ಮತ್ತು ಹುತ್ತದ ಮಣ್ಣನ್ನು ಸ್ವಲ್ಪ ನೀರಿನೊಡನೆ ಒಟ್ಟಿಗೆ ಅರೆದು ತಲೆಗೆ ಪಟ್ಟು ಹಾಕುವುದರಿಂದ ಸುಖಪ್ರಸವವಾಗುತ್ತದೆ.

16 ಉತ್ತರಾಣಿಯ ಕ್ಷಾರ 3 ತೊಲ ತೆಗೆದುಕೊಂಡು ½ ತೊಲ ಬೆಲ್ಲ ಸೇರಿಸಿ ಕುಡಿಸುವುದರಿಂದ ಮದ್ದೀಡು (ಕೈಮಸಕು) ವಾಸಿಯಾಗುತ್ತದೆ

17 ಉತ್ತರಾಣಿ ಗಿಡದ ಭಸ್ಮವನ್ನು ಮೊಳೆ ಬಂದಿರುವ ಮೂಲವ್ಯಾಧಿಯಲ್ಲಿ ಹೊರಲೇಪನವಾಗಿ ಬಳಸಿ ಸೇವಿಸುವುದರಿಂದ ಮೂಲವ್ಯಾಧಿ ಗುಣವಾಗುತ್ತದೆ.

18 ಉತ್ತರಾಣಿಯ ಪುಷ್ಪಮಂಜರಿಯ ಅಗ್ರಭಾಗವನ್ನು ಎಮ್ಮೆಯ ಹಾಲಿನೊಡನೆ ಅರೆದು ಋತುಕಾಲದಲ್ಲಿ ಕುಡಿದರೆ ಗರ್ಭ ನಿಲ್ಲುತ್ತದೆ

19 ಉತ್ತರಾಣಿ ಬೀಜ ಒಂದು ತೊಲದಷ್ಟನ್ನು ಅಕ್ಕಿತೊಳೆದ ನೀರಿನಲ್ಲಿ ಅರೆದು ಕುಡಿಸುವುದು, ದಿವಸಕ್ಕೆ ಒಂದು ವೇಳೆಯಂತೆ 7 ದಿವಸ ಕುಡಿಸುವುದರಿಂದ ರಕ್ತಮೂಲವ್ಯಾಧಿ ಹತೋಟಿಗೆ ಬರುತ್ತದೆ

## ಪಶುರೋಗ ಚಿಕಿತ್ಸೆಯಲ್ಲಿ

1 ಉತ್ತರಾಣಿ ಸೊಪ್ಪು ಮತ್ತು ಸೈಂಧಲವಣವನ್ನು ಅರೆದು ದಿವಸಕ್ಕೆ ಎರಡುಸಾರಿಯಂತೆ, ಸೂಜಿ, ದಬ್ಬಳ ಮುಂತಾದ ವಸ್ತುಗಳನ್ನು ನುಂಗಿದ ಪಶುಗಳಿಗೆ ಕೊಡುವುದು.

* ಚಿಕಿತ್ಸಾ ಕ್ರಮಗಳಲ್ಲಿ ಎಲ್ಲೆಲ್ಲಿ ಕೆಂಪು ಉತ್ತರಾಣಿಯನ್ನು ಉಪಯೋಗಿಸಬೇಕೆಂದು ಸೂಚಿಸಲಾಗಿದೆಯೋ ಅಂತಹ ಚಿಕಿತ್ಸಾ ಪ್ರಯೋಗಗಳಿಗೆ ನಸುಗೆಂಪು ಹೂಗಳನ್ನು ಬಿಡುವ ಉತ್ತರಾಣಿಯನ್ನು ಮಾತ್ರ ಉಪಯೋಗಿಸಬೇಕು, ಉಳಿದೆಡೆಗಳಲ್ಲಿ ಬಿಳಿ ಅಥವಾ ಕೆಂಪು ಉತ್ತರಾಣಿ ಗಿಡಗಳಲ್ಲಿ ಸೂಕ್ತ ಸಮಯಕ್ಕೆ ದೊರೆಯುವ ಯಾವುದಾದರೂ ಒಂದನ್ನು ಉಪಯೋಗಿಸಬಹುದು



# ಉಪ್ಪಿಮುಳ್ಳು (ಎಸಗಳೆ)

| | |
|---|---|
| ವೈಜ್ಞಾನಿಕ ಹೆಸರು | ಅಜೀಮ ಟೆಟ್ರಕ್ಯಾಂತ<br>(Azıma tetracantha Lamk ) |
| ಸಸ್ಯದ ಕುಟುಂಬ | ಸಾಲ್ವಡೊರೇಸಿ (Salvadoraceae) |
| ಕನ್ನಡದ ಇತರ ಹೆಸರುಗಳು | ಇಜಂಗು, ಉಪ್ಪುಗೋಜೆ, ಎಗಚಿ, ಎಸಗಳೆ ಮೋಟು, ಬಿಳಿಉಪ್ಪಿಗಿಡ, ಸಕಪತ, ಹುಲ್ಲು ಸುಂಡೆ |
| ಇತರ ಭಾಷೆಯ ಹೆಸರುಗಳು | ಸಂ - ಕುಂಡಲಿ,<br>ಹಿಂ - ಕಂಠಗುರ್ಕಮಣಿ, ಕಾಂಟಗೂರ್ ಕಮಾಯಿ<br>ತ - ಇಚಂಕ, ಚೆಂಗನ್ ಚೇಡಿ, ಸುಂಗಂ-ಚೇಡಿ, ನಲ್ಲೂಚೆಂಗಂ<br>ತೆ - ಉಪ್ಪಿಆಕು, ತೆಲ್ಲಉಪ್ಪಿ |

**ಪರಿಚಯ**

ಈ ಗಿಡವು ಕಳ್ಳಿ ಕುರುಚಲು ಸಸ್ಯಾವರಣದಲ್ಲಿ, ಊರಹೊರವಲಯದಲ್ಲಿ ಮತ್ತು ಪಾಳುಕೋಟೆಯ ಗೋಡೆಯ ಮೇಲೆ ಪೊದೆಯಂತೆ ಬೆಳೆಯುತ್ತದೆ ಕೆಲವು ಕಡೆಗಳಲ್ಲಿ ಇದನ್ನು ಬೇಲಿಗಿಡವಾಗಿಯೂ ಸಹ ಬೆಳೆಸುತ್ತಾರೆ. ಗಿಡದ ಪ್ರತಿ ಗಿಣ್ಣಿನಲ್ಲಿ 4 ಮುಳ್ಳುಗಳಿರುತ್ತವೆ ಮತ್ತು ಅವುಗಳ ಉದ್ದ ಸುಮಾರು 3 ಸೆ.ಮೀ. ನಷ್ಟಿರುತ್ತದೆ ಅಂಡಾಕಾರದ ಎಲೆಗಳು ಕಾಂಡದಮೇಲೆ ಅಭಿಮುಖವಾಗಿ ಜೋಡಣೆಯಾಗಿರುತ್ತವೆ. ಮಾಸಲು ಬಿಳುಪಿನ ಅತಿ ಸಣ್ಣ ಹೂಗಳು ಸಾಮಾನ್ಯವಾಗಿ ಎಲೆಯ ಕಂಕುಳಿನಲ್ಲಿರುತ್ತವೆ ಬಲಿತ ಹಣ್ಣುಗಳು ಬಿಳಿ ಮಣಿಗಳಂತಿದ್ದು ನೋಡಲು ಆಕರ್ಷಕವಾಗಿರುತ್ತವೆ ಈ ಹಣ್ಣುಗಳನ್ನು ತಿನ್ನುತ್ತಾರೆ



ಚಿತ್ರ 16 ಉಪ್ಪಿಮುಳ್ಳು - ಹೂ ಮತ್ತು ಕಾಯಿಗಳಿರುವ ರೆಂಬೆಗಳು

## ಉಪಯೋಗಗಳು

1 ಬೇರಿನ ರಸ ಅಥವಾ ಚೂರ್ಣವನ್ನು ಜೇನುತುಪ್ಪದೊಡನೆ ಕಲಸಿ ಇಲಿ ಕಡಿದವರಿಗೆ ಕುಡಿಸುತ್ತಾರೆ

2 ಬೇರನ್ನು ಅರೆದು ಅಕ್ಕಿ ತೊಳೆದ ನೀರಿನೊಡನೆ ಕುಡಿಸುವುದರಿಂದ ಅಧಿಕ ರಜಸ್ರಾವ ಕಡಿಮೆಯಾಗುತ್ತದೆ

3 ವಿಷ ಸೇವಿಸಿದಾಗ ವಾಂತಿ ಮಾಡಿಸಬೇಕಾಗಿ ಬಂದಾಗ ಬೇರನ್ನು ಅರೆದು ಬಿಸಿನೀರಿನೊಡನೆ ಕುಡಿಸುತ್ತಾರೆ

4 ಉಪ್ಪಿಮುಳ್ಳುಗಿಡದ ಬೇರು ಅಥವಾ ಕಾಂಡದ ತೊಗಟೆಯನ್ನು ಅರೆದು ಉಗುರು ಸುತ್ತಾಗಿರುವ ಬೆರಳಿಗೆ ಪಟ್ಟುಹಾಕಬೇಕು

5 ಬೇರು, ಎಲೆ ಮತ್ತು ತೊಗಟೆಯ ಕಷಾಯಕ್ಕೆ ಚೂರ್ಣಿಸಿದ ಬಜೆ, ಓಂಕಾಳು ಮತ್ತು ಉಪ್ಪು ಸೇರಿಸಿ ಕುಡಿಯುವುದರಿಂದ ಭೇದಿ ವಾಸಿಯಾಗುತ್ತದೆ.

6 ಎಲೆಯ ಚೂರ್ಣ ಸೇವನೆಯಿಂದ ವಾತ ರೋಗಗಳು ವಾಸಿ ಯಾಗುತ್ತವೆ

7 ಎಲೆಯ ಕಷಾಯ ಅಥವಾ ಚೂರ್ಣ ಸೇವನೆಯಿಂದ ಕೆಮ್ಮು ಕಡಿಮೆಯಾಗುತ್ತದೆ

8 ಉಪ್ಪಿಮುಳ್ಳು ಗಿಡದ ಸ್ವರಸ ಕುಡಿಸುವುದರಿಂದ ಪಾದರಸ ಮತ್ತು ಬಿಳಿಪಾಷಾಣ ಸೇವಿಸಿದ ನಂಜು ಪರಿಹಾರವಾಗುತ್ತದೆ

9 ಉಪ್ಪಿಮುಳ್ಳಿನ ಸೊಪ್ಪನ್ನು ಸದಾಕಾಲ ತರಕಾರಿಯಂತೆ ಬಳಸುವುದರಿಂದ ಮೂಳೆಗೆ ಸಂಬಂಧಿಸಿದ ರೋಗಗಳು ಬರುವುದಿಲ್ಲ

10 ದದ್ದು-ಗಂಧ ಎದ್ದವರಿಗ ಬೆಳಿಗ್ಗೆ - ರಾತ್ರಿ ಊಟದೊಡನೆ ಸೂಪ್ಪನ್ನು ಬೇಯಿಸಿ ತಿನ್ನಿಸಬೇಕು

## ಪಶುರೋಗ ಚಿಕಿತ್ಸೆಯಲ್ಲಿ

ಉಪ್ಪಿಮುಳ್ಳಿನ ಸೊಪ್ಪು ಮುಕ್ಕಾಲು ತೊಲ, ಬಾಗೆಮರದ ಚಕ್ಕೆ ಮುಕ್ಕಾಲುತೊಲ, ಕಾಡುಮೆಣಸಿನ ಸೊಪ್ಪು ಮುಕ್ಕಾಲು ತೊಲ, ಕರಿಮೆಣಸು ಎರಡು ತೊಲ, ಬೆಳ್ಳುಳ್ಳಿ ಒಂದು ತೊಲ ಇವುಗಳನ್ನು ಅರೆದು ಬಿಸಿನೀರಿನಲ್ಲಿ ದಿವಸಕ್ಕೊಮ್ಮೆ ಕುಡಿಸು-ವುದರಿಂದ ನರಡಿ (ಗುಲ್ಮರೋಗ) ವಾಸಿಯಾಗುತ್ತದೆ



# ಎಲೆಅಡಿಕೆ ಸೊಪ್ಪು

| | |
|---|---|
| ವೈಜ್ಞಾನಿಕ ಹೆಸರು | ಕಾರ್ಮೊನ ರೆಟುಸ<br>(Carmona retusa (Vahl) Masamune)<br>=ಎರ್ಹೀಶಿಯ ಮೈಕ್ರೊಫಿಲ್ಲ<br>(=Ehretia microphylla Lamk ) |
| ಸಸ್ಯದ ಕುಟುಂಬ | ಬೊರಾಜಿನೇಸಿ (Boraginaceae) |
| ಕನ್ನಡದ ಇತರ ಹೆಸರುಗಳು | ಎಣ್ಣೆಬುಡ್ಡಿಗಿಡ, ಕುರುವಿಂಗಿ, ಬೂತೆ, ಮಿಡಿಗುಂಡಿಗೆ |
| ಇತರ ಭಾಷೆಯ ಹೆಸರುಗಳು | ಹಿಂ - ಪಲ<br>ತ - ಕಾಟ್ಟುವೆತ್ತಿಳ್ಳೈ, ಕುರುವಿಂಗಿ<br>ತೆ. - ಬಪ್ಪಣಬುರಿ, ಬರಂಕಿ, ಬುರಿ, ಪಿಚಕಬುರಿ<br>ಇಂ - ಸಿಲೋನ್ ಬಾಕ್ಸ್‌ವುಡ್ |

**ಪರಿಚಯ**

ಸಣ್ಣ ಪೊದರಿನಂತೆ ಬೆಳೆಯುವ ಈ ಗಿಡವು ಸಾಮಾನ್ಯವಾಗಿ ಕಳ್ಳಿ ಕುರುಚಲು ಗಿಡಗಳನ್ನೊಳಗೊಂಡ ಸಸ್ಯಾವರಣದ ಬೀಳು ಭೂಮಿಯಲ್ಲಿ ಕಂಡುಬರುತ್ತದೆ ಈ ಗಿಡದ ಎಲೆಗಳನ್ನು ಬಾಯಿಗೆ ಹಾಕಿಕೊಂಡು ಚೆನ್ನಾಗಿ ಅಗಿದಾಗ, ಅಡಿಕೆ-ವೀಳ್ಯದಎಲೆ ತಿಂದಂತೆ ಬಾಯಿ ಕೆಂಪಗಾಗುವುದರಿಂದ, ಇದನ್ನು ಎಲೆ ಅಡಿಕೆಗಿಡವೆಂದು ಕರೆಯಲಾಗಿದೆಯೆಂದು ತೋರುತ್ತದೆ ಒರಟಾದ ಅಂಡಾಕಾರದ ಎಲೆಗಳು ಕಾಂಡದ ಮೇಲೆ ಪರ್ಯಾಯವಾಗಿ ಜೋಡಣೆಯಾಗಿರುತ್ತವೆ ಎಲೆಗಳ ಹೊರಮೈ ಹೊಳಪಾಗಿರುತ್ತದೆ ಎಲೆಗಳಲ್ಲಿ ಗ್ರಂಥಿಗಳಿರುತ್ತವೆ ಬಿಳಿಹೂಗಳು ಎಲೆಯ ಕಂಕುಳಲ್ಲಿರುತ್ತವೆ ದುಂಡನೆಯ ಎಳೆ ಕಾಯಿಗಳು ಹಸಿರಾಗಿದ್ದು ಬಲಿತಂತೆ ಕಂದು ಬಣ್ಣಕ್ಕೆ ತಿರುಗುತ್ತವೆ.

## ಉಪಯೋಗಗಳು

1 ಬೇರನ್ನು ಸೇವಿಸುವುದರಿಂದ ದೇಹದ ಕೆಲಸಕಾರ್ಯಗಳನ್ನು ಸುಸ್ಥಿತಿಯಲ್ಲಿಡುತ್ತದೆ, ಜೊತೆಗೆ ಇತರೆ ಆಹಾರದಿಂದುಂಟಾದ ನಂಜನ್ನೂ ಪರಿಹರಿಸುತ್ತದೆ.

2 ಎಲೆಯ ರಸಕ್ಕೆ ಕೆಂಪುಕಲ್ಲುಸಕ್ಕರೆ ಮತ್ತು ಏಲಕ್ಕಿ ಸೇರಿಸಿ ದಡಾರ (ದೊಡ್ಡಮ್ಮ)ದಿಂದ ಭೇದಿಯುಂಟಾದಾಗ ಕುಡಿಯಲು ಕೊಡುವುದರಿಂದ ಭೇದಿ ಮತ್ತು ದಡಾರ ಕಡಿಮೆಯಾಗುತ್ತದೆ



# ಅಂಕೋಲೆ

| | |
|---|---|
| ವೈಜ್ಞಾನಿಕ ಹೆಸರು | ಅಲಾಂಜಿಯಂ ಸಾಲ್ವಿಫೋಲಿಯಂ<br>(Alangium salvifolium (L f ) Wang )<br>=ಅ ಲಾಮಾರ್ಕಿ<br>(= A lamarckii Thw ) |
| ಸಸ್ಯದ ಕುಟುಂಬ | ಅಲಾಂಜಿಯೇಸಿ (Alangiaceae) |
| ಕನ್ನಡದ ಇತರ ಹೆಸರುಗಳು | ಅನ್ಕ್ರೋಲಿ, ಅಂಕೋಧ, ಕಲ್ಲುಮಾವು,<br>ಗುಡ್ಡದಗೋಣಿ |
| ಇತರ ಭಾಷೆಯ ಹೆಸರುಗಳು | ಸಂ - ಅಂಕೋಟ, ನಿಕೋಚ, ಶೋಧನಂ,<br>ಹಿ - ಅಕೋಲ, ಧೇರ<br>ತ - ಅಲಾಂಜಿ, ಅಂಕೋಲಂ, ಅಡಿಕೋವಂ<br>ತೆ - ಅಂಕೋಲಮು, ಊಡುಗಚೆಟ್ಟು, ಕುಡಗು<br>ಇಂ - ಸೇಜ್ ಲೀವ್ಡ್ ಅಲಾಂಜಿಯಂ |

**ಪರಿಚಯ**

ಅಂಕೋಲೆ ಬೇಸಿಗೆಯಲ್ಲಿ ಎಲೆಯುದುರುವ ಮಲೆನಾಡಿನ ಸಸ್ಯಾವರಣ, ಬೇಸಿಗೆಯಲ್ಲಿ ಎಲೆಯುದುರುವ ಮೈದಾನ ಸೀಮೆಯ ಒಣ ಸಸ್ಯಾವರಣ ಮತ್ತು ಕಳ್ಳಿ ಕುರುಚಲು ಗಿಡಗಳನ್ನೊಳಗೊಂಡ ಸಸ್ಯಾವರಣದಲ್ಲಿ ಬೆಳೆಯುತ್ತದೆ ಅಂಕೋಲೆಯನ್ನು ಬೇಲಿಗಿಡ ಅಥವಾ ಮರವಾಗಿ ಕೆಲವು ಕಡೆ ಬೆಳೆಸುತ್ತಿದ್ದಾರೆ ಅಂಕೋಲೆ ಸಾಮಾನ್ಯವಾಗಿ ಪೊದೆಯಂತೆ ಬೆಳೆಯುತ್ತದೆ ಆದರೆ ಕೆಲವೊಮ್ಮೆ ಚೆನ್ನಾಗಿ ಬೆಳೆದು ಸಣ್ಣ ಮರದಂತಾಗುತ್ತದೆ ಮರದ ತೊಗಟೆ ಸುಲಿದು ಉದುರಿ ಹೋಗುತಿರುತ್ತದೆ ಎಲೆಗಳು ಪರ್ಯಾಯವಾಗಿ ಜೋಡಣೆಯಾಗಿದ್ದು ಸ್ವಲ್ಪ ಒರಟಾಗಿರುತ್ತವೆ ಎಲೆಗಳ ಮೇಲ್ಭಾಗ ಹಸಿರಾಗಿರುತ್ತದೆ ಮತ್ತು ತಳಭಾಗ ಬೂದು ಬಣ್ಣಕ್ಕಿರುತ್ತದೆ ಹೂಗಳು ಹಳದಿ ಮಿಶ್ರಿತ ಹಸಿರು ಬಣ್ಣ ಹೊಂದಿದ್ದು



ಚಿತ್ರ 18 ಅಂಕೋಲೆ - ಹೂ ಮತ್ತು ಎಲೆಗಳಿರುವ ರೆಂಬೆ

ಸುವಾಸನಾಭರಿತವಾಗಿರುತ್ತವೆ ಹೂಗಳಲ್ಲಿ 6 ಪುಷ್ಪದಳಗಳು ಮತ್ತು 30-40 ಕೇಸರಗಳಿರುತ್ತವೆ ಕಾಯಿಗಳು ಎಳನಾಗಿದ್ದಾಗ ಹಸಿರಾಗಿರುತ್ತವೆ ಬಲಿತಂತೆ ಕೆಂಪುಬಣ್ಣಕ್ಕೆ ತಿರುಗುತ್ತವೆ

## ಉಪಯೋಗಗಳು

1 ಬೇರನ್ನು ಅಕ್ಕಿ ತೊಳೆದ ನೀರಿನಲ್ಲಾಗಲಿ ಅಥವಾ ಅನ್ನದ ಗಂಜಿಯಲ್ಲಾಗಲಿ ಅರೆದು ಜೇನು ತುಪ್ಪದೊಡನೆ ಕುಡಿಸಿದರೆ ಭೇದಿ ನಿಲ್ಲುತ್ತದೆ

2 ಬೇರಿನ ಕಷಾಯ ಅಥವಾ ಗಂಧವನ್ನು ತುಪ್ಪದೊಡನೆ ತಿನ್ನಿಸಿದರೆ ನಾಯಿ ಕಡಿದ ವಿಷ ಇಳಿಯುತ್ತದೆ

3 ಬೇರಿನ ತೊಗಟೆಯಿಂದ ತಯಾರಿಸಿದ ಎಣ್ಣೆಯನ್ನು ಕೀಲು ನೋವು ರೋಗದಲ್ಲಿ ಹೊರಲೇಪನವಾಗಿ ಬಳಸುತ್ತಾರೆ

4 ಅಂಕೋಲೆ ಬೇರಿನ ಚೂರ್ಣ ನಾಲ್ಕು ವರಹದಷ್ಟು ತೆಗೆದುಕೊಂಡು ನಿಂಬೆಹಣ್ಣಿನ ರಸದೊಡನೆ ಏಳು ದಿವಸ ಕುಡಿಸಿದರೆ ಕೃತ್ರಿಮ ವಿಷ [(ಮದ್ದೀಡು) ಅನೇಕ ಬಗೆಯ ವಿಷ ಜಂತುಗಳ ಚೂರ್ಣ, ದಂತ, ನಖ, ಕೇಶಚೂರ್ಣ ಮತ್ತು ಹಲವು ವಿಧದ ಲೋಹ ಚೂರ್ಣಗಳು ಸೇವನೆ ಕೃತ್ರಿಮ ವಿಷವಾಗುತ್ತದೆ ] ಪರಹಾರವಾಗುತ್ತದೆ ಮಜ್ಜಿಗೆ ಅನ್ನ ಪಥ್ಯ

5 ಬೇರಿನ ತೊಗಟೆಯ ಚೂರ್ಣ 5-10 ಗುಂಜಿತೂಕ ಸೇವಿಸುವುದರಿಂದ ಜ್ವರ ನಿವಾರಣೆಯಾಗುತ್ತದೆ

6 ಅಂಕೋಲೆ ಬೀಜದ ಚೂರ್ಣವನ್ನು ಕೆಲವು ದಿವಸ ಸೇವಿಸುವುದರಿಂದ ಬಲವೀರ್ಯ ವೃದ್ಧಿಯಾಗುತ್ತದೆ

7 ಅಂಕೋಲೆ ಬೀಜದ ಚೂರ್ಣವನ್ನು ಜೇನುತುಪ್ಪದೊಡನೆ ಸೇವಿಸಿದರೆ ಹಾವಿನ ವಿಷ ಗುಣವಾಗುತ್ತದೆ

## ಪಶುರೋಗ ಚಿಕಿತ್ಸೆಯಲ್ಲಿ

1 ಅಂಕೋಲೆ ಬೇರಿನ ಮೇಲಿನ ತೊಗಟೆ, ಅಂಕೋಲೆ ಸೊಪ್ಪು ತಲಾ ಒಂದೊಂದು ಹಿಡಿ ತೆಗೆದುಕೊಂಡು ಅರೆದು ಒಂದು ಸೇರು ರಾಗಿ ಗಂಜಿಗೆ ಸೇರಿಸಿ ದಿನಕ್ಕೆ ಎರಡು ಹೊತ್ತು ಅರ್ಧರ್ಧ ಸೇರಿನಷ್ಟು ಕುಡಿಸುವುದರಿಂದ ಉದರದ ಬಾವು ಕಡಿಮೆಯಾಗುತ್ತದೆ ಈ ಚಿಕಿತ್ಸೆಯನ್ನು 2-3 ದಿವಸ ನಡೆಸುವುದೊಳ್ಳೆಯದು

2 ಅಂಕೋಲೆ ಮರದ ತೊಗಟೆಯನ್ನು ನೀರಿನೊಡನೆ ಅರೆದು ಒಂದು ವಾವಿನಂತೆ 4-5 ದಿವಸ ಕುಡಿಸುವುದರಿಂದ ಕೆಮ್ಮು, ದಮ್ಮು, ಗೂರಲೂ ಕಡಿಮೆಯಾಗುತ್ತದೆ



# ಅಂಟುವಾಳ

| | |
|---|---|
| ವೈಜ್ಞಾನಿಕ ಹೆಸರು | ಸ್ಯಾಪಿಂಡಸ್ ಲಾರಿಫೊಲಿಯ<br>(Sapındus laurıfolıa Vahl )<br><br>= ಸ್ಯಾ ಟ್ರೈಫೊಲಿಯೇಟಸ್<br>(= S trıfolıatus Hıern) |
| ಸಸ್ಯದ ಕುಟುಂಬ | ಸ್ಯಾಪಿಂಡೇಸಿ [Sapındaceae] |
| ಕನ್ನಡದ ಇತರ ಹೆಸರುಗಳು | ಅರ್ತಳ, ಅರದಳ, ಅರಿಷ್ಠ, ಅಲಮರಡು, ಅಲಿತವಾಳ, ಅಟಲಕಾಯಿ, ಕೊಗಟೆ, ಬುರುಗುಕಾಯಿ, ರಿಂಟೆ. |
| ಇತರ ಭಾಷೆಯ ಹೆಸರುಗಳು | ಸಂ - ಅರಿಷ್ಟ, ಫಿನಿಲ<br>ಹಿಂ. - ರಿತ್<br>ತ - ಪೊನ್ನರ್ಗೊಟ್ಟೈ, ಪೂವಂಡಿ<br>ತೆ - ಕುಂಕೋಡು/ಚೆಟ್ಟು, ಕುಂಟಿಗೆಕಾಯಿ<br>ಇಂ - ಇಂಡಿಯನ್ ಫಿಲ್ ಬರ್ಟ್ಜ,<br>ಸೋಪ್ ನಟ್ ಟ್ರೀ, |

**ಪರಿಚಯ**

ಸುಮಾರು 30 ರಿಂದ 35 ಅಡಿ ಎತ್ತರಕ್ಕೆ ಬೆಳೆಯುವ ಈ ಮರವನ್ನು ಹಳ್ಳಿಗಳಲ್ಲಿ ಹೊಲದ ತೋಟದ ಬದುಗಳಲ್ಲಿ ಬೆಳೆಸುತ್ತಾರೆ ಈ ಮರದ ಕಾಯಿಯನ್ನು, ಬೆಳ್ಳಿ ಆಭರಣಗಳನ್ನು, ತಲೆಕೂದಲನ್ನು ಮತ್ತು ರೇಷ್ಮೆ ವಸ್ತುಗಳನ್ನು ಶುಭ್ರಗೊಳಿಸಲು ಸೋಪಿಗೆ ಬದಲಾಗಿ ಕೆಲವು ಕಡೆ ಬಳಸುತ್ತಾರೆ ಮರದಲ್ಲಿ ಸಂಯುಕ್ತ ಎಲೆಗಳಿರುತ್ತವೆ ಒಂದು ಸಂಯುಕ್ತ ಎಲೆಯಲ್ಲಿ 2-3 ಜೊತೆ ಒರಟಾದ ಅಂಡ-ಉದ್ದಾಕಾರದ ಹೊಳಪುಳ್ಳ ಕಿರು ಪತ್ರಗಳಿರುತ್ತವೆ ಪುಷ್ಪಮಂಜರಿಯಲ್ಲಿನ ಕೆಲವು ಹೂಗಳು ಏಕಲಿಂಗಿಗಳು ಮತ್ತೇ ಕೆಲವು ದ್ವಿಲಿಂಗಿಗಳು ಹೂದಳಗಳ ಹೊರಮೈಗೆ ಕಂದು ಬಣ್ಣವಿರುತ್ತದೆ ಮತ್ತು ಮೃದು ತುಪ್ಪಳದಿಂದ ಕೂಡಿರುತ್ತದೆ. ಈ ಮರವು ಅಕ್ಟೋಬರ್-ನವಂಬರ್ ತಿಂಗಳುಗಳಲ್ಲಿ

ಹೂ ಬಿಡುತ್ತದೆ ಫೆಬ್ರವರಿ ತಿಂಗಳಿನಲ್ಲಿ ಮರದ ತುಂಬ ಕಾಯಿಗಳಿರುತ್ತವೆ ಬೀಜಗಳು ಕಪ್ಪಾಗಿದ್ದು ಗಟ್ಟಿಯಾಗಿರುತ್ತವೆ

## ಉಪಯೋಗಗಳು

1 ಅಂಟುವಾಳದ ಬೀಜದ ಪೊಪ್ಪಿನ ಸಮಭಾಗ ಶುಂಠಿ ಮತ್ತು ಬೆಲ್ಲ ಸೇರಿಸಿ ಯಲಚಿ ಬೀಜದ ಪ್ರಮಾಣದ ಮಾತ್ರೆ ಮಾಡಿ ನಿತ್ಯ ಹೊತ್ತಿಗೆ ಒಂದು ಮಾತ್ರೆಯಂತೆ ಎರಡು ಹೊತ್ತು 1-2 ವಾರ ಸೇವಿಸುವುದರಿಂದ ದಮ್ಮು ವಾಸಿಯಾಗುತ್ತದೆ.

2 ಅಂಟುವಾಳದ ಕಾಯಿಯನ್ನು ಅರೆದು ಊತವಿರುವ ಗಂಡಾಮಾಲೆಯ (Scrofulla) ಮೇಲೆ ಲೇಪಿಸುವುದರಿಂದ ಊತ ಕಡಿಮೆಯಾಗುತ್ತದೆ

3 ಅಂಟುವಾಳದ ಕಾಯಿಯನ್ನು ಅರೆದು ಚೇಳು, ಝುರಿ ಮತ್ತು ಕೀಟಗಳು ಕಚ್ಚಿದ ಜಾಗದ ಮೇಲೆ ಲೇಪಿಸುವುದರಿಂದ ವಿಷ ಪರಿಹಾರವಾಗಿ ನೋವು ಕಡಿಮೆಯಾಗುತ್ತದೆ.

4 ಅಂಟುವಾಳದ ಕಾಯಿಯ ನಯವಾದ ಚೂರ್ಣವನ್ನು ನಸ್ಯ ಹಾಕುವುದರಿಂದ ಮೂರ್ಛೆ ರೋಗ ಹತೋಟಿಗೆ ಬರುತ್ತದೆ

5 ಅಂಟುವಾಳದ ಕಾಯಿಯನ್ನು ತೇಯ್ದು ಕುಷ್ಠರೋಗದ ಲಕ್ಷಣಗಳು ಕಂಡುಬರುವ ಕಡೆ ಲೇಪಿಸುತ್ತಾರೆ

6 ಅಂಟುವಾಳದ ಕಾಯಿಯ ಚೂರ್ಣ ಸೇವನೆಯಿಂದ, ಅತಿಯಾದ ಗಸಗಸೆ ಅಥವಾ ಅಫೀಮು ಸೇವನೆಯಿಂದುಂಟಾದ ದುಷ್ಪರಿಣಾಮಗಳು ಕಡಿಮೆಯಾಗುತ್ತವೆ.

7 ಕಾಯಿಯನ್ನು ತೇಯ್ದು ಗಂಧ ಮಾಡಿಕೊಂಡು ಅದಕ್ಕೆ ವಿನೆಗರ್ (Vinegar) ಸೇರಿಸಿ ತಲೆಗೆ ಹಚ್ಚಿ ಸ್ನಾನಮಾಡುವುದರಿಂದ ಹೇನುಗಳು ನಾಶವಾಗುತ್ತವೆ

8 ಅಂಟುವಾಳದ ಕಾಯಿಯನ್ನು ನೀರಿನಲ್ಲಿ ತೇಯ್ದು ಮೂಗಿಗೆ ಹಿಂಡುವುದರಿಂದ ಗಂಟಲಲ್ಲಿ ಕಟ್ಟಿದ ಕಫ ಕರಗಿ ಬಾಯಿಂದ ಹೊರಬಂದು ಕೆಮ್ಮು ಕಡಿಮೆಯಾಗುತ್ತದೆ





ಚಿತ್ರ 20 : ಅಂದರು ಗಿಡ – ಗಂಡು ಮತ್ತು
ಹೆಣ್ಣು ಹೂಗಳಿರುವ ರೆಂಬೆಗಳು

# ಅಂದರುಗಿಡ

| | |
|---|---|
| ವೈಜ್ಞಾನಿಕ ಹೆಸರು | ಡೊಡೊನಿಯ ವಿಸ್ಕೊಸ<br>(Dodonaea viscosa N Jacq ) |
| ಸಸ್ಯದ ಕುಟುಂಬ | ಸ್ಯಾಪಿಂಡೇಸಿ<br>(Sapindaceae) |
| ಕನ್ನಡದ ಇತರ ಹೆಸರುಗಳು | ಅಂಗಾರಕ, ಬಣದುರಬ, ಬಂಡಾರಿ,<br>ಬಂಡುರ್ಗಿ, ಬಂದರಿಕೆ, ಬೊಂಡಾರೆ,<br>ಬೊಂದರೆ, ವೊಲ್ಲಾರಿ, ಹಂಗರ,<br>ಹಂಗರಲು, ಹಂಗರಿಕೆ |
| ಇತರ ಭಾಷೆಯ ಹೆಸರುಗಳು | ಸಂ - ಅಲಿಯರ್, ಸನತ್ತ<br>ಹಿಂ - ಅಲಿಯರ್, ಸನಾತ<br>ತ - ವೇಲರಿ, ವಲಾರೈ, ವಿರಾಲಿ<br>ತೆ - ಗೊಲ್ಲವುಲ್ಲೇಡ, ಬಂದರು, ಬೆಂಡೇಡು<br>ಇಂ - ದಿ ಸ್ವಿಚ್ ಸೊರೆಲ್ |

**ಪರಿಚಯ**

ಪೊದೆಯಂತೆ ಬೆಳೆಯುವ ಅಂದರುಗಿಡವು ಬೇಸಿಗೆಯಲ್ಲಿ ಎಲೆಯುದುರುವ ಮಲೆನಾಡಿನ ಸಸ್ಯಾವರಣ, ಬೇಸಿಗೆಯಲ್ಲಿ ಎಲೆಯುದುರುವ ಮೈದಾನ ಸೀಮೆಯ ಒಣ ಸಸ್ಯಾವರಣ ಮತ್ತು ಕಳ್ಳಿ ಕುರುಚಲು ಗಿಡಗಳನ್ನೊಳಗೊಂಡ ಸಸ್ಯಾವರಣದಲ್ಲಿ ಬೆಳೆಯುತ್ತದೆ ಅತಿ ಚಿಕ್ಕ ತೊಟ್ಟುಳ್ಳ ಎಲೆಗಳು ಕಾಂಡದ ಮೇಲೆ ಪರ್ಯಾಯವಾಗಿ ಜೋಡಣೆಯಾಗಿರುತ್ತವೆ. ಎಲೆಯ ಕಂಕುಳಲ್ಲಿ ಏಕಲಿಂಗ ಹೂಗಳ ಗೊಂಚಲುಗಳಿರುತ್ತವೆ ಗಂಡು ಮತ್ತು ಹೆಣ್ಣು ಹೂಗೊಂಚಲುಗಳು ಬೇರೆ ಬೇರೆ ಗಿಡದಲ್ಲಿರುತ್ತವೆ ಗಂಡುಹೂಗಳಲ್ಲಿ 5-10 ಕೇಸರಗಳಿರುತ್ತವೆ ಕಾಯಿಗಳಿಗೆ ಗರಿಯಂತಹ ಮೂರು ಏಣುಗಳಿರುತ್ತವೆ

ಅಂದರು ಗಿಡವನ್ನು ಕೆಲವು ಕಡೆ ಬೇಲಿಗಿಡವಾಗಿ ಬೆಳೆಸುತ್ತಾರೆ ಗಿಡದ ರೆಂಬೆಗಳನ್ನು ಕತ್ತರಿಸಿಕೊಂಡು ಪೊರಕೆ ಮಾಡಿ ಕಣಗಾಲದಲ್ಲಿ ಕಣಗುಡಿಸಲು ಉಪಯೋಗಿಸುತ್ತಾರೆ

## ಉಪಯೋಗಗಳು

1 ಅಂದರುಗಿಡದ ಎಲೆಗೆ, ಮಂಗರವಳ್ಳಿಯ ಬಳ್ಳಿ ಮತ್ತು ಕೋಳಿಮೊಟ್ಟೆಯ ಲೋಳೆ ಸೇರಿಸಿ ಅರೆದು ಮೂಳೆ ಮುರಿದ ಜಾಗದ ಮೇಲೆ ಪಟ್ಟು ಹಾಕಿ ಬಿದಿರಿನ ದೆಬ್ಬೆ ಕಟ್ಟುತ್ತಾರೆ

2 ಎಲೆಯ ಚೂರ್ಣವನ್ನು ಗಾಯದ ಮೇಲೆ ಸಿಂಪಡಿಸುವುದರಿಂದ ಗಾಯ ಬೇಗ ವಾಸಿಯಾಗುವುದರ ಜೊತೆಗೆ ಗಾಯದ ಕಲೆಯು ಉಳಿಯುವುದಿಲ್ಲ

3 ಎಲೆಗಳನ್ನು ಅರೆದು ಹಾವು ಕಡಿದ ಜಾಗದ ಮೇಲೆ ಲೇಪಿಸುವುದರ ಜೊತೆಗೆ ಸೇವಿಸಲು ಕೊಡುವುದರಿಂದ ಹಾವಿನ ವಿಷ ಇಳಿಯುತ್ತದೆ

4 ಎಲೆಯ ಚೂರ್ಣವನ್ನು ಆಡಿನ ಹಾಲಿನಲ್ಲಿ ಸೇವನೆ ಮಾಡುವುದರಿಂದ ಸರ್ವವ್ಯಾಧಿಗಳು ಗುಣವಾಗುತ್ತವೆ

5 ಎಲೆಯ ಕಷಾಯ ಅಥವಾ ಚೂರ್ಣ ಸೇವನೆಯಿಂದ ಜ್ವರ ಪರಿಹಾರವಾಗುತ್ತದೆ



# ಕಕ್ಕೆಮರ

| | |
|---|---|
| ವೈಜ್ಞಾನಿಕ ಹೆಸರು | ಕ್ಯಾಸಿಯ ಫಿಸ್ಟುಲ (Cassia fistula L ) |
| ಸಸ್ಯದ ಕುಟುಂಬ | ಸಿಸಾಲ್‌ಪಿನಿಯೇಸಿ (Caesalpiniaceae) |
| ಕನ್ನಡದ ಇತರ ಹೆಸರುಗಳು | ಅರಗ್ವಧ, ಅರಗಿನ, ಅರೆವಟ, ಕೊಕ್ಕೆ, ಕೊನ್ನೆ, ಕಾಡುಕೊಂಡೆಮರ, ರಾಜದಂಡ |
| ಇತರ ಭಾಷೆಯ ಹೆಸರುಗಳು | ಸಂ - ಆರಗ್ವಧ, ಅರಗ್ವಧ, ಸುವರ್ಣಕ, ರಾಜತರು<br>ಹಿಂ - ಅಮಲ್ತಾಸ್, ಉಮುಲ್ಟಸ್<br>ತ - ಕೊನ್ರೈ, ಕೊನ್ರೈ, ತಿರುಕೊಂಟ್ರೈ, ತಿರುಕೊನ್ರೈ<br>ತೆ - ರೇಲ<br>ಇಂ - ಪರ್ಜಿಂಗ್ ಕ್ಯಾಸಿಯ, ದಿ ಇಂಡಿಯನ್ ಲೇಬರ್ನಂ |

**ಪರಿಚಯ**

ಈ ಮರವು ಕುರುಚಲು ಕಾಡುಗಳಲ್ಲಿ ಮತ್ತು ವರ್ಣಪಾತಿ ಕಾಡುಗಳಲ್ಲಿ ಸಾಮಾನ್ಯವಾಗಿ ಬೆಳೆಯುತ್ತದೆ ಬೀಳು ಭೂಮಿಯಲ್ಲಿ, ಊರ ಹೊರವಲಯದ ಹೊಲಗಳಲ್ಲಿ ಪ್ರಾಕೃತಿಕವಾಗಿ ಬೆಳೆದಿರುವುದನ್ನು ಕಾಣಬಹುದು ಕೆಲವು ಕಡೆ ಅಲಂಕಾರಿಕ ಹೂಮರವಾಗಿ ಸಹ ಬೆಳೆಸಲಾಗುತ್ತಿದೆ ಈ ಮರವು ಸಾಮಾನ್ಯವಾಗಿ 15-20 ಅಡಿ ಎತ್ತರ ಬೆಳೆಯುತ್ತದೆ ಆದರೆ ಅನುಕೂಲಕರ ಪರಿಸರದಲ್ಲಿ 30-40 ಅಡಿ ಎತ್ತರ ಬೆಳೆಯಬಲ್ಲದು ಸಂಯುಕ್ತ ಎಲೆಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ ಎಲೆಗಳು ಫೆಬ್ರುವರಿ-ಮಾರ್ಚ ತಿಂಗಳುಗಳಲ್ಲಿ



ಚಿತ್ರ 21 · ಕಕ್ಕೆಮರ - ಸಂಯುಕ್ತ ಎಲೆ ಮತ್ತು ಪುಷ್ಪಮಂಜರಿ

ಉದುರಿಹೋಗುತ್ತವೆ, ಏಪ್ರಿಲ್-ಮೇ ತಿಂಗಳುಗಳಲ್ಲಿ ಹೊಸ ಚಿಗುರು ಮೊಳೆಯುತ್ತವೆ ಚಿಗುರಿನ ಜೊತೆಗೆ ಉದ್ದನೆಯ ಜೋಲಾಡುವ ಹಳದಿಯ ಹೂಗೊಂಚಲುಗಳು ಮೂಡಿ ಮರವು ಸುಂದರವಾಗಿ ಕಾಣುತ್ತದೆ ಕಾಯಿಗಳು 1-2 ಅಡಿ ಉದ್ದವಿರುತ್ತದೆ ಬಲಿತಾಗ ಕಂದು ಬಣ್ಣಕ್ಕೆ ತಿರುಗಿ ಮರದಲ್ಲಿ ನೇತಾಡುತಿರುತ್ತವೆ ಒಂದು ಕಾಯಿಯಲ್ಲಿ ಸಾಧಾರಣವಾಗಿ 40-100 ಬೀಜಗಳಿರುತ್ತವೆ

## ಉಪಯೋಗಗಳು

1 ಕಕ್ಕೆಯ ಬೇರಿನ ಗಂಧ ½ ಪಾವಿಗೆ ಇಂಗು ಸೇರಿಸಿ ಸ್ವಲ್ಪ ಸಕ್ಕರೆಯೊಡನೆ ½ ಚಮಚ ಪ್ರಮಾಣದಷ್ಟನ್ನು ಕೆಲವು ದಿವಸ ಸೇವಿಸುವುದರಿಂದ ಬಹುಮೂತ್ರರೋಗ ವಾಸಿಯಾಗುತ್ತದೆ

2 ಕಕ್ಕೆಬೇರಿನ ತೊಗಟೆಯ ಕಷಾಯಕ್ಕೆ ಸ್ವಲ್ಪ ಜೇನುತುಪ್ಪ ಸೇರಿಸಿ ಕುಡಿಸುವುದರಿಂದ ಸೊರಿಯಾಸಿಸ್ ಎಂಬ ಚರ್ಮರೋಗ ಗುಣವಾಗುತ್ತದೆ

3 ಕಕ್ಕೆಚಕ್ಕೆ ಹಾಕಿ ಕಾಯಿಸಿ ತಯಾರಿಸಿದ ಎಳ್ಳು ಎಣ್ಣೆಯನ್ನು ಕಿವಿಗೆ ಹಾಕುವುದರಿಂದ ಕಿವಿಯಿಂದ ನೀರು ಸೋರುವುದು ನಿಲ್ಲುತ್ತದೆ

4 ಕಕ್ಕೆಯ ಚಕ್ಕೆಯನ್ನು ಸುಟ್ಟು ಕರಿಮಾಡಿ, 1 ತೊಲ ಪ್ರಮಾಣದಷ್ಟನ್ನು 3 ದಿವಸ ಆಕಳ ಹಾಲಿನಲ್ಲಿ ಕದಡಿ ಕುಡಿಸುವುದರಿಂದ ಸುಟ್ಟಗಾಯದ ಹುಣ್ಣು ಬೇಗ ವಾಸಿಯಾಗುತ್ತದೆ

5 ಕಕ್ಕೆಚಕ್ಕೆಯನ್ನು ಅರಿಸಿನದೊಡನೆ ಅರೆದು ಶಿಶ್ನದಮೇಲೆ ಲೇಪಿಸುವುದರಿಂದ ಉಪದಂಶವೆಂಬ ಶಿಶ್ನವ್ಯಾಧಿ ಗುಣವಾಗುತ್ತದೆ (ವರಂಗಿ ಹುಣ್ಣಿನ ರೋಗ Syphilis)

6 ಕಕ್ಕೆಮರದ ಬೇರು ಅಥವಾ ಎಳೆಕುಡಿಯನ್ನು ಅರೆದು ಗಜ್ಜುಗದ ಗಾತ್ರ ಉಂಡೆಮಾಡಿ ತುಪ್ಪದಲ್ಲಿಟ್ಟು ನುಂಗಿಸಿ ಬಿಸಿಲಿನಲ್ಲಿ ಕುಳ್ಳರಿಸಿದರೆ ಭೇದಿಯಾಗಿ ಕ್ರೈಮಿಸಕು ಬಿದ್ದು ಹೋಗುತ್ತದೆ

7 ಕಕ್ಕೆಮರದ ಚಿಗುರೆಲೆಯನ್ನು ಅಕ್ಕಿ ತೊಳೆದ ನೀರಿನಲ್ಲಿ ಅಥವಾ ಹುಳಿಬರಿಸಿದ ಅನ್ನದ ಗಂಜಿಯಲ್ಲಿ ಅರೆದು ದಿವಸಕ್ಕೆ 2-3 ಬಾರಿ ಲೇಪಿಸುವುದರಿಂದ ತುರಿ, ನವೆ, ಹುಳುಕಡ್ಡಿ, ವಿಸರ್ಪ ಇತ್ಯಾದಿಗಳು ವಾಸಿಯಾಗುತ್ತವೆ

8 ಸುಮಾರು 12-24 ಗ್ರಾಂ ಕಕ್ಕೆ ಎಲೆಗಳನ್ನು ತುಪ್ಪದಲ್ಲಿ ಹುರಿದು ದಿವಸಕ್ಕೆರಡು ಬಾರಿ ತಿನ್ನಿಸುವುದರಿಂದ ಸಂದಿವಾತರೋಗ ವಾಸಿಯಾಗುತ್ತದೆ

9 ಕಕ್ಕೆಯ ಚಿಗುರೆಲೆಯನ್ನು ಹರಳೆಣ್ಣೆಯಲ್ಲಿ ಹುರಿದು ಹೊತ್ತಿಗೆ ಒಂದು ತೊಲದಷ್ಟನ್ನು ತೆಗೆದುಕೊಂಡು ½ ಚಮಚ ಸಕ್ಕರೆ, ½ ಚಮಚ ಜೇನುತುಪ್ಪ ಸೇರಿಸಿ ತಿನ್ನುವುದರಿಂದ ರಕ್ತಪಿತ್ತ ನಿವಾರಣೆಯಾಗುತ್ತದೆ ಹೀಗೆ ದಿವಸಕ್ಕೆ 2 ವೇಳೆಯಂತೆ 1-2 ವಾರ ಈ ಚಿಕಿತ್ಸೆಯನ್ನು ನಡೆಸಬೇಕು

10 ಕಕ್ಕೆಕಾಯಿ ಸೇರಿಸಿ ತಯಾರಿಸಿದ ಪಂಚನಿಂಬ ರಸಾಯನ ಎಂಬ ಔಷಧವು, ಚರ್ಮವ್ಯಾಧಿಗಳು, ಮೂಲವ್ಯಾಧಿ, ಹಾಗೂ ಪ್ರಮೇಹ ರೋಗಗಳಲ್ಲಿ ಪ್ರಯೋಜನಕಾರಿ

11 ಕಕ್ಕೆಕಾಯಿ ತಿರುಳಿಗೆ ತುಪ್ಪ ಸೇರಿಸಿ ಕಾಯಿಸಿ ತಯಾರಿಸಿದ ಘೃತ ಸೇವನೆಯಿಂದ ಕೆಮ್ಮು ಗುಣವಾಗುತ್ತದೆ

12 ಕಕ್ಕೆ ಹಣ್ಣಿನ ತಿರುಳನ್ನು ಸುಮಾರು 5 ಗ್ರಾಂ ನಷ್ಟು ತೆಗೆದುಕೊಂಡು ತಕ್ಕಷ್ಟು ಸಕ್ಕರೆ ಮತ್ತು ನೀರು ಸೇರಿಸಿ ದಿವಸಕ್ಕೊಮ್ಮೆ ಸೇವಿಸುವುದರಿಂದ ಮಲಬದ್ಧತೆ ಕಡಿಮೆಯಾಗುತ್ತದೆ

13 ಕಕ್ಕೆಬೀಜ ¼ ತೊಲದಷ್ಟನ್ನು ತೆಗೆದುಕೊಂಡು ಹಾಲಿನಲ್ಲಿ ಅರೆದು ಕುಡಿಸುವುದರಿಂದ ಹೊಟ್ಟೆನೋವು ಕಡಿಮೆಯಾಗುತ್ತದೆ ಔಷಧವನ್ನು ದಿವಸಕ್ಕೆ ಒಂದು ಹೊತ್ತಿನಂತೆ ಏಳು ದಿವಸ ಕೊಡಬೇಕು

## ಪಶುರೋಗ ಚಿಕಿತ್ಸೆಯಲ್ಲಿ

1 ಒಣಗಿದ ಕಕ್ಕೆ ಕಾಯಿಯನ್ನು ಕುಟ್ಟಿ ಪುಡಿ ಮಾಡಿಟ್ಟುಕೊಂಡು, ಒಂದು ಹಿಡಿ ಕಕ್ಕೆಕಾಯಿ ಪುಡಿಗೆ ಅರ್ಧಹಿಡಿ ಕರಿಮೆಣಸಿನಪುಡಿ ಸೇರಿಸಿ ಒಂದು ಪಾವು ನೀರಿಗೆ ಬೆರೆಸಿ ಒಂದು ಸಾರಿಗೆ ಕುಡಿಸುವುದು ಇದೇ ರೀತಿ ದಿನಕ್ಕೆ ಎರಡು ಬಾರಿಯಂತೆ 3-4 ದಿವಸ ಕುಡಿಸುವುದರಿಂದ ದೊಡ್ಡರೋಗ ಹತೋಟಿಗೆ ಬರುತ್ತದೆ





ಚಿತ್ರ 22 : ಕಡವಲ ಮರ -
ತೆಂಬೆಯ ತುದಿಯಲ್ಲಿರುವ ಚೆಂಡು ಪುಷ್ಪಮಂಜರಿ

# ಕಡವಲ ಮರ (ಕದಂಬ)

| | |
|---|---|
| ವೈಜ್ಞಾನಿಕ ಹೆಸರು | ಆ್ಯಂಥೊಸಿಫಾಲಸ್ ಇಂಡಿಕಸ್ (Anthocephalus indicus A Rich ) = ಆ್ಯಂಥೊಸಿಫಾಲಸ್ ಕದಂಬ (=A cadamba Miq ) |
| ಸಸ್ಯದ ಕುಟುಂಬ | ರುಬಿಯೇಸಿ (Rubiaceae) |
| ಕನ್ನಡದ ಇತರ ಹೆಸರುಗಳು | ಅರಿಸಿನತೇಗ, ಕಡವ, ಕಡವಾಳ, ಕಡಹದಮರ, ಕಾಡಬಲಿಗೆ, ಕೊಡ್ವಾಲ, ಕೊಡೆಯಾಲ, ದಾರುಕದಂಬ, ಹೆಲ್ತಿಗೆ, ಹರಿಸಿನತೇಗ |
| ಇತರ ಭಾಷೆಯ ಹೆಸರುಗಳು | ಸಂ - ಕದಂಬ, ನಿಪ,<br>ಹಿಂ - ಕದಂ, ಕದಂಬ<br>ತ - ವೆಲ್ಲಾಕದಂಬ<br>ತೆ - ಕದಂಬಮು<br>ಇಂ - ವೈಲ್ಡ್ ಸಿಂಕೋನ |

**ಪರಿಚಯ**

ಕದಂಬ ವೃಕ್ಷದ ಪರಿಚಯು ಇಂದು ನೆನ್ನೆಯದಲ್ಲ ದ್ವಾಪರ ಯುಗದಿಂದಲೂ ಇತ್ತೆಂದು ಭಾಗವತದ ಕಥನದಿಂದ ತಿಳಿದುಬರುತ್ತದೆ ಶ್ರೀಕೃಷ್ಣನು ಗೋಪಿಕಾಸ್ತ್ರೀಯರೊಡನೆ ಕದಂಬವನದಲ್ಲಿ ವಿಹರಿಸುತ್ತಿದ್ದನಂತೆ, ಅಂತಹ ಕದಂಬ ವನದ ಅವಶೇಷವನ್ನು ಮಥುರಾ ಮತ್ತು ಭರತಪುರಗಳ ಮಧ್ಯೆ ಈಗಲೂ ಕಾಣಬಹುದಂತೆ ಈ ಮರದ ಹೂ ಶಿವನಿಗೆ ಶ್ರೇಷ್ಟವೆಂಬ ನಂಬಿಕೆಯಿದೆ ಈ ಮರವು ವಿಶೇಷವಾಗಿ ಪಶ್ಚಿಮ ಘಟ್ಟದ ನಿತ್ಯಹರಿದ್ವರ್ಣ ಸಸ್ಯಾವರಣದಲ್ಲಿ ಕಂಡುಬರುತ್ತದೆ

ಈ ಮರವು 20-30 ಅಡಿ ಎತ್ತರ ಬೆಳೆಯುತ್ತದೆ ನೋಡಲು ಆಕರ್ಷಕವಾಗಿರುತ್ತದೆ ರೆಂಬೆಗಳು ಸುತ್ತಲೂ ಇಳಿಬಿದ್ದಿರುತ್ತವೆ ನೇರಳೆ ಬಣ್ಣದ

ತೊಗಟೆ ನಯವಾಗಿದ್ದು ಸೀಳುಗಳಿಂದ ಕೂಡಿರುತ್ತದೆ. ಹೊಳಪಿನಿಂದ ಕೂಡಿದ ಅಂಡಾಕಾರದ ಎಲೆಗಳು ಅಭಿಮುಖವಾಗಿ ಕಿರುರೆಂಬೆಗಳ ಮೇಲೆ ಜೋಡಣೆಯಾಗಿರುತ್ತವೆ. ಮರವೂ ಜೂನ್-ಆಗಸ್ಟ್ ತಿಂಗಳುಗಳಲ್ಲಿ ಹೂಬಿಡುತ್ತದೆ. ಸಣ್ಣ ಸಣ್ಣ ಹೂಗಳು ಸೇರಿಕೊಂಡು ಚಂಡಿನಂತಹ ಪುಷ್ಪಮಂಜರಿಯಾಗಿರುತ್ತದೆ. ಪುಷ್ಪಮಂಜರಿಯು ಸಾಮಾನ್ಯವಾಗಿ ರೆಂಬೆಯ ತುದಿಯಲ್ಲಿರುತ್ತದೆ. ಹೂಗಳಿಗೆ ತೀಕ್ಷ್ಣವಾದ ಪರಿಮಳವಿರುತ್ತದೆ. ಇದು ಹಗಲಿಗಿಂತ ರಾತ್ರಿಯಲ್ಲಿ ಅಧಿಕವಾಗಿರುತ್ತದೆ. ಹಣ್ಣಿನ ಗಾತ್ರ ಮತ್ತು ಆಕಾರ ಕಿತ್ತಳೆಯನ್ನು ಹೋಲುತ್ತದೆ. ಹಣ್ಣು ಸ್ವಲ್ಪ ಹುಳಿಯಾಗಿದ್ದರೂ ತಿನ್ನಲು ರುಚಿಕರವಾಗಿರುತ್ತದೆ.

## ಉಪಯೋಗಗಳು

1) ತೊಗಟೆಯ ಕಷಾಯವನ್ನು ಕುಡಿಸುವುದರಿಂದ ಜ್ವರವಾಸಿಯಾಗುತ್ತದೆ.
2) ತೊಗಟೆಯ ರಸ ಮತ್ತು ನಿಂಬೆರಸವನ್ನು ಸಮಪ್ರಮಾಣ ತೆಗೆದುಕೊಂಡು ಅದಕ್ಕೆ ಸಮಪ್ರಮಾಣದಲ್ಲಿ ಗಸಗಸೆ ಮತ್ತು ಪಟಿಕವನ್ನು ಸೇರಿಸಿ ಅರೆದು ಕಣ್ಕಪ್ಪಿನಂತೆ ಹಚ್ಚುವುದರಿಂದ ಕಣ್ಣಿನ ಉರಿ ಶಮನವಾಗುತ್ತದೆ.
3) ಹಣ್ಣುಗಳನ್ನು ತಿನ್ನಿಸುವುದರಿಂದ ಬಾಯಾರಿಕೆಯಿಂದ ಕೂಡಿದ ಜ್ವರ ವಾಸಿಯಾಗುತ್ತದೆ.
4) ಕಡವಲ ಮರದ ಹಣ್ಣಿನ ರಸಕ್ಕೆ ಜೀರಿಗೆ ಮತ್ತು ಸಕ್ಕರೆ ಸೇರಿಸಿ ಕುಡಿಸುವುದರಿಂದ ಉದರ ಶೂಲೆಗಳು ವಾಸಿಯಾಗುತ್ತವೆ.
5) ಕಡವಲಮರದ ಪಂಚಾಂಗ ಚೂರ್ಣಕ್ಕೆ ಜೇನುತುಪ್ಪ ಸೇರಿಸಿ ತಿನ್ನಿಸುವುದರಿಂದ ಕುಷ್ಠಗುಣವಾಗುತ್ತದೆ.
6) ಕಡವಲಮರದ ಪಂಚಾಂಗ ಚೂರ್ಣವನ್ನು ಗೋಧಿ ಗಂಜಿಯೊಡನೆ ಸೇವಿಸುವುದರಿಂದ ವಾತರೋಗಗಳು ಗುಣವಾಗುತ್ತವೆ.
7) ಕಡವಲಮರದ ಸಮೂಲವನ್ನು ನೆರಳಿನಲ್ಲಿ ಒಣಗಿಸಿ ಚೂರ್ಣ ಮಾಡಿಕೊಂಡು ತುಪ್ಪದೊಡನೆ ಸುಮಾರು 6 ತಿಂಗಳು ಸೇವಿಸುವುದರಿಂದ ಸರ್ವವ್ಯಾಧಿಗಳು ಗುಣವಾಗುತ್ತವೆ.



# ಕಣಿಗಿಲೆ

| | |
|---|---|
| ವೈಜ್ಞಾನಿಕ ಹೆಸರು | ನೀರಿಯಂ ಇಂಡಿಕಮ್<br>(Nerium indicum Miller)<br>=ನೀ ಒಡೊರಮ್<br>(=N odorum Soland ) |
| ಸಸ್ಯದ ಕುಟುಂಬ | ಅಪೊಸೈನೇಸಿ (Apocynaceae) |
| ಕನ್ನಡದ ಇತರ ಹೆಸರುಗಳು | ಅಶ್ವಮಾರಕ, ಕಸ್ತೂರಿಜಾಜಿಪಟ್ಟೆ, ಕಸ್ತೂರಿಪಟ್ಟೆ, ಕೆಂಪು ಕಣಿಗಿಲೆ, ಬಿಳಿಕಣಿಗಿಲೆ |
| ಇತರ ಭಾಷೆಯ ಹೆಸರುಗಳು | ಸಂ - ಕರವೀರ, ಚಂಡಾತ, ಪ್ರತಿಹಾಸ, ಶತಪ್ರಾಸ, ಹಯಮಾರಕ<br>ಹಿಂ - ಕನೇರ್, ಕನೇಲ್, ಕರ್ಬರ್, ಕುರುವೀರ<br>ತ - ಅರಲಿವೇರ್, ಅಲಾರಿ, ಕರವೀರಂ<br>ತೆ - ಕಸ್ತೂರಿ ಪಟ್ಟೆ, ಗನ್ನೇರು, ಘನ್ನೇರು<br>ಇಂ - ಸ್ವೀಟ್ ಸೆಂಟೆಡ್ ಓಲಿಯಂಡರ್ |

**ಪರಿಚಯ**

ಈ ಗಿಡವನ್ನು ಉದ್ಯಾನವನ ಮತ್ತು ಮನೆಯ ಪಕ್ಕದಲ್ಲಿ ಅಲಂಕಾರಿಕ ಹೂಗಿಡವಾಗಿ ಬೆಳೆಸುತ್ತಾರೆ ಹಳ್ಳಿಗಳಲ್ಲಿ, ಮಾರಮ್ಮನ ಹಬ್ಬಗಳಲ್ಲಿ ಆರತಿ ಮತ್ತು ಕಳಸವನ್ನು ಅಲಂಕರಿಸಲು ಮತ್ತು ದೇವರನ್ನು ಪೂಜಿಸಲು ಈ ಗಿಡದ ಗೊಂಚಲುಗಳನ್ನು ಉಪಯೋಗಿಸುತ್ತಾರೆ

ಈ ಗಿಡವು ಪೊದೆಯಂತೆ ಬೆಳೆಯುತ್ತದೆ ದುಂಡಗಿರುವ ಕಾಂಡದ ತುದಿಯಲ್ಲಿ ಚಿಕ್ಕ ತೊಟ್ಟಿರುವ ವೃತ್ತ ಜೋಡಣೆಯ ಎಲೆಗಳಿರುತ್ತವೆ ತುದಿಯಲ್ಲಿ ಹೊಸ ಹೊಸ ಎಲೆಗಳು ಹೊರಬಂದಂತೆಲ್ಲ ಕೆಳಭಾಗದಲ್ಲಿರುವ



ಚಿತ್ರ 23 · ಕಣಿಗಿಲೆ – ರೆಂಬೆಯಲ್ಲಿ ಹೂಗಳು ಮತ್ತು ಕಾಯಿ

ಹಳೆಯ ಎಲೆಗಳು ಉದುರಿ ಹೋಗುತ್ತವೆ ಉದುರಿದ ಎಲೆಗಳು ಕಾಂಡದ ಮೇಲೆ ಅಂಟಿಕೊಂಡಿದ್ದ ಕಲೆಗಳನ್ನು ಉಳಿಸುತ್ತವೆ ಎಲೆಯು ಭರ್ಜಿಯಾಕಾರವಾಗಿದ್ದು ತೊಗಲಿನಂತೆ ಒರಟಾಗಿರುತ್ತದೆ ಎಲೆಯ ಮೇಲ್ಭಾಗ ಗಾಢ ಹಸಿರಾಗಿದ್ದರೆ ಕೆಳಭಾಗ ತಿಳಿಹಸಿರಾಗಿರುತ್ತದೆ ಎಲೆಯ ಅಂಚು ನಯವಾಗಿದ್ದು ತುದಿ ಚೂಪಾಗಿರುತ್ತದೆ ಹೂಗಳು ಮಧ್ಯಾರಂಭಿ ಪುಷ್ಪ ಮಂಜರಿಯಲ್ಲಿ ಬಿಡುತ್ತವೆ ಹೂಗಳ ಬಣ್ಣ ಬಿಳಿ, ಕೆಂಪು, ಹಳದಿ ಇಲ್ಲವೆ ಗುಲಾಬಿಯಾಗಿರುತ್ತದೆ ಒಂದೊಂದು ಹೂವಿನಿಂದ ಸಾಮಾನ್ಯವಾಗಿ ಜೋಡಿ ಕಾಯಿಗಳು ಬೆಳೆಯುತ್ತವೆ

**ಸೂಚನೆ**

ಈ ಮೂಲಿಕೆಯ ಎಲ್ಲಾ ಭಾಗಗಳು ವಿಷಯುಕ್ತವಾಗಿರುತ್ತದೆ ಯಾವುದೇ ಕಾರಣದಿಂದಲೂ ಯಾವ ಭಾಗವನ್ನೇ ಆಗಲಿ ಹೊಟ್ಟೆಗೆ ಸೇವಿಸಬಾರದು ಕೆಲವೊಮ್ಮೆ ಅತಿಯಾದ ಪ್ರಮಾಣ ಸೇವಿಸಿದರೆ ಮರಣವೂ ಸಂಭವಿಸಬಹುದು ಈ ಮೂಲಿಕೆಯಿಂದ ನಡೆಸಬಹುದಾದ ಎಲ್ಲಾ ಚಿಕಿತ್ಸಾ ವಿಧಾನಗಳನ್ನು ವೈದ್ಯರ ನೆರವಿನೊಡನೆ ನಡೆಸುವುದೊಳ್ಳೆಯದು

## ಉಪಯೋಗಗಳು

1 ಬೇರನ್ನು ಅರೆದು ಮೂಲವ್ಯಾಧಿ ಮತ್ತು ಶಿಶ್ನದ ಮೇಲಿನ ಹುಣ್ಣಿನ ಮೇಲೆ ಲೇಪಿಸುತ್ತಾರೆ.

2 ಬೇರನ್ನು ಅರೆದು ಯೋನಿಯ ಒಳಭಾಗಕ್ಕೆ ಹಚ್ಚುವುದರಿಂದ ಇಲ್ಲವೆ ಬೇರನ್ನೇ ಯೋನಿಯೊಳಕ್ಕೆ ತಳ್ಳುವುದರಿಂದ ಗರ್ಭಪಾತವಾಗುತ್ತದೆ

3 ತೊಗಟೆಯ ಕಷಾಯಕ್ಕೆ ಸಮಪ್ರಮಾಣದಷ್ಟು ಸಾಸಿವೆ ಎಣ್ಣೆ ಸೇರಿಸಿ ಮಸೆಣ್ಣೆ ಮಾಡಿ ಲೇಪಿಸುವುದರಿಂದ ಕುಷ್ಠ ವಾಸಿಯಾಗುತ್ತದೆ

4 ಎಲೆಯ ರಸಕ್ಕೆ ಸಾಸಿವೆ ಎಣ್ಣೆ ಸೇರಿಸಿ ಕಾಯಿಸಿ ತಯಾರಿಸಿದ ತೈಲಪಾಕವನ್ನು ಲೇಪಿಸುವುದರಿಂದ ಕಜ್ಜಿ ವಾಸಿಯಾಗುತ್ತದೆ

5 ಕಣಿಗಿಲೆಯ ಎಲೆಯನ್ನು ಬಾಂಡಲಿಯಲ್ಲಿ ಹಾಕಿ ಹುರಿದು ಕರಕುಮಾಡಿ, ಕರಕನ್ನು ತಟ್ಟೆಗೆ ಸುರಿದು ತಕ್ಕಷ್ಟು ನಿಂಬೆಹಣ್ಣಿನ ರಸ ಹಾಕಿ ಚೆನ್ನಾಗಿ ತಿಕ್ಕಿ ಮುಲಾಮುಮಾಡಿ ನಾರುಹುಣ್ಣಿರುವ ಕಡೆ ಅಗತ್ಯವಿರುವಷ್ಟು ದಿವಸ ಲೇಪಿಸುವುದರಿಂದ ನಾರುಹುಣ್ಣು (ನರೋಲಿ - Wart) ವಾಸಿಯಾಗುತ್ತದೆ

6 ಕಣಿಗಿಲೆ ಸೊಪ್ಪು, ಬೆಣ್ಣೆ ಮತ್ತು ವೀಳ್ಯಕ್ಕೆ ಹಾಕುವ ಸುಣ್ಣ ಇವುಗಳನ್ನು ಸೇರಿಸಿ ಅರೆದು ಕಟ್ಟುವುದರಿಂದ ಉಗುರುಸುತ್ತು ಬೇಗ ವಾಸಿಯಾಗುತ್ತದೆ

7) ಎಲೆಯನ್ನು ಅರೆದು ಹುಳುಕಡ್ಡಿ (ಗಜಕರ್ಣ - Ring Worm) ಕಾಣಿಸಿಕೊಂಡ ಜಾಗದಮೇಲೆ ಲೇಪಿಸುವುದರಿಂದ ಹುಳುಕಡ್ಡಿ ವಾಸಿಯಾಗುತ್ತದೆ

## ಪಶುರೋಗ ಚಿಕಿತ್ಸೆಯಲ್ಲಿ

1) ತಲಾ ಒಂದೊಂದು ಹಿಡಿ ಕಣಿಗಿಲೆ ಕಾಂಡದ ತೊಗಟೆ, ದೇವಕಣಿಗಿಲೆ ತೊಗಟೆ, ಹಾಲಿವಾಣದ ತೊಗಟೆ, ಬೇವಿನ ತೊಗಟೆ ಮತ್ತು ತಲಾ ಒಂದು ತೊಲದಂತೆ ಮೈಲುತುತ್ತ ಮತ್ತು ಪಚ್ಚಕರ್ಪೂರ ಇವುಗಳನ್ನು ತೆಗೆದುಕೊಂಡು ಅರೆದು ಎಳ್ಳೆಣ್ಣೆ ಅಥವಾ ಬೇವಿನ ಎಣ್ಣೆಯಲ್ಲಿ ಕುದಿಸಿ ನೀರಿನ ಅಂಶವೆಲ್ಲಾ ಹಿಂಗಿದ ನಂತರ ಬಾಲದ ತುದಿಗೆ ಹಚ್ಚಿದರೆ ಬಾಲದ ನೂತಿ ವಾಸಿಯಾಗುತ್ತದೆ



# ಕಮರಾಕ್ಷಿಹಣ್ಣು (ದಾರೆಹುಳಿ)

| | |
|---|---|
| ವೈಜ್ಞಾನಿಕ ಹೆಸರು | ಅವೆರ್‍ರೋಹ ಕ್ಯಾರಂಬೋಲ<br>(Averrhoa carambola L ) |
| ಸಸ್ಯದ ಕುಟುಂಬ | ಆಕ್ಸಲಿಡೇಸಿ<br>(Oxalıdaceae) |
| ಕನ್ನಡದ ಇತರ ಹೆಸರುಗಳು | ಕಮರಾಕ್ ಮರ, ಕಮರಂಗ,<br>ಕೊಬರಿಕಾಯಿ, ಕೊಮರಿಕೆ |
| ಇತರ ಭಾಷೆಯ ಹೆಸರುಗಳು | ಸಂ. - ಕರ್ಮರಂಘ, ಬೃಹದ್ದಳ, ಪಿತ್ತಫಲ<br>ಹಿಂ - ಕಮರಾಕ್, ಕರ್ಮಲ್<br>ತ - ಕಮರತ್ತೈ, ತಮರತ್ತೈ<br>ತೆ. - ಕಮರತ, ಕಮರಂಗ ತಮರತಮು<br>ಇಂ - ಕ್ಯಾರಂಬೋಲ ಟೀ,<br>ಚೈನೀಸ್ ಗೂಸ್ ಬೆರ್ರಿ |

**ಪರಿಚಯ**

ಈ ಮರದ ತವರೂರು ದಕ್ಷಿಣ ಅಮೆರಿಕದ ಬ್ರೆಜಿಲ್ ದೇಶ. ಪೋರ್ಚುಗೀಸರ ಮೂಲಕ ಭಾರತಕ್ಕೆ ಆಗಮನವಾಯಿತೆಂದು ತಿಳಿದು ಬರುತ್ತದೆ ಈ ಮರವನ್ನು ಉದ್ಯಾನವನಗಳಲ್ಲಿ ಹಣ್ಣಿಗಾಗಿ ಬೆಳೆಸಲಾಗುತ್ತಿದೆ.

ಈ ಮರವು 15 ರಿಂದ 30 ಅಡಿಗಳಷ್ಟು ಎತ್ತರ ಬೆಳೆಯುತ್ತದೆ. ಕಾಂಡದ ಮೇಲೆ ಸಂಯುಕ್ತ ಎಲೆಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ ಒಂದು ಸಂಯುಕ್ತ ಎಲೆಯಲ್ಲಿ 5 ರಿಂದ 7 ಕಿರುಪತ್ರಗಳಿರುತ್ತವೆ. ಒಂದು ಕಿರುಪತ್ರದ ಉದ್ದ ಎರಡು ಅಂಗುಲ ಮತ್ತು ಅಗಲ ಒಂದು ಅಂಗುಲ ಇರುತ್ತದೆ ಹೂಗಳಿಗೆ ಕೆಂಪು ಮಿಶ್ರಿತವಾದ ನೀಲಿ ಬಣ್ಣವಿರುತ್ತದೆ ಹಸಿರು ಮಿಶ್ರಿತ ಹಳದಿ ಬಣ್ಣದ ಹಣ್ಣಿಗೆ 5, 6 ಅಥವಾ 8 ಏಣುಗಳಿರುತ್ತವೆ ಹಣ್ಣು ತಿನ್ನಲು ಒಗರು ಮತ್ತು ಹುಳಿಯಾಗಿರುತ್ತದೆ

## ಉಪಯೋಗಗಳು

1) ಮಾಗಿದ ಹಣ್ಣು ಸೇವನೆಯಿಂದ ರಕ್ತಮೂಲವ್ಯಾಧಿ ಗುಣವಾಗುತ್ತದೆ.

2) ಹಣ್ಣಿನ ಶರಬತ್ ಮಾಡಿ ಕುಡಿಯುವುದರಿಂದ ಜ್ವರದ ಭಾದೆಯಿಂದುಂಟಾದ ದಾಹ ಕಡಿಮೆಯಾಗುತ್ತದೆ.

3) ಹಣ್ಣಿನ ಸೇವನೆಯಿಂದ ಭೇದಿ ಮತ್ತು ವಾಂತಿ ನಿಲ್ಲುತ್ತದೆ

4) ಹಣ್ಣನ್ನು ಒಣಗಿಸಿ ತಯಾರಿಸಿದ ಚೂರ್ಣ ತಿನ್ನಿಸುವುದಿರಿಂದ ಜ್ವರ ಕಡಿಮೆಯಾಗುತ್ತದೆ.





ಚಿತ್ರ 25 · ಕರಡಿಕಣ್ಣಿನ ಗಡ್ಡೆ – ಹೂಗಳಿರುವ ರೆಂಬೆ

# ಕರಡಿಕಣ್ಣಿನ ಗೆಡ್ಡೆ (ಕೊಳಿಕುಟುಮನ ಗೆಡ್ಡೆ)

| | |
|---|---|
| ವೈಜ್ಞಾನಿಕ ಹೆಸರು | ಗ್ಲೊರಿಯೋಸ ಸುಪರ್ಬ<br>(Gloriosa superba L ) |
| ಸಸ್ಯದ ಕುಟುಂಬ | ಲಿಲಿಯೇಸಿ<br>(Liliaceae) |
| ಕನ್ನಡದ ಇತರ ಹೆಸರುಗಳು | ಅಕ್ಕತಂಗಿ ಬಳ್ಳಿ, ಅಗ್ನಿಶಿಖ,<br>ಕೋಳಿಕುಟುಕನ ಗೆಡ್ಡೆ, ಲಾಂಗುಲಿಕ,<br>ನಂಗುಲಿಕ, |
| ಇತರ ಭಾಷೆಯ ಹೆಸರುಗಳು | ಸಂ - ಅಗ್ನಿಮುಖಿ, ಅಗ್ನಿಶಿಖ, ಕಾಳಿಕಾರಿ,<br>ಗರ್ಭಗಾತಿನಿ, ಲಾಂಗುಲಿ,<br>ಲಾಂಗಲಿಕ, ಶುಕ್ರಪುಷ್ಪಿಕ<br>ಹಿಂ - ಕಲಿಹಾರಿ, ಲಾಂಗುಲಿ<br>ತ - ಅಕ್ಕನೀಚಲಂ, ಕಾರ್ಶಿಗೈಕಿಳುಂಗು<br>ತೆ - ಅಗ್ನಿಶಿಖ, ಕಾಲಪ್ಪಗಡ್ಡ, ಪೊಟ್ಟಿದುಂಪ<br>ಇಂ - ಕ್ಲೈಂಬಿಂಗ್ ಲಿಲ್ಲಿ, ಸುಪರ್ಬ ಗ್ಲೋರಿ,<br>ಸುಪರ್ಬಲಿಲ್ಲಿ |

**ಪರಿಚಯ**

ಈ ಗಿಡವು ಕಳ್ಳಿ ಕುರುಚಲು ಹಾಗೂ ಬೇಸಿಗೆಯಲ್ಲಿ ಎಲೆಯುದುರುವ ನಿತ್ಯಹರಿದ್ವರ್ಣ ಸಸ್ಯಾವರಣದಲ್ಲಿ ಪೊದೆಗಳ ಮಧ್ಯೆ ಹಬ್ಬಿ ಬೆಳೆಯುತ್ತದೆ. ಈ ಗಿಡವನ್ನು ಮತ್ತು ಈ ಗಿಡದ ಜಾತಿಗೆ ಸೇರಿದ ಇತರ ಪ್ರಬೇಧಗಳನ್ನು ಉದ್ಯಾನವನಗಳಲ್ಲಿ ಅಲಂಕಾರಿಕ ಗಿಡವಾಗಿ ಸಹ ಬೆಳೆಸುತ್ತಿದ್ದಾರೆ

ಗಿಡದಲ್ಲಿ ಹಬ್ಬುವ ಮತ್ತು ಕವಲುಗಳಿರುವ ಮೂಲಿಕಾ ಕಾಂಡವಿರುತ್ತದೆ ಭೂಮಿಯೊಳಗಿನ ಗಿಡದ ಬುಡದಲ್ಲಿ ದಪ್ಪ ಗೆಡ್ಡೆಯಿರುತ್ತದೆ ಕಾಂಡದ ಮೇಲೆ ತೊಟ್ಟಿಲ್ಲದ ಎಲೆಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ ಎಲೆಗಳ ತುದಿ ಅಡರುಬಳ್ಳಿ (ಟೆಂಡ್ರಿಲ್)ಯಾಗಿ

ಪರಿವರ್ತನೆಯಾಗಿ ಗಿಡವು ಮೆಳೆಯ ಮೇಲೆ ಹಬ್ಬಿ ಬೆಳೆಯಲು ಸಹಕರಿಸುತ್ತವೆ ಕೆಂಪುಮಿಶ್ರಿತ ಹಳದಿ ಹೂಗಳು ಕೊಂಬೆ ತುದಿಯ ಎಲೆಯ ಕಂಕುಳಲ್ಲಿರುತ್ತವೆ ಹೂವಿನ ಹೊರಸುತ್ತಿನ ಪುಷ್ಪಪಾತ್ರಾಪತ್ರಕಗಳು (Calyx) ಮತ್ತು ಒಳಸುತ್ತಿನ ಪುಷ್ಪದಳಗಳು (Petals) ರೂಪ ಮತ್ತು ಬಣ್ಣದಲ್ಲಿ ಒಂದೇ ತರಹವಿರುತ್ತವೆ ಆದುದರಿಂದ ಅವುಗಳನ್ನು 'ಪೆರಿಯಾಂತ್'ಗಳೆಂದು ಕರೆಯುತ್ತಾರೆ ಹೂವಿನಲ್ಲಿನ ಪೆರಿಯಾಂತ್‌ಗಳು ತೊಟ್ಟಿನ ಕಡೆ ಬಾಗಿದ್ದರೆ ಕೇಸರಗಳು ಅವುಗಳ ವಿರುದ್ಧ ದಿಕ್ಕಿನೆಡೆಗೆ ಬಾಗಿರುತ್ತವೆ

ಈ ಗಿಡದಲ್ಲಿ ಮುಖ್ಯವಾಗಿ ಉಪಯೋಗಿಸುವ ಭಾಗವೇ ಗೆಡ್ಡೆ. ಗೆಡ್ಡೆಗೆ ವಿಷದ ಗುಣವಿದೆ ಆಯುರ್ವೇದ ಗ್ರಂಥಗಳಲ್ಲಿ ಉಲ್ಲೇಖವಾಗಿರುವ ಏಳು ಮಧ್ಯಮತರದ ವಿಷಯುಕ್ತ ಗಡ್ಡೆಗಳಲ್ಲಿ ಕರಡಿಕಣ್ಣಿನ ಗೆಡ್ಡೆಯೂ ಒಂದು ಈ ಗೆಡ್ಡೆಯನ್ನು ಬಾಹ್ಯೋಪಯೋಗಿ ಔಷಧಿ ತಯಾರಿಸುವಾಗ ಶುದ್ಧಗೊಳಿಸದೆ ಬಳಸಬಹುದು ಆದರೆ ಉದರ ಸೇವನೆಗೆ ಕೊಡುವ ಔಷಧಿ ತಯಾರಿಸುವಾಗ ಗೆಡ್ಡೆಯನ್ನು ಶುಚಿಗೊಳಿಸಿದ ನಂತರವೇ ಉಪಯೋಗಿಸಬೇಕೆಂಬುದನ್ನು ಮರೆಯಬಾರದು, ಜೊತೆಗೆ ಗೆಡ್ಡೆಯನ್ನು ಅತ್ಯಲ್ಪ ಪ್ರಮಾಣದಲ್ಲಿ ಬಳಸಬೇಕು, ಹೆಚ್ಚಿನ ಪ್ರಮಾಣದಲ್ಲಿ ಬಳಸಿದ್ದೇ ಆದರೆ ವಾಂತಿ, ಭೇದಿಯಾಗುತ್ತದೆ ಇಲ್ಲವೆ ಕೆಲವೊಮ್ಮೆ ಹೃದಯಸ್ಥಂಬನವಾಗಿ ಮರಣವುಂಟಾಗುತ್ತದೆ ಆದುದರಿಂದ ಈ ಮೂಲಿಕೆಯಿಂದ ಚಿಕಿತ್ಸೆ ನಡೆಸುವಾಗ ಅನುಭವಿ ವೈದ್ಯರ ಸಲಹೆ ಸೂಚನೆಗಳಂತೆ ನಡೆದುಕೊಳ್ಳಬೇಕು (ಗೆಡ್ಡೆಯನ್ನು ಶುದ್ಧಿಗೊಳಿಸುವ ವಿಧಾನ ಗೆಡ್ಡೆಯನ್ನು ಮಣ್ಣೆಲ್ಲಾ ಹೋಗುವಂತೆ ಚೆನ್ನಾಗಿ ತೊಳೆದು ಸಣ್ಣ ಸಣ್ಣ ತುಂಡುಗಳಾಗಿ ಕತ್ತರಿಸಿ ಉಪ್ಪು ಹಾಕಿದ ಮಜ್ಜಿಗೆಯಲ್ಲಿ 4-5 ದಿವಸ ಚೆನ್ನಾಗಿ ನೆನೆಸಿ ನಂತರ ಹೊರತೆಗೆದು ನೀರಿನ ಅಂಶವೆಲ್ಲ ಹೋಗುವವರೆಗೆ ನೆರಳಿನಲ್ಲಿ ಒಣಗಿಸಿ ಸಂಗ್ರಹಿಸಿಟ್ಟುಕೊಂಡು ಉಪಯೋಗಿಸಬೇಕು )

ಗೆಡ್ಡೆಯಿಂದ ಪಿಷ್ಟವನ್ನು ತಯಾರಿಸಿಕೊಳ್ಳುವ ವಿಧಾನ ಗೆಡ್ಡೆಯನ್ನು ಚೆನ್ನಾಗಿ ಅರೆದು ನೀರಿನಲ್ಲಿ ಕದಡಿ ನೆನೆಯಿಟ್ಟು ಮೇಲಿನ ತಿಳಿಯನ್ನು ಬಸಿದು ಚೆಲ್ಲಬೇಕು. ಉಳಿದ ಗಸಿಯನ್ನು 6-7 ಸಾರಿ ಮೇಲಿನಂತೆ ನೀರಿನಲ್ಲಿ ತೊಳೆದು ತಳದಲ್ಲಿ ಉಳಿಯುವ ಗಸಿಯನ್ನು ಒಣಗಿಸಿಟ್ಟುಕೊಂಡು ಉಪಯೋಗಿಸಬಹುದು

## ಉಪಯೋಗಗಳು

1) ಬೇರಿನ ಗಂಧವನ್ನು (ಗೆಡ್ಡೆ) ವಿಷಕೀಟಗಳು, ಚೇಳು ಹಾವು ಕಡಿದಾಗ ಹೊರಲೇವನವಾಗಿ ಲೇಪಿಸುತ್ತಾರೆ

2) ಶುದ್ಧಿಗೊಳಿಸಿದ ಗೆಡ್ಡೆಯ ಚೂರುಗಳನ್ನು ನಿಗದಿಪಡಿಸಿದ ಪ್ರಮಾಣದಲ್ಲಿ ತಿನ್ನುವುದರಿಂದ ನಾಗರಹಾವಿನ ವಿಷ ಇಳಿಯುತ್ತದೆ.

3) ಶುದ್ಧಿಗೊಳಿಸಿದ ಗೆಡ್ಡೆಯ ಚೂರ್ಣ (ಗೊತ್ತಾದ ಪ್ರಮಾಣ ಮತ್ತು ತಕ್ಕ ಅನುಪಾನದೊಡನೆ) ಸೇವಿಸುವುದರಿಂದ ಗೊನ್ನೊರಿಯ, ಕುಷ್ಠ ಮೂಲವ್ಯಾಧಿ ಮತ್ತು ಹೊಟ್ಟೆನೋವು ಗುಣವಾಗುತ್ತದೆ

4) ಗೆಡ್ಡೆಯನ್ನು ಅರೆದು ಅಂಗಾಲು ಮತ್ತು ಅಂಗೈಗೆ ಲೇಪಿಸಿದರೆ ಸುಖಪ್ರಸವವಾಗುತ್ತದೆ.

5) ಗೆಡ್ಡೆಯಿಂದ ತಯಾರಿಸಿದ ಬಿಳಿಬಣ್ಣದ ಪಿಷ್ಟವನ್ನು ದಿವಸಕ್ಕೆ ಸುಮಾರು 780 ಮಿ.ಗ್ರಾಂ ಪ್ರಮಾಣದಷ್ಟನ್ನು ಜೇನುತುಪ್ಪದೊಡನೆ ತಿನ್ನಿಸುವುದರಿಂದ ಗೊನ್ನೊರಿಯ ಗುಣವಾಗುತ್ತದೆ

6) ಈ ಗಿಡದ ಎಲೆಯ ರಸವನ್ನು ತಲೆಗೆ ಮಾತ್ರ ಹಚ್ಚುವುದರಿಂದ ಹೇನುಗಳು ನಿವಾರಣೆಯಾಗುತ್ತವೆ (ರಸವನ್ನು ಯಾವುದೇ ಕಾರಣಕ್ಕೂ ಸೇವಿಸಬಾರದು ವಿಷಯುಕ್ತವಾಗಿರುತ್ತದೆ)

## ಪಶುರೋಗ ಚಿಕಿತ್ಸೆಯಲ್ಲಿ

1) ಗೆಡ್ಡೆ ಅಥವಾ ಗೆಡ್ಡೆಯಿಂದ ತಯಾರಿಸಿದ ಬಿಳಿಬಣ್ಣದ ಪಿಷ್ಟವನ್ನು ಸುಮಾರು 250 ಮಿ ಗ್ರಾಂ. ನಿಂದ 500 ಮಿ.ಗ್ರಾಂನಷ್ಟು ಪಶುಗಳಿಗೆ ತಿನ್ನಿಸಿದರೆ ಜಂತುಹುಳುಗಳು ಬೀಳುತ್ತವೆ.

2) ಗೆಡ್ಡೆಯನ್ನು ಅರೆದು ನೆಲಗಿರುಬ ಕಡಿದಾಗ ಹೊರಲೇಪನವಾಗಿ ಉಪಯೋಗಿಸುತ್ತಾರೆ





ಚಿತ್ರ 26 : ಕರಿಉಮ್ಮತ್ತಿ - ಹೂ ಮತ್ತು ಕಾಯಿಗಳಿರುವ ರೆಂಬೆ

# ಕರಿಉಮ್ಮತ್ತಿ

| | |
|---|---|
| ವೈಜ್ಞಾನಿಕ ಹೆಸರು | ದತೂರ ಮೆಟಲ್ (Datura metel L )<br>= ದ ಫಸ್ಟೋಸ (D fastuosa L ) |
| ಸಸ್ಯದ ಕುಟುಂಬ | ಸೊಲನೇಸಿ (Solanaceae) |
| ಕನ್ನಡದ ಇತರ ಹೆಸರುಗಳು | ಉಮ್ಮತ್ತಿ ಗಿಡ, ಉನ್ಮತ್ತಿಗಿಡ |
| ಇತರ ಭಾಷೆಯ ಹೆಸರುಗಳು | ಸಂ - ಕೃಷ್ಣದಸ್ತೂರ, ಉನ್ಮತ್ತ<br>ಹಿಂ. - ಕಾಲದತ್ತೂರ, ಸಾದಾದತ್ತೂರ<br>ತ - ಕರುಉಮ್ಮತ್ತಿ, ವೆಲ್ಲುಮ್ಮತ್ತಿ<br>ತೆ - ನಲ್ಲಉಮ್ಮತ್ತಿ<br>ಇಂ - ಥಾರ್ನ ಆಪಲ್ |

**ಪರಿಚಯ**

ಈ ಗಿಡವು ಸಾಗುವಳಿ ಜಮೀನಿನಲ್ಲಿ, ಬೀಳು ಭೂಮಿಯಲ್ಲಿ ಮತ್ತು ಹಾದಿ ಬದಿಯ ಹಳ್ಳದಲ್ಲಿ ಬೆಳೆಯುತ್ತದೆ ಫಲವತ್ತಾದ ಕಡೆ ಈ ಗಿಡವು 2 ರಿಂದ 3 ಅಡಿ ಎತ್ತರ ಬೆಳೆಯುತ್ತದೆ ಆದರೆ ಒಣ ಭೂಮಿಯಲ್ಲಿ ಗಿಡದ ಎತ್ತರ $1\ ^1/_2$ ಯಿಂದ 2 ಅಡಿ ಇರುತ್ತದೆ ಗಿಡವು ರಸಭರಿತವಾಗಿದ್ದು ಒಂದು ಬಗೆಯ ದುರ್ಗಂಧ ಹೊಂದಿರುತ್ತದೆ ಗಿಡದ ಎಲ್ಲಾ ಭಾಗಗಳ ಮೇಲೆ ರೋಮಗಳಿರುತ್ತವೆ ಕರ್ನೆಯಾಕಾರದ ಸರಳ ಎಲೆಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ. ಎಲೆಯ ಅಂಚು ದೊಡ್ಡ ಹಲ್ಲಿನಂತೆ ಸೀಳಿರುತ್ತದೆ ಎಲೆಗೆ ಅಸಮ ಬುಡವಿರುತ್ತದೆ ತಿಳಿಕೆಂಪು ಮಿಶ್ರಿತ, ಇಲ್ಲವೆ ನೇರಳೆ ಅಥವಾ ಬಿಳಿಮಿಶ್ರಿತ ಹಳದಿ ಬಣ್ಣದ ದೊಡ್ಡ ತುತ್ತೂರಿಯಾಕಾರದ ಹೂಗಳು ಒಂಟಿಯಾಗಿ ಕವಲುಗಳ ಕಂಕುಳಲ್ಲಿರುತ್ತವೆ ಚಿಕ್ಕ ತೊಟ್ಟಿನಮೇಲೆ ಗೋಳಾಕಾರದ ಹಣ್ಣಿರುತ್ತದೆ ಮತ್ತು ಅದರ ಮೇಲೆಲ್ಲಾ ಮುಳ್ಳುಗಳಿರುತ್ತವೆ ಹಣ್ಣಿನ ಬುಡದಲ್ಲಿ ತಟ್ಟೆಯಂತಹ ಶಾಶ್ವತ ಪುಷ್ಪ ಪಾತ್ರೆಯಿರುತ್ತದೆ

ಈ ಗಿಡದಲ್ಲಿ ಪ್ರಾಕೃತಿಕವಾಗಿ ಹಲವಾರು ತಳಿಗಳು ಕಂಡು ಬರುತ್ತವೆಯಾದರೂ, ಔಷಧ ತಯಾರಿಕೆಗೆ ತಿಳಿ ನೇರಳೆ ಬಣ್ಣದ ಕಾಂಡ ಮತ್ತು ನೇರಳೆಮಿಶ್ರಿತ ಬಿಳಿ ಹೂವಿನ ತಳಿ ಮಾತ್ರ ಉತ್ತಮವೆಂಬ ಅಭಿಪ್ರಾಯವಿದೆ

## ಉಪಯೋಗಗಳು

1 ಉಮ್ಮತ್ತಿಯ ಬೇರನ್ನು ನೀರಿನಲ್ಲಿ ಅರೆದು ಕುಡಿಸುವುದರಿಂದ ಚೇಳಿನ ವಿಷ ಪರಿಹಾರವಾಗುತ್ತದೆ

2 ಕರಿ ಉಮ್ಮತ್ತಿಯ ಬೇರನ್ನು ಹಾಲಿನಲ್ಲಿ ಬೇಯಿಸಿ, ತುಪ್ಪದಲ್ಲಿ ಹುರಿದು, ನೀರಿನಲ್ಲಿ ಅರೆದು ದೊಡ್ಡ ನೆಲ್ಲಿಕಾಯಿ ಗಾತ್ರದ ಮಾತ್ರೆ ಮಾಡಿಟ್ಟುಕೊಂಡು ರಾತ್ರಿ ಮತ್ತು ಬೆಳಿಗ್ಗೆ ನೀರಿನಲ್ಲಿ ಕದಡಿ ಸೇವಿಸುವುದರಿಂದ ಉನ್ಮಾದ ಕಡಿಮೆಯಾಗುತ್ತದೆ ಸೇವಿಸಿದ ಕೂಡಲೇ ಮಲಗಿದರೆ ಸುಖವಾಗಿ ನಿದ್ರೆ ಬರುತ್ತದೆ ನಿದ್ರೆ ಹೆಚ್ಚಾದರೆ ಹಾಲಿಗೆ ಸಕ್ಕರೆ ಹಾಕಿ ಸೇವಿಸುವುದರಿಂದ ನಿದ್ರೆ ಕಡಿಮೆಯಾಗುತ್ತದೆ

3 ಉಮ್ಮತ್ತಿ ಬೇರು ಮತ್ತು ಶುದ್ಧಿ ಮಾಡಿದ ಚಿತ್ರಮೂಲದ ಬೇರನ್ನು ಸಮಭಾಗ ನೀರಿನಲ್ಲಿ ತೇಯ್ದು ಗಂಡಾಮಾಲೆಯ ಮೇಲೆ ಲೇಪಿಸುತ್ತಾರೆ

4 ಕರಿ ಉಮ್ಮತ್ತಿ ಗಿಡದ ಎಲೆಯ ರಸ 4 ಭಾಗ ಮತ್ತು ಒಂದು ಭಾಗ ಎಳ್ಳೆಣ್ಣೆ ಸೇರಿಸಿ ತಲೆಗೆ ಲೇಪಿಸುವುದರಿಂದ ತಲೆಯಲ್ಲಿನ ಹೇನುಗಳು ನಾಶವಾಗುತ್ತವೆ.

5 ಎಲೆ ರಸ 350 ಮಿ ಲೀ., ಎಳ್ಳೆಣ್ಣೆ 140 ಮಿ ಲೀ. ಇವುಗಳನ್ನು ಬಾಂಡಲಿಯಲ್ಲಿ ಕಾಯಿಸಿ ಹದಕ್ಕೆ ಬಂದಾಗ 2ಗ್ರಾಂ ಪುಡಿ ಮಾಡಿದ ಮೈಲುತುತ್ತವನ್ನು ಹಾಕಿ ತಿರುವಿ ಎಣ್ಣೆಯನ್ನು ಸೋಸಿ ಬಾಟಲಿನಲ್ಲಿ ಸಂಗ್ರಹಿಸಿಟ್ಟುಕೊಳ್ಳಬೇಕು ಈ ತೈಲವನ್ನು ಲೇಪಿಸುವುದರಿಂದ ಕೀವು ಸುರಿಯುವ ಗಾಯಗಳು ಹಾಗೂ ಹಲವಾರು ವಿಧದ ಚರ್ಮ ವ್ಯಾಧಿಗಳು ಗುಣವಾಗುತ್ತವೆ. ಇದೇ ಎಣ್ಣೆಯನ್ನು ಕಿವಿಗೆ ಹಾಕುವುದರಿಂದ ಕಿವಿ ಸೋರುವುದು ನಿಲ್ಲುತ್ತದೆ

6 ಎಲೆಯನ್ನು ಒಣಗಿಸಿ ಪುಡಿಮಾಡಿ ಅದಕ್ಕೆ ಹುರಿಗಡಲೆಸೇರಿಸಿ ಚುಟ್ಟಮಾಡಿ ಸೇದುವುದರಿಂದ ಆಸ್ತಮ ಹತೋಟಿಗೆ ಬರುತ್ತದೆ

7 ಕರಿ ಉಮ್ಮತ್ತಿಯ ಕಾಯಿಯನ್ನು ಬೆಂಬುದಿಯಲ್ಲಿಟ್ಟು ಪಕ್ವಮಾಡಿ ಅರೆದು, ಬಿಲ್ಲೆ ಮಾಡಿ ಉಮ್ಮತ್ತಿಯ ಎಲೆಯಲ್ಲಿಟ್ಟು ಕಟ್ಟುವುದರಿಂದ ತೊಡವಾಳ (ಕರಂಡ) ಒಡೆದು ವಾಸಿಯಾಗುತ್ತದೆ ಈ ಚಿಕಿತ್ಸೆಯನ್ನು 3-4 ದಿವಸ ಮುಂದುವರಿಸಬೇಕು

8 ಉಮ್ಮತ್ತದ ಬೀಜ ಮತ್ತು ಸೈಂಧಲವಣವನ್ನು ಅರೆದು ಅದರ ಸಮ ಪ್ರಮಾಣ ಸಾಸಿವೆಎಣ್ಣೆ ಅಥವಾ ಬೇವಿನ ಎಣ್ಣೆ ಸೇರಿಸಿ ಕಾಯಿಸಿ ಸೋಸಿ ತೆಗೆದುಕೊಂಡ ಎಣ್ಣೆಯ ಲೇಪನದಿಂದ ಬಿಳಿ ಚಿಬ್ಬು (Chloasma - Liver Spots) ವಾಸಿಯಾಗುತ್ತದೆ

9 ಉಮ್ಮತ್ತಿಯ ಎಲೆಯನ್ನು ಬಿಸಿ ಮಾಡಿ ಕೆನ್ನೆಬೀಗು (Mumps)ಯಿರುವ ಕಡೆ ಕಾವುಟ ಕೊಟ್ಟ ನಂತರ ಇದೇ ಎಲೆಗಳನ್ನು ಅರೆದು ಹಚ್ಚುವುದರಿಂದ ಕೆನ್ನೆಬೀಗು ಕಡಿಮೆಯಾಗುತ್ತದೆ.

## ಪಶುರೋಗ ಚಿಕಿತ್ಸೆಯಲ್ಲಿ

ಕರಿಉಮ್ಮತ್ತಿ ಬೀಜ 5ಗ್ರಾಂ, ಚಿರಾಯಿತದ ಕಡ್ಡಿ 10ಗ್ರಾಂ, ಸೋರುಪ್ಪು 10ಗ್ರಾಂ ಆರತಿ ಕರ್ಪೂರ 10ಗ್ರಾಂ, ಇವುಗಳನ್ನು ಒಟ್ಟಿಗೆ ಅರೆದು ದಿವಸಕ್ಕೆರಡು ಬಾರಿಯಂತ 4-5 ದಿವಸ ನೀರಿನೊಡನೆ ಕುಡಿಸುವುದರಿಂದ ದೊಡ್ಡ ರೋಗ ಹತೋಟಿಗೆ ಬರುತ್ತದೆ.





ಚಿತ್ರ 27. ಕಸ್ತೂರಿ ಜಾಲಿ

# ಕಸ್ತೂರಿ ಜಾಲಿ

| | |
|---|---|
| ವೈಜ್ಞಾನಿಕ ಹೆಸರು | ಅಕೇಸಿಯ ಫಾರ್ನೇಸಿಯಾನ<br>[Acacia farnesiana Willd ] |
| ಸಸ್ಯದ ಕುಟುಂಬ | ಮಿಮೊಸೇಸಿ (Mimosaceae) |
| ಕನ್ನಡದ ಇತರ ಹೆಸರುಗಳು | ಕಗ್ಗೊಗ್ಗಬಳ್ಳಿ ಮರ, ಕರಿಕಸ್ತೂರಿ,<br>ಕಸ್ತೂರಿ ಗೊಬ್ಬಳ್ಳಿ, ಕಿರಿಜಾಲಿ,<br>ಬ್ಯಾದಳ ಗಿಡ, ಸಣ್ಣಜಾಲಿ, |
| ಇತರ ಭಾಷೆಯ ಹೆಸರುಗಳು | ಸಂ - ಅರಿಮೇಧ, ಇರಿಮೇಧ<br>ಹಿ - ಗಂಧ್ ಬಾಬುಲ್, ವಿಲಾಯಿತಿ ಕಿಕಾರ್<br>ತ - ಕಸ್ತೂರಿವೇಲ್, ವಾವಲಂ, ಪಿಕ್ಕರುವೈಲ್<br>ತೆ - ಕಸ್ತೂರಿತುಮ್ಮ, ಕೆಂಪುತುಮ್ಮ, ನುಗತುಮ್ಮ<br>ಇಂ - ಕ್ಯಾಸಿಯಫ್ಲವರ್, ಸೆಂಟೆಡ್<br>ಬಾಬುಲ್, ಸ್ಪಾಂಜ್ ಟ್ರೀ |

**ಪರಿಚಯ**

ಕಸ್ತೂರಿ ಜಾಲಿಯ ತವರು ವೆಸ್ಟ್ ಇಂಡೀಸ್ ಮತ್ತು ಉಷ್ಣವಲಯದ ಅಮೆರಿಕ ಎಂದು ತಿಳಿಯಲಾಗಿದೆ ಈ ಪೊದರು ಗಿಡವು ಕರ್ನಾಟಕದ ಎಲ್ಲಾ ಬಗೆಯ ವಾತಾವರಣದಲ್ಲೂ ಚೆನ್ನಾಗಿ ಬೆಳೆಯುತ್ತದೆ ಕೆಲವು ಕಡೆ ಇದನ್ನು ಬೇಲಿ ಗಿಡವಾಗಿಯೂ ಸಹ ಬೆಳೆಸಲಾಗುತ್ತಿದೆ ಸುವಾಸನೆಯಿಂದ ಕೂಡಿದ ದುಂಡನೆಯ ಪುಷ್ಪಮಂಜರಿಯನ್ನು ದೇವರ ಪೂಜೆಗೂ ಬಳಸುತ್ತಾರೆ

ಪೊದರಿನಂತೆ ಬೆಳೆಯುವ ಕಸ್ತೂರಿ ಜಾಲಿಯು ಉತ್ಕೃಷ್ಟವಾದ ನೆಲದಲ್ಲಿ ಮತ್ತು ವಾತಾವರಣದಲ್ಲಿ 15 ರಿಂದ 18 ಅಡಿ ಎತ್ತರದ ಮರವಾಗಿ ಬೆಳೆಯಬಲ್ಲದು. ಗಿಡದ ತುಂಬ ಮುಳ್ಳುಗಳಿರುತ್ತವೆ ಸಂಯುಕ್ತ ಪರ್ಣದಲ್ಲಿ ಕಿರು ಎಲೆಗಳು ಎಲೆ ತೊಟ್ಟಿನ ರೆಂಬೆಗಳ ಮೇಲೆ ಅಭಿಮುಖವಾಗಿ ಜೋಡಣೆಯಾಗಿರುತ್ತವೆ ಸಂಯುಕ್ತ

ಎಲೆಯ ಬುಡದಲ್ಲಿರುವ ವೃಂತವರ್ಣಗಳು (Stipules) ಮುಳ್ಳುಗಳಾಗಿ ರೂಪಾಂತರವಾಗಿರುತ್ತವೆ ಅತ್ಯಂತ ಸಣ್ಣ ಹಳದಿ ಬಣ್ಣದ ಹೂಗಳು ಒತ್ತಾಗಿ ನೇರಿರುವುದರಿಂದ ಪುಷ್ಪಮಂಜರಿಯು ಗೋಳಾಕಾರವಾಗಿರುವಂತೆ ಕಾಣುತ್ತದೆ ಹೂಗಳಿಗೆ ಒಳ್ಳೆಯ ಸುವಾಸನೆಯಿರುತ್ತದೆ ಕಂದು ಮಿಶ್ರಿತ ಕಪ್ಪು ಬಣ್ಣದ ಕಾಯಿ ದುಂಡಗಿರುತ್ತದೆ ಕಾಯಿಯ ಉದ್ದ ಸಾಮಾನ್ಯವಾಗಿ 3 ರಿಂದ 4 ಅಂಗುಲ ಇರುತ್ತದೆ

## ಉಪಯೋಗಗಳು

1 ತೊಗಟೆಯ ಚೂರ್ಣವನ್ನು ಶುಂಠಿ ನೇರಿಸಿ ಹಲ್ಲುಜ್ಜುವುದರಿಂದ ಹಲ್ಲುನೋವು ವಸಡಿನಿಂದ ರಕ್ತ ಸೋರುವುದು ನಿಲ್ಲುತ್ತದೆ

2 ತೊಗಟೆಯನ್ನು ಅರೆದು ಗಂಧ ಮಾಡಿಕೊಂಡು ತೊನ್ನಿರುವ ಕಡೆ ಲೇಪ ಮಾಡುವುದರಿಂದ ಬೇಗ ವರ್ಣವುಂಟಾಗುತ್ತದೆ

3 ತೊಗಟೆಯ ಕಷಾಯದಿಂದ ಸ್ನಾನ ಮಾಡುವುದರಿಂದ ಕುಷ್ಟರೋಗ ಹಾಗೂ ಹಲವಾರು ಚರ್ಮರೋಗಗಳು ವಾಸಿಯಾಗುತ್ತವೆ

4 ತೊಗಟೆಯ ಕಷಾಯ ಅಥವಾ ಚೂರ್ಣ ಸೇವನೆಯಿಂದ ಅರುಚಿ, ಭೇದಿ, ನಿಲ್ಲುತ್ತದೆ ಹಾಗೂ ರಕ್ತ ಶುದ್ಧಿಯಾಗುತ್ತದೆ

5 ತೊಗಟೆಯ ಚೂರ್ಣ ಸೇವನೆಯಿಂದ ಅಸ್ತಮರೋಗ ಗುಣವಾಗುತ್ತದೆ

6 ತೊಗಟೆಯ ಚೂರ್ಣ ಅಥವಾ ಕಷಾಯ ಸೇವನೆಯಿಂದ ಪ್ರದರರೋಗ ನಿವಾರಣೆಯಾಗುತ್ತದೆ

6 ತೊಗಟೆಯ ಚೂರ್ಣವನ್ನು ಸ್ಥೂಲದೇಹಿಗಳು ಸೇವಿಸುವುದರಿಂದ ಕೊಬ್ಬಿನ ಅಂಶ ಕಮ್ಮಿಯಾಗಿ ಆರೋಗ್ಯವಂತರಾಗುತ್ತಾರೆ

7 ತೊಗಟೆಯ ಚೂರ್ಣ ಸೇವನೆಯಿಂದ ಮೇದೋಜಿರಕ ಗ್ರಂಥಿಯ ಊತವನ್ನು ಕಡಿಮೆ ಮಾಡುತ್ತದೆ ಮತ್ತು ಪ್ರಮೇಹ ರೋಗಿಗಳಿಗೆ ಇದೊಂದು ಒಳ್ಳೆಯ ಔಷಧಿ

8 ಚಿಗುರೆಲೆಗಳನ್ನು ಅರೆದು ಸೇವಿಸುವುದರಿಂದ ಗೊನ್ನೊರಿಯ ರೋಗ ಗುಣವಾಗುತ್ತದೆ.



# ಕಾಡು ಜೀರಿಗೆ

| | |
|---|---|
| ವೈಜ್ಞಾನಿಕ ಹೆಸರು | ಸೆಂಟ್ರಾಥೀರಂ ಆ್ಯಂಥೆಲ್‌ಮಿಂಟಿಕಂ [Centratherum anthelminticum (Willd ) O Kuntze] =ವೆರ್ನೊನಿಯ ಆ್ಯಂಥೆಲ್‌ಮಿಂಟಿಕಂ [ = Vernonia anthelminticum Willd ] |
| ಸಸ್ಯದ ಕುಟುಂಬ | ಆಸ್ಟಿರೇಸಿ (Asteracea) |
| ಕನ್ನಡದ ಇತರ ಹೆಸರುಗಳು | ಕರೀಜೀರಿಗೆ, ಕಾಲಜೀರಿಗೆ, ವಕುಷಿ, ವನಜೀರಿಗೆ |
| ಇತರ ಭಾಷೆಯ ಹೆಸರುಗಳು | ಸಂ - ಅಡವಿಜೀರಿಕ, ಅವಾಲ್ ಗುಜ, ಕೃಷ್ಣಜೀರಿಕ, ವಕುಚಿ, ಸೊಮರಾಜ, ಸೊಮ್ರಾಜಿ |
| | ಹಿಂ - ಬಕ್ಚಿ, ಸೊಮ್ರಾಜ್, |
| | ತ - ಕಾಟ್ಟುಶಿರಗಂ |
| | ತೆ - ಅಡವಿಜಿಲಕರ |
| | ಇಂ - ಪರ್ಪಲ್ ಫ್ಲಬೇನ್, ವೈಲ್ಡ್ ಕುಮಿನ್ |

**ಪರಿಚಯ**

ಕಾಡು ಜೀರಿಗೆಯು ಬೀಳು ಭೂಮಿಯಲ್ಲಿ, ಘಟ್ಟ ಪ್ರದೇಶದ ಹುಲ್ಲುಗಾವಲಿನಲ್ಲಿ ಮತ್ತು ಕೆಲವು ಕಡೆ ಕೈತೋಟದಲ್ಲಿ ಕಳೆಯಂತೆ ಬೆಳೆಯುತ್ತದೆ ಕೆಲವೊಮ್ಮೆ ಬೀಜಗಳಿಗಾಗಿ ಸಣ್ಣ ಪ್ರಮಾಣದಲ್ಲಿ ಸಾಗುವಳಿ ಸಹ ಮಾಡುತ್ತಾರೆ

ಈ ಮೂಲಿಕೆಯು 2-3 ಅಡಿ ಎತ್ತರ ಬೆಳೆಯುತ್ತದೆ. ರೆಂಬೆಗಳ ಮೇಲೆ ತುಪ್ಪಳದಂಥ ರೋಮಗಳಿರುತ್ತವೆ ಸರಳವಾದ ಎಲೆಗಳು ಪರ್ಯಾಯವಾಗಿ

ಜೋಡಣೆಯಾಗಿರುತ್ತವೆ ಎಲೆಗಳು ದೀರ್ಘ ವೃತ್ತಾಕಾರವಾಗಿದ್ದು ಅಂಚು ಗರಗಸದಂತಿರುತ್ತದೆ ಎಲೆಗಳ ಮೇಲೂ ತುಪ್ಪಳದಂಥ ರೋಮಗಳಿರುತ್ತವೆ. ತಿಳಿನೇರಳೆ ಬಣ್ಣದ ಹೂಗಳು ಚಂಡುರೀತಿಯ ಪುಷ್ಪಮಂಜರಿಯಲ್ಲಿ ಜೋಡಣೆಯಾಗಿರುತ್ತವೆ. ಒಂದು ಹೂ ಚಂಡಿನಲ್ಲಿ ಸುಮಾರು 40 ಹೂಗಳಿರುತ್ತವೆ. ಕಾಯಿಯ ಮೇಲಿನ ಅಂಚಿನ ಸುತ್ತ ನಸುಗೆಂಪು ಬಣ್ಣದ ಬೀಜತುಪ್ಪಳವಿರುತ್ತದೆ.

## ಉಪಯೋಗಗಳು

1 ಎಲೆ ಮತ್ತು ಬೇರುಗಳನ್ನು ಅರೆದು ಸಂಧಿವಾತದಲ್ಲಿ ಹೊರ ಲೇಪನವಾಗಿ ಬಳಸುತ್ತಾರೆ.

2 ಎಲೆ ಮತ್ತು ಬೇರನ್ನು ಅರೆದು ಚೇಳು ಕಡಿದ ಜಾಗದ ಮೇಲೆ ಲೇಪಿಸುವುದರಿಂದ ವಿಷದ ಪ್ರಭಾವ ಕಡಿಮೆಯಾಗುತ್ತದೆ

3 ಕಾಡುಜೀರಿಗೆ ಎಲೆಯ ರಸವನ್ನು ತಲೆಗೆ ಹಚ್ಚುವುದರಿಂದ ತಲೆಯ ಹೊಟ್ಟು ಮತ್ತು ಹೇಸುಗಳು ನಿವಾರಣೆಯಾಗುತ್ತವೆ

4 ಬೀಜಗಳನ್ನು ನೀರಿನಲ್ಲಿ ಅರೆದು ಲೇಪಿಸುವುದರಿಂದ ಊತ, ನೋವು ಮತ್ತು ಹಲವಾರು ವಿಧದ ಚರ್ಮರೋಗಗಳು ನಿವಾರಣೆಯಾಗುತ್ತವೆ

5 ಬೀಜ 4 ಭಾಗ, ಹಾರಿತಾಳ [(ತಾಳಕ) yellow orpiment] 1 ಭಾಗ ಇವುಗಳನ್ನು ಗೋಮೂತ್ರದಲ್ಲಿ ಅರೆದು ಲೇಪಿಸುವುದರಿಂದ ತೊನ್ನು ವಾಸಿಯಾಗುತ್ತದೆ

6 ಕಾಡುಜೀರಿಗೆ 8 ಗುಂಜಿಮತ್ತು, ಕರಿಎಳ್ಳು 8ಗುಂಜಿ ಇವುಗಳನ್ನು ಬಿಸಿ ನೀರಿನಲ್ಲಿ ಅರೆದು ಕುಡಿಯುವುದರಿಂದ ಜ್ವರ ಮತ್ತು ಎಲ್ಲಾ ತರಹದ ಚರ್ಮ ವ್ಯಾದಿಗಳು ಗುಣವಾಗುತ್ತವೆ

7 ಕಾಡು ಜೀರಿಗೆಯ ಸೇವನೆಯಿಂದ ಗರ್ಭಾಶಯ ಶುದ್ಧಿಯಾಗುತ್ತದೆ ಮತ್ತು ಎದೆ ಹಾಲು ಹೆಚ್ಚಾಗಿ ಉತ್ಪತ್ತಿಯಾಗುತ್ತದೆ.

8 ಕಾಡು ಜೀರಿಗೆಯ ಬೀಜವನ್ನು ಅರೆದು ಮುಖಕ್ಕೆ ರಾತ್ರಿ ಲೇಪಿಸಿ ಬೆಳಗ್ಗೆ ತೊಳೆಯುವುದರಿಂದ ಮುಖ ಕಾಂತಿಯುಕ್ತವಾಗುತ್ತದೆ



ಚಿತ್ರ 29. ಕಾರೆ - ಹೂ ಮತ್ತು ಕಾಯಿಗಳಿರುವ ರೆಂಬೆಗಳು

# ಕಾರೆ

| | |
|---|---|
| ವೈಜ್ಞಾನಿಕ ಹೆಸರು | ಕ್ಯಾಂತಿಯಂ ಪಾರ್ವಿಫ್ಲೋರಂ [Canthium parviflorum Lam ] |
| ಸಸ್ಯದ ಕುಟುಂಬ | ರುಬಿಯೇಸಿ [Rubiaceae] |
| ಕನ್ನಡದ ಇತರ ಹೆಸರುಗಳು | ಅಚಚುಮುಳ್ಳು, ಕಾರೆಗಿಡ, ಗಂಡುಕ ಕೊರ್ಲ |
| ಇತರ ಭಾಷೆಯ ಹೆಸರುಗಳು | ಸಂ - ಗಂಗೇರುಕಿ<br>ತ - ಕಾರ್ರೈಚೇಡಿ<br>ತೆ - ಬಲುಸು ಚೆಟ್ಟು<br>ಇಂ - ಕ್ಯಾಂತಿಯಂ |

**ಪರಿಚಯ**

ಈ ಮೂಲಿಕೆಯು ಕಳ್ಳಿ ಕುರುಚಲು ಗಿಡಗಳನ್ನೊಳಗೊಂಡ ಸಸ್ಯಾವರಣದಲ್ಲಿ, ಕಲ್ಲುಗುಡ್ಡೆಗಳಲ್ಲಿ ಬಂಜರು ಭೂಮಿಯಲ್ಲಿ ಕಳೆಯಂತೆ ಬೆಳೆಯುತ್ತದೆ ಈ ಮೂಲಿಕೆಯು ಬೆಳೆಯುವ ಸ್ಥಳವನ್ನಾಧರಿಸಿ ಕೆಲವು ಕಡೆ ಕುರುಚಲು ಗಿಡದಂತೆ, ಸಣ್ಣ ಪೊದರಿನಂತೆ ಇಲ್ಲವೆ ಸಣ್ಣ ಮರದಂತೆ ಬೆಳೆಯುತ್ತದೆ ಎಲೆಗಳು ಕಾಂಡದ ಮೇಲೆ ಅಭಿಮುಖವಾಗಿ ಜೋಡಣೆಯಾಗಿರುತ್ತವೆ ಎಲೆಗಳ ಕಂಕುಳಲ್ಲಿ ಚೂಪಾದ ಮತ್ತು ಗಟ್ಟಿಯಾದ ಮುಳ್ಳುಗಳಿರುತ್ತವೆ ಅವು ಮಾರ್ಪಾಟಾದ ಕಂಕುಳು ಮೊಗ್ಗುಗಳು ಹೂಗಳು ಅತ್ಯಂತ ಸಣ್ಣದಾಗಿದ್ದು ಅಷ್ಟೇನು ಆಕರ್ಷಕವಾಗಿರುವುದಿಲ್ಲ. ಹೂಗಳು ಮಧ್ಯಾರಂಬಿ ಹೂ ಗೊಂಚಲಿನಲ್ಲಿ ಸಮಾವೇಶಗೊಂಡಿರುತ್ತವೆ ಹಣ್ಣುಗಳು ಮಾಗಿದಾಗ ಕಂದು ಬಣ್ಣಕ್ಕೆ ತಿರುಗುತ್ತವೆ ಒಳಗಡೆ ಎರಡು ಬೀಜಗಳಿರುತ್ತವೆ ಹಣ್ಣು ಸಿಹಿಯಾಗಿದ್ದು ತಿನ್ನಲು ಯೋಗ್ಯವಾಗಿರುತ್ತದೆ

## ಉಪಯೋಗಗಳು

1 ಬೇರಿನ ಚೂರ್ಣ ಸೇವನೆಯಿಂದ ಜಂತು ಹುಳುಗಳು ನಾಶವಾಗುತ್ತವೆ

2 ಕಾರೇಕಾಯಿಯನ್ನು ಜೇನುಮೇಣ ಮತ್ತು ಸೈಂಧ ಲವಣದೊಡನೆ ಅರೆದು ಲೇಪಿಸುವುದರಿಂದ ಬಿಳಿಯ ಚೆಬ್ಬು (ಸಿದ್ಮ) ವಾಸಿಯಾಗುತ್ತದೆ

3 ಎಲೆ ಅಥವಾ ಬೇರಿನ ಕಷಾಯ ಸೇವನೆಯಿಂದ ಭೇದಿ, ಆಮಭೇದಿ ಗುಣವಾಗುತ್ತದೆ

## ಪಶುರೋಗ ಚಿಕಿತ್ಸೆಯಲ್ಲಿ

ಒಂದು ಹಿಡಿ ಕಾರೆ ಗಿಡದ ಎಲೆ ತೆಗೆದುಕೊಂಡು ಅದಕ್ಕೆ 60 ಗ್ರಾಂ ಮೆಂತ್ಯ ಸೇರಿಸಿ ನುಣ್ಣಗೆ ಅರೆದು ಒಂದು ಸೇರು ಮಜ್ಜಿಗೆಗೆ ಸೇರಿಸಿ ಬೆಳಿಗ್ಗೆ $^1/_2$ ಸೇರು ಮತ್ತು ರಾತ್ರಿ $^1/_2$ ಸೇರು ಕುಡಿಸಬೇಕು ಈ ಚಿಕಿತ್ಸೆಯನ್ನು ಭೇದಿ, ರಕ್ತಭೇದಿ ಗುಣವಾಗುವವರೆಗೂ ಮುಂದುವರಿಸಬೇಕು



# ಕಿರುಶಿವನಿ

| | |
|---|---|
| ವೈಜ್ಞಾನಿಕ ಹೆಸರು | ಮೆಲಿನ ಏಷ್ಯಾಟಿಕ [Gmelina asiatica L ] |
| ಸಸ್ಯದ ಕುಟುಂಬ | ವರ್ಬಿನೇಸಿ [Verbenaceae] |
| ಕನ್ನಡದ ಇತರ ಹೆಸರುಗಳು | ಕಲ್ ಶಿವನಿ, ಗುಲ್ಲು, ಶಿವನಿ |
| ಇತರ ಭಾಷೆಯ ಹೆಸರುಗಳು | ಸಂ - ಕಾಸಮಾರಿ, ಗೋವಭದ್ರ |
| | ಹಿಂ - ಒಧಾರ |
| | ತ - ನೀಲ ಕುಮಿಳ, ನೀಲ ಕುಮಿಳಿ |
| | ತೆ - ಕವ್ವಗುಮ್ಮುಡು, ಗಮ್ಮುಡು, ಚೆರುನೆಲ್ಲಿ, ಚೆಲ್ಲಗುಮ್ಮುಡು |
| | ಇಂ - ದಿ ಎಷ್ಯಾಟಿಕ್ ಮೆಲಿನ |

**ಪರಿಚಯ**

ಈ ಗಿಡವು ಬೀಳು ಭೂಮಿಯಲ್ಲಿ ಮತ್ತು ಕುರುಚಲು ಕಾಡುಗಳಲ್ಲಿ ಸಾಮಾನ್ಯವಾಗಿ ಬೆಳೆಯುತ್ತದೆ ಗಿಡದಲ್ಲಿ ಮುಳ್ಳುಗಳಿರುವುದರಿಂದ ಕೆಲವು ಕಡೆ ಬೇಲಿ ಗಿಡವಾಗಿ ಸಹ ಬೆಳೆಸುತ್ತಾರೆ

ಕಿರುಶಿವನಿಯು, ಪೊದರಿನಂತಹ ಗಿಡವಾದರೂ ಕೆಲವೊಮ್ಮೆ ಬೆಳೆದು ಸಣ್ಣ ಮರದಂತಾಗುತ್ತದೆ ಕಾಂಡದ ಮೇಲೆ ಅತ್ಯಂತ ನುಣುಪಾದ ರೋಮಗಳಿರುತ್ತವೆ ಸರಳವಾದ ಎಲೆಗಳು ಕಾಂಡದ ಮೇಲೆ ಅಭಿಮುಖವಾಗಿ ಜೋಡಣೆಯಾಗಿರುತ್ತದೆ. ಕಾಂಡದ ಮೇಲೆ ಬೆಳೆಯುವ ಚಿಕ್ಕ ರೆಂಬೆಗಳು, ಉದ್ದನೆಯ, ಗಟ್ಟಿಯಾದ ಮುಳ್ಳುಗಳಾಗಿ ಪರಿವರ್ತನೆ ಹೊಂದುತ್ತವೆ ಗಂಟೆಯಂತಹ ಹಳದಿ ಬಣ್ಣದ ಹೂಗಳು ಕಾಂಡದ ತುದಿಯಲ್ಲಿರುತ್ತವೆ ಹೂವಿನೊಳಗೆ 4 ಕೇಸರಗಳಿರುತ್ತವೆ ಅವುಗಳಲ್ಲಿ ಎರಡು ಉಳಿದೆರಡಕ್ಕಿಂತ ಉದ್ದವಾಗಿರುತ್ತವೆ ಅಂಡಾಕಾರದ ಕಾಯಿಯಲ್ಲಿ ನಾಲ್ಕು ಕೋಣೆಗಳಿರುತ್ತವೆ



ಚಿತ್ರ 30 ಕಿರುಶಿವನಿ - ಹೂ ಮತ್ತು ಕಾಯಿಗಳಿರುವ ರೆಂಬೆ

## ಉಪಯೋಗಗಳು

1 ಕುಡಿ ಮತ್ತು ಎಲೆಗಳನ್ನು ಅರೆದು ಸೇವಿಸುವುದರಿಂದ ಗೊನ್ನೊರಿಯ ಮತ್ತು ಉರಿಮೂತ್ರ ವಾಸಿಯಾಗುತ್ತದೆ

2 ಬೇರಿನ ಕಷಾಯ ಅಥವಾ ಚೂರ್ಣ ಸೇವನೆಯಿಂದ ವಾತನೋವು ಕಡಿಮೆಯಾಗುತ್ತದೆ ಮತ್ತು ರಕ್ತವು ಶುದ್ಧಿಯಾಗುತ್ತದೆ

3 ಎಲೆಯನ್ನು ಅರೆದು ಮೈಗೆ ಲೇಪಿಸುವುದರಿಂದ ಮೈ ಮೇಲೆದ್ದಿರುವ ಗಂಧೆ ಕಡಿಮೆಯಾಗುತ್ತದೆ

4 ಬೇರಿನ ಚೂರ್ಣ ಸೇವನೆಯಿಂದ ವೀರ್ಯವರ್ಧನೆಯಾಗಿ ಪುರುಷತ್ವ ಹೆಚ್ಚಾಗುತ್ತದೆ



# ಕುಕ್ಕೆಬಳ್ಳಿ

| | |
|---|---|
| ವೈಜ್ಞಾನಿಕ ಹೆಸರು | ಪ್ಯಾಸಿಫ್ಲೋರ ಫಿಟಿಡ [Passiflora foetida L ] |
| ಸಸ್ಯದ ಕುಟುಂಬ | ಪ್ಯಾಸಿಫ್ಲೋರೇಸಿ [Passifloracea] |
| ಕನ್ನಡದ ಇತರ ಹೆಸರುಗಳು | ಕಾಡುಕುಕ್ಕೆ, ಕಲ್ಲುಕುಕ್ಕೆಬಳ್ಳಿ, ಗಡಿಯಾರದ ಬಳ್ಳಿ |
| ಇತರ ಭಾಷೆಯ ಹೆಸರುಗಳು | ಸಂ - ಮುಕ್ಕೊಪೀರ |
| | ತ - ಮುಪ್ಪರಿಸವಳ್ಳಿ, ಸಿರುವುನ್ನೈಕ್ಕಳಿ |
| | ತೆ - ತೆಲ್ಲಜುಮಿಕಿ |

**ಪರಿಚಯ**

ಈ ಮೂಲಿಕೆಯು ಕುರುಚಲು ಗಿಡಗಳನ್ನೊಳಗೊಂಡ ಸಸ್ಯಾವರಣಗಳಲ್ಲಿ, ಹುಲ್ಲುಗಾವಲಿನಲ್ಲಿ ಮತ್ತು ಕಲ್ಲು ಗುಡ್ಡೆಗಳಲ್ಲಿ ಬಳ್ಳಿಯಂತೆ ಬೆಳೆಯುತ್ತದೆ ಬಳ್ಳಿತುಂಬ ಗ್ರಂಥಿರೋಮಗಳಿರುತ್ತವೆ ಸರಳವಾದ ಅಂಡಾಕಾರದ ಎಲೆಗಳಿಗೆ ಮೂರು ಹಾಲೆಗಳಿರುತ್ತವೆ ಎಲೆ ಹಾಗೂ ತೊಟ್ಟಿನಮೇಲೆ ರೋಮಗಳಿರುತ್ತವೆ ಎಲೆಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ ಬಳ್ಳಿಯಲ್ಲಿ ಕವಲುಗಳಿಲ್ಲದ ಅಡರು ಬಳ್ಳಿಯಿರುತ್ತದೆ ಇದು ಹಬ್ಬಿ ಬೆಳೆಯಲು ಬಳ್ಳಿಗೆ ಸಹಾಯಮಾಡುತ್ತದೆ ಎಲೆಯ ಕಂಕುಳಲ್ಲಿ ಗಡಿಯಾರವನ್ನು ಹೋಲುವ ಬಿಳಿ ಹೂವಿರುತ್ತದೆ ಹೂವಿನಲ್ಲಿ 5 ಕೇಸರಗಳು ಶಲಾಕಧರಕ್ಕೆ ಅಂಟಿಕೊಂಡಿರುತ್ತವೆ ಅಂಡಾಶಯದಲ್ಲಿ ಒಂದೇ ಒಂದು ಕೋಣೆಯಿರುತ್ತದೆ. ಕಾಯಿಯನ್ನು ಬಲೆಯಂತಹ ಪುಷ್ಪಪತ್ರಕ ಸುತ್ತುವರೆದಿರುತ್ತದೆ ನೋಡಲು ಕುಕ್ಕೆಯಂತೆ ಕಂಡುಬರುವುದರಿಂದ ಈ ಬಳ್ಳಿಯನ್ನು ಕುಕ್ಕೆಬಳ್ಳಿ ಎಂದು ಕರೆದಿರುವಂತೆ ತೋರುತ್ತದೆ (ಕುಕ್ಕೆ - ಬೆತ್ತದಿಂದ ಹೆಣೆದ ಬುಟ್ಟಿ)

## ಉಪಯೋಗಗಳು

1. ಬಳ್ಳಿಯ ಪಂಚಾಗ ಕಷಾಯವನ್ನು ಕುಡಿಯುವುದರಿಂದ ಪಿತ್ತಶಮನವಾಗುತ್ತದೆ ಮತ್ತು ಉಬ್ಬಸರೋಗ ವಾಸಿಯಾಗುತ್ತದೆ
2. ಎಲೆಗಳನ್ನು ಅರೆದು ತಲೆಯ ಮೇಲೆ ಲೇಪ ಹಾಕುವುದರಿಂದ ತಲೆ ಸುತ್ತುವಿಕೆ ಮತ್ತು ತಲೆನೋವು ಕಡಿಮೆಯಾಗುತ್ತದೆ
3. ಹಣ್ಣುಗಳನ್ನು ತಿಂದರೆ ಮೃದು ವಿರೇಚನದಂತೆ ಕೆಲಸ ಮಾಡುತ್ತದೆ



# ಕುಪ್ಪಿಗಿಡ

| | |
|---|---|
| ವೈಜ್ಞಾನಿಕ ಹೆಸರು | ಅಕ್ಯಾಲಿಫ ಇಂಡಿಕ [Acalypha indica L ] |
| ಸಸ್ಯದ ಕುಟುಂಬ | ಯುಫೊರ್ಬಿಯೇಸಿ [Euphorbiacea] |
| ಕನ್ನಡದ ಇತರ ಹೆಸರುಗಳು | ಕುಪ್ಪಂಟೆಸೊಪ್ಪು, ಚಲ್ಮಾರಿ, ಜಲಮಲಿ, ತುಪ್ಪಕೀರೆ |
| ಇತರ ಭಾಷೆಯ ಹೆಸರುಗಳು | ಸಂ - ಅರಿತಮುಂಜ್ಯೆರೆ, ಅವಪುಷ್ಪಿ<br>ಹಿಂ. - ಕುಪ್ಪಿ, ಖೂಕಾಲಿ<br>ತ - ಕುಪ್ಪೈಮೇಣಿ<br>ತೆ - ಕುಪ್ಪಿಚೆಟ್ಟು, ಹರಿತಮಂಜರಿ<br>ಇಂ. - ಇಂಡಿಯನ್ ಅಕ್ಯಾಲಿಫ, ಕ್ಯಾಟ್ಸ್ ಸ್ಪಗಲ್ |

**ಪರಿಚಯ**

ಈ ಮೂಲಿಕೆಯು, ಗೊಬ್ಬರ ಗುಂಡಿಗಳಲ್ಲಿ ಮತ್ತು ಬೀಳು ಭೂಮಿಯಲ್ಲಿ ಬೆಳೆಯುತ್ತದೆ. ಗಿಡವು ಸಾಧಾರಣವಾಗಿ 1-2 ಅಡಿ ಎತ್ತರಕ್ಕೆ ಬೆಳೆಯುತ್ತದೆ. ಕರ್ನೆಯಾಕಾರದ ಎಲೆಗಳು ಕಾಂಡದ ಮೇಲೆ ಪರ್ಯಾಯವಾಗಿ ಜೋಡಣೆಯಾಗಿರುತ್ತವೆ. ಎಲೆಗಳಿಗೆ ಉದ್ದನೆಯ ತೊಟ್ಟಿರುತ್ತದೆ ಎಲೆಯ ಅಂಚು ಗರಗಸದ ಹಲ್ಲಿನಂತಿರುತ್ತದೆ ಎಲೆಯ ಕಂಕುಳಲ್ಲಿ ಬೆಳೆಯುವ ಹೂಗೊಂಚಲಿನ ತುದಿಯಲ್ಲಿ ಗಂಡುಹೂಗಳು ಮತ್ತು ಬುಡದಲ್ಲಿ ಹೆಣ್ಣು ಹೂಗಳಿರುತ್ತವೆ ಹೂಗಳನ್ನು ಕವಚದಂತಹ ಹೂಸೂಚಿ ಎಲೆಗಳು ಮುಚ್ಚಿಕೊಂಡಿರುತ್ತವೆ

## ಉಪಯೋಗಗಳು

1 ಕುಪ್ಪಿಗಿಡದ ಎಲೆಗಳನ್ನು ನೆರಳಿನಲ್ಲಿ ಒಣಗಿಸಿ ಚೂರ್ಣಮಾಡಿಟ್ಟುಕೊಂಡು, ಬೇವಿನ ಎಣ್ಣೆಯಲ್ಲಿ ಕಲಸಿ ಸೇವಿಸಿದರೆ ಗಂಟಲಿನ ಕಫ ಕರಗಿ ಉಸಿರಾಡಲು ಸುಲಭವಾಗುತ್ತದೆ

2 ಕುಪ್ಪಿಗಿಡದ ರಸಕ್ಕೆ ಸ್ವಲ್ಪ ಅರಿಸಿನ ಸೇರಿಸಿ ಹಾಸಿಗೆ ಹುಣ್ಣುಗಳು (Bedsore) ಇರುವ ಕಡೆ ಹಚ್ಚಲು ವಾಸಿಯಾಗುತ್ತವೆ ಇದನ್ನೇ ಕೀಡೆ ಬಿದ್ದಿರುವ ಹುಣ್ಣಿಗೆ ಹಚ್ಚಲು ಕೀಡೆಗಳು ನಾಶವಾಗಿ ಹುಣ್ಣುವಾಸಿಯಾಗುತ್ತದೆ.

3 ಕುಪ್ಪಿಗಿಡದ ರಸ ಮತ್ತು ಅಷ್ಟೇ ಪ್ರಮಾಣದ ಕೊಬ್ಬರಿ ಎಣ್ಣೆ ಸೇರಿಸಿ ಮಸೆಣ್ಣೆ ಮಾಡಿ ಕಜ್ಜಿ (Scabies) ಕಾಣಿಸಿಕೊಂಡಾಗ ಮೈಗೆಲ್ಲಾ ಹಚ್ಚಿ ಕೆಲಹೊತ್ತಿನ ನಂತರ ಸ್ನಾನಮಾಡುವುದರಿಂದ ಕಜ್ಜಿಗುಣವಾಗುತ್ತದೆ

4 ಕುಪ್ಪಿಗಿಡದ ಎಲೆಯ ರಸಕ್ಕೆ ಎಳ್ಳೆಣ್ಣೆ ಸೇರಿಸಿ ಮಸೆಣ್ಣೆ ಮಾಡಿ ವಾಯು ನೋವಿರುವ ಜಾಗದಮೇಲೆ ಲೇಪಿಸಿ ನೀವುವುದರಿಂದ ವಾಯುನೋವು ಕಡಿಮೆಯಾಗುತ್ತದೆ

5 ಕುಪ್ಪಿ ಎಲೆರಸದ ಕಷಾಯದೊಡನೆ ಚಿಟ್ಟಹರಳೆಣ್ಣೆ ಸೇರಿಸಿ ತಯಾರಿಸಿದ ತೈಲದ ಸೇವನೆಯಿಂದ ಕೆಲವು ಬಗೆಯ ಅಸ್ತಮ ರೋಗಗಳು ಗುಣವಾಗುತ್ತದೆ



# ಕೆಂಪುಬಸಲೆ

| | |
|---|---|
| ವೈಜ್ಞಾನಿಕ ಹೆಸರು | ಬಸೆಲ್ಲ ರುಬ್ರ [Basella rubra L ] |
| ಸಸ್ಯದ ಕುಟುಂಬ | ಬಸಲ್ಲೇಸಿ [Basellaceae] |
| ಕನ್ನಡದ ಇತರ ಹೆಸರುಗಳು | ಕೆಂಪುಬಾಯಿ ಬಸಳೆ, ದೊಡ್ಡಬಸಳೆ, ಪೋತಕಿ, ಬಾಯಿಬಸಳೆ, ಮಂದಕಾಲಿ, ಹಿರೀಬಸಳೆ |
| ಇತರ ಭಾಷೆಯ ಹೆಸರುಗಳು | ಸಂ - ಅಪೊದಿಕ, ಪೊತಿಕ |
| | ಹಿಂ - ಲಾಲ್ ಬಚ್ಲು |
| | ತ - ಶಿವಪ್ಪು ವಸ್ಲಕೀರೈ, ಸಿಗಪ್ಪುವಸಲೈ |
| | ತೆ. - ಯರ್ರ ಬಸಲಿ |
| | ಇಂ - ಇಂಡಿಯನ್ ಸ್ಪಿನಾಚ್ |

**ಪರಿಚಯ**

ಕೆಂಪು ಬಸಲೆ ಪ್ರಾಕೃತಿಕವಾಗಿ ಕಂಡುಬರುವುದಿಲ್ಲ ಆದರೆ ತೋಟಗಳಲ್ಲಿ, ಕೈತೋಟಗಳಲ್ಲಿ ಸೊಪ್ಪು ತರಕಾರಿ ಬಳ್ಳಿಯಾಗಿ ಬೆಳೆಯುತ್ತಿರುವುದನ್ನು ಕಾಣಬಹುದು ಬಸಲೆ ಆಸರೆ ಗಿಡ-ಚಪ್ಪರದ ಮೇಲೆ ಹಬ್ಬಿ ಬೆಳೆಯುತ್ತದೆ ರಸಭರಿತ ಹಸಿರುಗೆಂಪಿನ ಬಳ್ಳಿಕಾಂಡದ ಮೇಲೆ ಸರಳವಾದ ಎಲೆಗಳು ಪರ್ಯಾಯ ವಾಗಿ ಜೋಡಣೆಯಾಗಿರುತ್ತವೆ ಎಲೆಗಳ ಅಂಚು ನಯವಾಗಿರುತ್ತದೆ ಮತ್ತು ಬುಡವು ನೀಟಾಗಿ ಇಲ್ಲವೆ ಗುಂಡಾಗಿರುತ್ತದೆ ಗುಲಾಬಿಗೆಂಪಿನ ಹೂಗಳು ಎಲೆಯ ಕಂಕುಳಲ್ಲಿರುವ ರಸಭರಿತ ಅಂತ್ಯಾರಾಭಿ ಪುಷ್ಪಮಂಜರಿಯಲ್ಲಿರುತ್ತವೆ ಹೂವಿನಲ್ಲಿ 5 ಕೇಸರಗಳಿರುತ್ತವೆ. ದುಂಡಾದ ಕಪ್ಪನೆಯ ಹಣ್ಣಿನಲ್ಲಿ ನೇರಳೆ ಬಣ್ಣದ ರಸತುಂಬಿರುತ್ತದೆ

ಮೇಲಿನ ಎಲ್ಲಾ ಹೋಲಿಕೆಯಿರುವ ಕೆಲವು ಜಾತಿಯ ಬಸಲೆ ಗಿಡದ ಕಾಂಡ ಮತ್ತು ಎಲೆ ತಿಳಿಹಸಿರಾಗಿರುತ್ತದೆ ಅಂತಹವುಗಳನ್ನು ಬಿಳಿ ಬಸಲೆ (B allba L) ಎಂದು ಕರೆಯುತ್ತಾರೆ ಎರಡರಲ್ಲೂ ಒಂದೇ ತರಹದ ಔಷಧಿಯ ಗುಣವಿರುವುದರಿಂದ ಎರಡರಲ್ಲಿ ಯಾವುದನ್ನು ಬೇಕಾದರೂ ಉಪಯೋಗಿಸಬಹುದು

## ಉಪಯೋಗಗಳು

1 ಬೇರಿನ ಕಷಾಯ ಕುಡಿಯುವುದರಿದ ಪಿತ್ತಾಧಿಕ್ಯದಿಂದ ಬರುವ ವಾಂತಿ ಕಡಿಮೆಯಾಗುತ್ತದೆ

2 ಎಲೆಗಳನ್ನು ಹಾಲಿನಲ್ಲಿ ಹಾಕಿ ಚೆನ್ನಾಗಿ ಬೇಯಿಸಿ ಎಲೆಗಳನ್ನು ಹೊರತೆಗೆದು ಅರೆದು ಕುರು ಮತ್ತು ಬಾವಿನಮೇಲೆ ಲೇಪಿಸಿದರೆ ಬೇಗ ವಾಸಿಯಾಗುತ್ತವೆ.

3 ಎಲೆಯನ್ನು ಅರೆದು ಹಣೆಗೆ ಪಟ್ಟುಹಾಕುವುದರಿಂದ ತಲೆನೋವು ವಾಸಿಯಾಗುತ್ತದೆ ಇದನ್ನೇ ನೆತ್ತಿಗೆ ಲೇಪ ಹಾಕುವುದರಿಂದ ನೆತ್ತಿ ತಂಪಾಗಿ ಚೆನ್ನಾಗಿ ನಿದ್ದೆ ಬರುತ್ತದೆ

4 ಎಲೆಯನ್ನು ಪಲ್ಯಮಾಡಿ ತಿನ್ನುವುದರಿಂದ, ಮೂತ್ರತಡೆ, ಮೂತ್ರದಲ್ಲಿ ಕೀವು, ವೀರ್ಯದೋಷಗಳು, ದಾಹ, ಬಲಹೀನತೆ ಮುಂತಾದವುಗಳು ಗುಣವಾಗುತ್ತವೆ, ಅಲ್ಲದೆ ಪಿತ್ತಸಂಬಂಧದ ಶ್ವಾಸರೋಗಗಳೂ ನಿವಾರಣೆಯಾಗುತ್ತವೆ.



# ಕೊನ್ನಾರಿಗೆಡ್ಡೆ

| | |
|---|---|
| ವೈಜ್ಞಾನಿಕ ಹೆಸರು | ಸೈಪಿರಸ್ ರೊಟುಂಡಸ್<br>[Cyperus rotundus L ] |
| ಸಸ್ಯದ ಕುಟುಂಬ | ಸೈಪಿರೇಸಿ [Cyperaceae] |
| ಕನ್ನಡದ ಇತರ ಹೆಸರುಗಳು | ಅಬ್ಬಹುಲ್ಲು, ಕೊರನಾರಿಗೆಡ್ಡೆ, ಗೇಕು, ಗೇಕಿನಗೆಡ್ಡೆ, ಜೇಕಿನಗೆಡ್ಡೆ, ತುಂಗೆಗೆಡ್ಡೆ, ತುಂಗೆಹುಲ್ಲು |
| ಇತರ ಭಾಷೆಯ ಹೆಸರುಗಳು | ಸಂ - ಕುರುಬಿಲ್ವ, ಭದ್ರಮುಷ್ಕ, ಮುಸ್ತ, ಮುಷ್ಕ, ಮುಷ್ಕಕ<br>ಹಿಂ - ಮೋತ, ಮುತ್ತ<br>ತ. - ಕೊರೈ-ಕಿಳಂಗು, ತುಂಗಗಡ್ಡೆ<br>ತೆ - ತುಂಗಮುಷ್ಟೆ, ಗಂಡಲ<br>ಇಂ - ನಟ್ ಗ್ರಾಸ್ |

**ಪರಿಚಯ**

ಇದು, ರಾಜ್ಯದ ಎಲ್ಲಾ ಕಡೆಗಳಲ್ಲಿ ಮುಖ್ಯವಾಗಿ ಹೊಲ, ತೋಟ ಮುಂತಾದ ಸಾಗುವಳಿ ಜಮೀನಿನಲ್ಲಿ ಬೆಳೆಯುವ ಬಹುವಾರ್ಷಿಕ ಉಪದ್ರವಕಾರಿ ಕಳೆಗಿಡ, ಈ ಮೂಲಿಕೆಯು 9 ರಿಂದ 30 ಸೆ.ಮೀ ಎತ್ತರ ಬೆಳೆಯುತ್ತದೆ ಮಣ್ಣಿನಲ್ಲಿರುವ ಗಿಡದ ಬುಡದಲ್ಲಿ ಲಕುನವಿರುತ್ತದೆ ಇವು ಒಂದಕ್ಕೊಂದು ಹೆಣೆದುಕೊಂಡು ಭೂಮಿಯಲ್ಲಿ ಹರಡಿ ಬೆಳೆಯುತ್ತವೆ ಸಸ್ಯದಲ್ಲಿ ನೀಳಾಕಾರದ ಎಲೆಗಳು ಬುಡಭಾಗದಲ್ಲಿ ಮಾತ್ರ ಇರುತ್ತವೆ. ಮೂರು ಕೋನವಿರುವ ದೇಟಿನ ತುದಿಯಲ್ಲಿ ಮೂರು ಹೂ ಸೂಚಿ ಎಲೆಗಳಿರುತ್ತವೆ ಅವುಗಳ ಕಂಕುಳಲ್ಲಿ ಸೂಕ್ಷ್ಮರೂಪದ ಹೂಗಳು ಸ್ಪೈಕ್ ಲೆಟ್ ಎಂಬ ಪುಷ್ಪಮಂಜರಿಯಲ್ಲಿ ಒತ್ತಾಗಿ ಜೋಡಣೆಯಾಗಿರುತ್ತವೆ. ಈ ಪುಷ್ಪಮಂಜರಿಯು ಛತ್ರರೂಪದಲ್ಲಿ ಜೋಡಿಸಲ್ಪಟ್ಟಿರುತ್ತದೆ

## ಉಪಯೋಗಗಳು

1 ಕೊನ್ನಾರಿಗೆಡ್ಡೆಯನ್ನು ಒಣಗಿಸಿ ಚೂರ್ಣ ಮಾಡಿಕೊಂಡು, 5 ಗ್ರಾಂ ಚೂರ್ಣಕ್ಕೆ ತಕ್ಕಷ್ಟು ಮೊಸರು ಸೇರಿಸಿ ದಿವಸಕ್ಕೆ 3-4 ಬಾರಿ ಸೇವಿಸುವುದರಿಂದ ಭೇದಿ ಮತ್ತು ರಕ್ತ ಭೇದಿ ನಿಲ್ಲುತ್ತದೆ

2 ಕೊನ್ನಾರಿಗೆಡ್ಡೆ (ಜೇಕಿನಗೆಡ್ಡೆ)ಯ ಚೂರ್ಣವನ್ನು 5 ಗುಂಜಿ ತೂಕ ಪ್ರತಿ ದಿವಸ ಸೇವಿಸುವುದರಿಂದ ಮೂಲವ್ಯಾಧಿ ಪರಿಹಾರವಾಗುತ್ತದೆ.

3 ಗೆಡ್ಡೆಯನ್ನು ಅರೆದು ಮೈಗೆ ಲೇಪಿಸುವುದರಿಂದ ನವೆ ಕಡಿಮೆಯಾಗುತ್ತದೆ

4 ಕೊನ್ನಾರಿಗೆಡ್ಡೆಯನ್ನು ಅರೆದು ಸ್ತನಗಳ ಮೇಲೆ ಪಟ್ಟುಹಾಕುವುದರಿಂದ ಹೆಚ್ಚಾಗಿ ಹಾಲು ಉತ್ಪತ್ತಿಯಾಗುತ್ತದೆ

5 ಗೆಡ್ಡೆಯ ಗಂಧವನ್ನು ಕಣ್ಕಪ್ಪಿನಂತೆ ಹಚ್ಚುವುದರಿಂದ ಕಣ್ಣಿನ ರೋಗಗಳು ನಿವಾರಣೆಯಾಗುತ್ತವೆ

6 ಗೆಡ್ಡೆಯನ್ನು ಅರೆದು ಹಾಲಿನೊಡನೆ ಸೇವಿಸುವುದರಿಂದ ನರದೌರ್ಬಲ್ಯ ಗುಣವಾಗುತ್ತದೆ

7 ಗೆಡ್ಡೆಯ ಚೂರ್ಣ ಸೇವನೆಯಿಂದ ಅರುಚಿ, ದಾಹ, ರಕ್ತವಿಕಾರಗಳು ಮತ್ತು ದಮ್ಮು ಕೆಮ್ಮು ಗುಣವಾಗುತ್ತವೆ

8 ಗೆಡ್ಡೆಯ ಚೂರ್ಣ ಸೇವನೆಯಿಂದ ಮುಟ್ಟಿನ ದೋಷಗಳು ನಿವಾರಣೆಯಾಗುತ್ತವೆ

9 ಕೊನ್ನಾರಿಗೆಡ್ಡೆ, ದೇವದಾರು, ಬಜೆ, ಶುಂಠಿ, ಶುದ್ಧಿ ಮಾಡಿದ ಅತಿವಿಷ (Aconite) ಇವುಗಳನ್ನು ಸಮಭಾಗ ತೆಗೆದುಕೊಂಡು ಚೂರ್ಣ ಮಾಡಿ ಬಿಸಿನೀರಿನೊಡನೆ ಸೇವಿಸುವುದರಿಂದ ಆಮವಾತ (Rheumatoid orthrities) ಗುಣವಾಗುತ್ತದೆ.



# ಕೊಳವಳಿಕೆ

| | |
|---|---|
| ವೈಜ್ಞಾನಿಕ ಹೆಸರು | ಹೈಗ್ರೊಫಿಲ್ಲ ಆರಿಕುಲಾಟ [Hygrophila auriculata (k Schum-) Heine] |
| | = ಹೈಗ್ರೊಫಿಲ್ಲ ಲಾಂಗಿಫೋಲಿಯ [Hygrophila longfolia Nees] |
| | = ಆಸ್ಟರ್ಅಕ್ಯಾಂತ ಲಾಂಗಿಫೋಲಿಯ [Asteracantha longifoia (L ) Nees] |
| ಸಸ್ಯದ ಕುಟುಂಬ | ಅಕ್ಯಾಂಥೇಸಿ [Acanthaceae] |
| ಕನ್ನಡದ ಇತರ ಹೆಸರುಗಳು | ಕೊಳವಂಕೆ, ಕೊಳವಳಿಕೆ ಮುಳ್ಳಿನ ಗಿಡ, ಕೊಳಸೆಮುಳ್ಳಿನ ಗಿಡ, ಕೋಕಿಲಾಕ್ಷ ಗೊರಿವಿಡಿ, ಗೋಕಂಟಕ, ನೀರ್‌ಗೊಬ್ಲಿ, ನೀರುಪ್ಪಿಗಿಡ |
| ಇತರ ಭಾಷೆಯ ಹೆಸರುಗಳು | ಸಂ - ಕೋಕಿಲಾಕ್ಷ, ಇಕ್ಷುಗಂಧಾ, ಕಾಂಡೇಕ್ಷ, ಇಕ್ಷುರ, ಕ್ಷುರ |
| | ಹಿಂ - ತಾಲ್-ಮಖಾನ |
| | ತ. - ನೀರ್‌ಮುಳ್ಳಿ |
| | ತೆ - ನೀರ್‌ಗೊಬ್ಬಿ |
| | ಇಂ - ಲಾಂಗ್‌ಲೀವ್ಡ್ ಬಾರ್ಲೇರಿಯ |

**ಪರಿಚಯ**

ಕೊಳವಳಿಕೆ ಗಿಡವು ಸಾಮಾನ್ಯವಾಗಿ ಗದ್ದೆಯ ಬದುಗಳಲ್ಲಿ, ನಾಲೆಯ ಪಕ್ಕದಲ್ಲಿ ಮತ್ತು ಕೆರೆ ಕಟ್ಟೆಗಳ ಸಮೀಪದಲ್ಲಿ ಬೆಳೆಯುತ್ತದೆ ಗಿಡವು 1 ರಿಂದ

2 1/2 ಅಡಿ ಎತ್ತರ ಬೆಳೆಯುತ್ತದೆ ಕಾಂಡಕ್ಕೆ ನಾಲ್ಕು ಏಣುಗಳಿರುತ್ತವೆ, ಕೆಲವೊಮ್ಮೆ ಅದು ದುಂಡಾಗಿರುತ್ತದೆ ಕಾಂಡದ ಪ್ರತಿ ಗೆಣ್ಣಿನಲ್ಲಿ ಸುಮಾರು 3 1/2 ಸೆ.ಮೀ. ಉದ್ದದ ಕಂದು ಮಿಶ್ರಿತ ಹಳದಿ ಬಣ್ಣದ 6 ಮುಳ್ಳುಗಳಿರುತ್ತವೆ ತೊಟ್ಟಿಲ್ಲದ ನೀಳವಾದ ಎಲೆಗಳು ಕಾಂಡದಮೇಲೆ ಅಭಿಮುಖವಾಗಿ ಜೋಡಣೆಯಾಗಿರುತ್ತವೆ ಕಾಂಡದ ಮೇಲೆ ಮತ್ತು ಎಲೆಗಳ ಮೇಲೆ ರೋಮಗಳು ವಿರಳವಾಗಿರುತ್ತವೆ ಎಲೆಗಳ ಕಂಕುಳಲ್ಲಿ ನೀಲಿಮಿಶ್ರಿತ ಊದಾ ಬಣ್ಣದ, ತೊಟ್ಟಿಲ್ಲದ ಸುಮಾರು 24 ಹೂಗಳು ಕಾಂಡವನ್ನು ಬಳಸಿಕೊಂಡು ಮೂರು ಸುತ್ತುಗಳಲ್ಲಿ ಜೋಡಣೆಯಾಗಿರುತ್ತವೆ ಒಂದು ಸುತ್ತಿನಲ್ಲಿ 8 ಹೂಗಳಿರುತ್ತವೆ ಸಂಯುಕ್ತ ಹೂದಳದ ಹೂವಿಗೆ ಎರಡು ತುಟಿಭಾಗಗಳಿರುತ್ತವೆ ಮೇಲ್ತುಟಿಯು ಎರಡು ದಳಗಳಿಂದ ಮತ್ತು ಕೆಳತುಟಿಯು ಮೂರು ದಳಗಳಿಂದಾಗಿರುತ್ತದೆ ದಳಗಳಿಗೆ ಅಂಟಿಕೊಂಡಂತೆ 4 ಕೇಸರಗಳಿರುತ್ತವೆ ಅವುಗಳಲ್ಲಿ ಒಂದು ಜೊತೆ ಮತ್ತೊಂದಕ್ಕಿಂತ ಉದ್ದವಾಗಿರುತ್ತದೆ

## ಉಪಯೋಗಗಳು

1 ಕೊಳವಳಿಕೆಯ ಸಮೂಲವನ್ನು ಸುಟ್ಟು ಭಸ್ಮವನ್ನು ಸ್ವಚ್ಛಗೊಳಿಸಿ ಅದನ್ನು ಗೋಮೂತ್ರ ಅಥವಾ ಮೇಕೆಯ ಮೂತ್ರದಲ್ಲಿ ಕಲಸಿ ನಿತ್ಯ ಮೈಗೆ ಲೇಪಿಸುವುದರಿಂದ ಪಾಂಡರೋಗ ಬಂದಾಗ ಉಂಟಾಗುವ ಶೋಭೆ ನಿವಾರಣೆಯಾಗುತ್ತದೆ

2 ಕೊಳವಳಿಕೆ ಗಿಡದ ಕಷಾಯ ಕುಡಿಯುವುದರಿಂದ ಅಥವಾ ಸೊಪ್ಪನ್ನು ತರಕಾರಿಯಂತೆ ಪಲ್ಯ ಮಾಡಿ ತಿನ್ನುವುದರಿಂದ ಅಂಗುಲಿವಾತ (Gout) ನಿವಾರಣೆಯಾಗುತ್ತದೆ

3 ಕೊಳವಳಿಕೆ ಬೀಜ ಮತ್ತು ಉದ್ದು ಇವೆರಡನ್ನು ಅರೆದು ಎಮ್ಮೆಯ ಮೊಸರಿನೊಡನೆ ಸೇವಿಸುವುದರಿಂದ ಬಹುಮೂತ್ರ ರೋಗ ವಾಸಿಯಾಗುತ್ತದೆ

4 ಕೊಳವಳಿಕೆಬೀಜ ಸುಮಾರು 3-6 ಗ್ರಾಂ ನಷ್ಟು ತೆಗೆದುಕೊಂಡು ಅರೆದು

ದಿವಸಕ್ಕೆ ಎರಡುಬಾರಿಯಂತೆ ಕೆಲವು ದಿವಸ ತಿನ್ನುವುದರಿಂದ ದಾತುಪುಷ್ಟಿಯಾಗುತ್ತದೆ

5 ಕೊಳವಳಿಕೆಯ ಸತ್ವವನ್ನು ಒಣಗಿಸಿಟ್ಟುಕೊಂಡು, ಸುಮಾರು 1-3 ಗ್ರಾಂ ಸತ್ವವನ್ನು ಬಿಸಿನೀರಿನಲ್ಲಿ ದಿವಸಕ್ಕರಡು ಬಾರಿ ಸೇವಿಸುವುದರಿಂದ ಹೊಟ್ಟೆನೋವು ವಾಸಿಯಾಗುತ್ತದೆ

6 ಕೊಳವಳಿಕೆ ಬೀಜ ¼ ತೊಲೆಯಷ್ಟು ತೆಗೆದುಕೊಂಡು ಮಜ್ಜಿಗೆಯೊಡನೆ ಅರೆದ ಅದರಲ್ಲೇ ಕದಡಿ ದಿವಸಕ್ಕೆರಡು ಬಾರಿ 2-3 ದಿವಸ ಕುಡಿಯುವುದರಿಂದ ಆಮಶಂಕೆ ಭೇದಿ ಕಡಿಮೆಯಾಗುತ್ತದೆ



# ಕೋಳಿಕಾಲಿನ ಗಿಡ

| | |
|---|---|
| ವೈಜ್ಞಾನಿಕ ಹೆಸರು | ಕ್ಲಿಯೋಂ ಮಾನೊಫಿಲ್ಲ (Cleome monophylla L ) |
| ಸಸ್ಯದ ಕುಟುಂಬ | ಕ್ಯಪ್ಪಾರೇಸಿ (ಕ್ಯಪ್ಪಾರಿಡೇಸಿ) (Capparaceae (Capparidaceae)) |

**ಪರಿಚಯ**

ಈ ಮೂಲಿಕೆಯು ಬೆಟ್ಟಗುಡ್ಡಗಳ ಇಳಿಜಾರಿನಲ್ಲಿ, ಕಾಡಿನ ಅಂಚಿನಲ್ಲಿ ಮತ್ತು ನಾಗುವಳಿ ಜಮೀನಿನಲ್ಲಿ ಕಳೆಯಂತೆ ಬೆಳೆಯುತ್ತದೆ ಈ ಮೂಲಿಕೆಯು ಕವಲೊಡೆದು ಸುಮಾರು 40 ಸೆ ಮೀ ಎತ್ತರದವರೆಗೆ ಬೆಳೆಯುತ್ತದೆ ಸರಳವಾದ ಹಾಗೂ ನೀಳವಾದ ಇಲ್ಲವೆ ಕರ್ನೆಯಾಕಾರದ ಎಲೆಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ ಕಾಂಡದ ತುದಿಯ ಹೂ ಗೊಂಚಲಿನಲ್ಲಿ ಊದಾ ಬಣ್ಣದ ಹೂಗಳಿರುತ್ತವೆ. ಚಿಕ್ಕ ತೊಟ್ಟಿರುವ ಕಾಯಿಗಳು ಸಾಸಿವೆ ಕಾಯಿಯನ್ನು ಹೋಲುತ್ತವೆ ಕಾಯಿಗಳ ಉದ್ದ 5-7 ಸೆ ಮೀ ಉದ್ದವಿರುತ್ತದೆ

**ಉಪಯೋಗಗಳು**

1 ಬೇರಿನ ಚೂರ್ಣವನ್ನು ಮೂರ್ಛೆ ಬಿದ್ದವರ ಬಾಯಿಗೆ ಮತ್ತು ತುಟಿಯ ಮೇಲೆ ಹಾಕುವುದರಿಂದ ಬೇಗ ಎಚ್ಚರಗೊಳ್ಳುತ್ತಾರೆ

2 ಕೋಳಿಕಾಲಿನ ಗಿಡದ ಸಮೂಲವನ್ನು ಅರೆದು ಅದಕ್ಕೆ ಎಳ್ಳೆಣ್ಣೆ ಸೇರಿಸಿ ಕಾಯಿಸಿ ತಯಾರಿಸಿದ ತೈಲಪಾಕವನ್ನು ಕಿವಿಗೆ ಹಾಕುವುದರಿಂದ ಕಿವಿನೋವು ಕಡಿಮೆಯಾಗುತ್ತದೆ.





ಹೂ ಮತ್ತು ಕಾಯಿಗಳು

**ಚಿತ್ರ 37 · ಕೌಲುಮರ (ಗೌಜಲಮರ)**

# ಕೌಲುಮರ (ಗೌಜಲಮರ)

| | |
|---|---|
| ವೈಜ್ಞಾನಿಕ ಹೆಸರು | ಕ್ಯಾರಿಯ ಆರ್ಬೋರಿಯ (Careya arborea Roxb ) |
| ಸಸ್ಯದ ಕುಟುಂಬ | ಲೇಸಿಥಿಡೇಸಿ (Lecythıdaceae) |
| ಕನ್ನಡದ ಇತರ ಹೆಸರುಗಳು | ಅಲಗವ್ವೆಲೆ, ಕವಲುಮರ, ಕಾವಲ್, ಕಾವಲೆ, ಕುಂಬಾರ, ಕುಂಭ, ಗರ್ವಹಣ್ಣು, ಗವಗಿಲೆ, ಗುಡ್ಡದಇಪ್ಪೆ, ಗೊಂಜಿ, ದದ್ದಾಲ, ಹೆಣ್ಣುಮತ್ತಿ. |
| ಇತರ ಭಾಷೆಯ ಹೆಸರುಗಳು | ಸಂ - ಕುಂಭಿ,<br>ಹಿಂ - ಕುಂಭಿ,<br>ತ - ಆಯ್ಮ<br>ತೆ - ಗಡವ, ದುಡ್ಡಿಪಿ<br>ಇಂ - ಸಿಲೋನ್ ಓಕ್ |

**ಪರಿಚಯ**

ಈ ಮರವು ಕಳ್ಳಿ ಕುರುಚಲು ಗಿಡಗಳನ್ನೊಳಗೊಂಡ ಹಾಗೂ ಬೇಸಿಗೆಯಲ್ಲಿ ಎಲೆಯುದುರುವ ಮಲೆನಾಡಿನ ನಿತ್ಯ ಹರಿದ್ವರ್ಣ ಸಸ್ಯಾವರಣದಲ್ಲಿ ಬೆಟ್ಟಗುಡ್ಡ ಪ್ರದೇಶಗಳಲ್ಲಿ ಬೆಳೆಯುತ್ತದೆ ಈ ಮರವು ಸುಮಾರು 30 ರಿಂದ 60 ಅಡಿ ಎತ್ತರಕ್ಕೆ ಬೆಳೆಯುತ್ತದೆ ಸರಳ ಅಂಡಾಕಾರದ ಎಲೆಗಳು ರೆಂಬೆಗಳ ತುದಿಗಳಲ್ಲಿ ಪರ್ಯಾಯವಾಗಿ ಹಾಗೂ ಒತ್ತಾಗಿ ಜೋಡಣೆಯಾಗಿರುತ್ತವೆ ಬೇಸಿಗೆಯಲ್ಲಿ ಎಲೆಗಳು ಉದುರಿಹೋಗುತ್ತವೆ ಪುಷ್ಪಮಂಜರಿಯಲ್ಲಿ ತೊಟ್ಟಿಲ್ಲದ ದೊಡ್ಡದಾದ ಕೆಲವೇ ಕೆಲವು ಹೂಗಳಿರುತ್ತವೆ ಗೋಳಾಕಾರದ ಕಾಯಿಯ ಉದ್ದ 5-7 ಸೆ ಮೀ ಇರುತ್ತದೆ

## ಉಪಯೋಗಗಳು

1 ಕಾಂಡದ ತೊಗಟೆಯ ಚೂರ್ಣ ಅಥವಾ ಕಷಾಯ ಸೇವನೆಯಿಂದ ಶೀತ, ನೆಗಡಿ, ಕೆಮ್ಮು ಗುಣವಾಗುತ್ತದೆ

2 ಕಾಂಡದ ತೊಗಟೆಯ ಚೂರ್ಣ ಸೇವನೆಯಿಂದ ಮೈಮೇಲೆ ಗಂದೆ, ಗುಳ್ಳೆಗಳುಕ್ಕಿ ಬರುವ ಜ್ವರ ಮತ್ತು ಸಿಡುಬು ವಾಸಿಯಾಗುತ್ತದೆ

3 ಎಲೆಯ ಚೂರ್ಣವನ್ನು ಗಾಯಗಳ ಮೇಲೆ ಸಿಂಪಡಿಸುತ್ತಾರೆ

4 ಹಣ್ಣಿನ ಕಷಾಯ ಸೇವನೆಯಿಂದ ಚೆನ್ನಾಗಿ ಜೀರ್ಣವಾಗುತ್ತದೆ (ಬೀಜಗಳನ್ನು ಸೇವಿಸಬಾರದು ಅವು ವಿಷಯುಕ್ತವಾಗಿರುತ್ತವೆ)

## ಪಶುರೋಗ ಚಿಕಿತ್ಸೆಯಲ್ಲಿ

ಕೌಲು (ಗೌಲು) ಮರದ ತೊಗಟೆಯನ್ನು ಅರೆದು ಗಂಧ ಮಾಡಿಕೊಂಡು ಮುರಿದ ಎಲುಬನ್ನು ಸರಿಯಾಗಿ ಕೂಡಿಸಿ ಅದರಮೇಲೆ ಲೇಪ ಹಾಕಿ ಬಿದಿರು ಪಟ್ಟಿಗಳನ್ನು ಕಟ್ಟಿ ಮೇಲೆ ಬಟ್ಟೆ ಸುತ್ತುವುದರಿಂದ ಮುರಿದ ಮೂಳೆ ಜೋಡಣೆಯಾಗುವುದರ ಜೊತೆಗೆ ಗಾಯವೂ ಕೂಡ ಬೇಗ ವಾಸಿಯಾಗುತ್ತದೆ



# ಗರಿಕೆಹುಲ್ಲು

| | |
|---|---|
| ವೈಜ್ಞಾನಿಕ ಹೆಸರು | ಸೈನೊಡಾನ್ ಡ್ಯಾಕ್ಟಿಲಾನ್<br>(Cynodon dactylon (L ) Pers ) |
| ಸಸ್ಯದ ಕುಟುಂಬ | ಪೊಯೇಸಿ (ಗ್ರಾಮಿನೇ)<br>(Poaceae (Graminae) ) |
| ಕನ್ನಡದ ಇತರ ಹೆಸರುಗಳು | ಅಂಬಟೆ, ಕರಿಕೆಹುಲ್ಲು, ಕರ್ಕೆರಿ ಹುಲ್ಲು, ಕಾಡುಗರಿಕೆ, ಕುಡಿಗರಿಕೆ, ದೂಬ್, ಹರಿಯಾಳಿ |
| ಇತರ ಭಾಷೆಯ ಹೆಸರುಗಳು | ಸಂ - ದೂರ್ವ, ಹರಿತಾಳಿ,<br>ಹಿಂ. - ಧುಬ್, ಹರಿಯಾಳಿ<br>ತ. - ಅರುಗಂ ಪುಲ್ಲು<br>ತೆ - ಗರಿಕೆ, ಹರಿವಾಳಿ<br>ಇಂ - ಕೌಚ್ ಗ್ರಾಸ್, ಕ್ರೀಪಿಂಗ್ ಗ್ರಾಸ್, ಬಹಾಮಗ್ರಾಸ್, ಡನ್ ಗ್ರಾಸ್, ದೂಬ್ ಗ್ರಾಸ್, ಬೆರ್ಮುಡಾ ಗ್ರಾಸ್, ವೈರ್ ಗ್ರಾಸ್ |

## ಪರಿಚಯ

ಯಾವುದೇ ಶುಭ ಕಾರ್ಯ ಮತ್ತು ಪೂಜೆಯನ್ನು ಪ್ರಾರಂಭಿಸುವಾಗ ನಿರ್ವಿಘ್ನವಾಗಿ ನೆರವೇರಲೆಂದು ವಿಘ್ನೇಶ್ವರನನ್ನು ಪೂಜಿಸುವುದು ಸಾಮಾನ್ಯ. ಅಂತಹ ಸಮಯದಲ್ಲಿ ವಿಘ್ನರಾಜನ ಮೂರ್ತಿಗೆ ಬದಲಾಗಿ ಗೋಮಯದಿಂದ ಸಣ್ಣ ಆರತಿ (ಪಿಳ್ಳಾರತಿ) ಮಾಡಿ ಅದಕ್ಕೆ ಗರಿಕೆ ಹುಲ್ಲನ್ನು ಸಿಕ್ಕಿಸಿ ಪೂಜಿಸುವ ವಾಡಿಕೆ ಬಹಳ ಹಿಂದಿನಿಂದಲೂ ನಡೆದು ಬಂದಿದೆ. ಹೀಗೆ ಪೂಜೆಗೆ ಅವಶ್ಯಕವಾದ ಗರಿಕೆ ಹುಲ್ಲು ಔಷಧಿ ಗಿಡವಾಗಿಯೂ ಹೆಸರು ಪಡೆದಿದೆ

ಗರಿಕೆಹುಲ್ಲು ಸಾಮಾನ್ಯವಾಗಿ ಎಲ್ಲಾ ಪರಿಸ್ಥಿತಿಗೂ ಹೊಂದಿಕೊಂಡು ಬೆಳೆಯುತ್ತದೆ ಕೆಲವೊಮ್ಮೆ ಈ ಮೂಲಿಕೆಯು ಸಾಗುವಳಿ ಜಮೀನಿನಲ್ಲಿ ವಿಪರೀತವಾಗಿ ಬೆಳೆದು ಕಳೆಯಾಗಿ ಸಹ ಪರಿಣಮಿಸುತ್ತದೆ ಗಿಡದ ಕಾಂಡವು ನೆಲದ ಮೇಲೆ ತೆವಳಿಕೊಂಡು ಬೆಳೆಯುತ್ತದೆ ಹರಿಯುವ ಕಾಂಡದ ಗೇಣ್ಣುಗಳಲ್ಲಿ ಬೇರುಗಳು ಮತ್ತು ಲಂಬವಾಗಿ ಬೆಳೆಯುವ ಹೊಸಕಾಂಡದ ಚಿಗುರುಗಳಿರುತ್ತವೆ ಕಾಂಡದ ಮೇಲೆ ನೀಳಾಕಾರದ ಎಲೆಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ. ಕಾಂಡದ ತುದಿಯಲ್ಲಿ ಛತ್ರಿಯಾಕಾರದ ಸ್ಪೈಕ್ ಲೆಟ್ ಹೂಗೊಂಚಲಿರುತ್ತದೆ

## ಉಪಯೋಗಗಳು

1 ಗರಿಕೆ ಬೇರಿನ ರಸವನ್ನು 4-6 ತೊಟ್ಟಿನಷ್ಟನ್ನು ಮೂಗಿಗೆ ಹಾಕುವುದರಿಂದ ಮೂಗಿನಿಂದ ಸುರಿಯುವ ರಕ್ತ ನಿಲ್ಲುತ್ತದೆ. ಇದೇ ರಸವನ್ನು ಕೆಲವು ದಿವಸ ಕುಡಿಸುವುದರಿಂದ ಮುಂದಿನ ದಿವಸಗಳಲ್ಲಿ ಈ ರೀತಿ ಮೂಗಿನಿಂದ ರಕ್ತ ಬರುವುದು ನಿಂತು ಹೋಗುತ್ತದೆ.

2 ಒಂದು ಹಿಡಿ ಗರಿಕೆಹುಲ್ಲನ್ನು ಬೇರು ಸಹಿತ ಕಿತ್ತು ತಂದು ಚೆನ್ನಾಗಿ ತೊಳೆದು 2 ಲೀಟರ್ ನೀರಿನಲ್ಲಿ ಹಾಕಿ ಮಂದಾಗ್ನಿಯಲ್ಲಿ ಕಾಯಿಸಿ $^1/_4$ ಲೀಟರ್‌ಗೆ ಹಿಂಗಿಸಿಕೊಂಡು ಅದಕ್ಕೆ ತಕ್ಕಷ್ಟು ಹಾಲು ಮತ್ತು ತಾಟಿಬೆಲ್ಲ ಸೇರಿಸಿ ಬೆಳಗ್ಗೆ-ಸಂಜೆ ಕೆಲವು ದಿವಸ ಕುಡಿಯಲು ಮೂತ್ರ ತಡೆಯಿಲ್ಲದೆ ವಿಸರ್ಜನೆಯಾಗುತ್ತದೆ. ಇದೇ ಚಿಕಿತ್ಸೆಯನ್ನು 14 ದಿವಸ ಮಾಡಲು ವೀರ್ಯವೃದ್ಧಿಯಾಗುತ್ತದೆ.

3 ಗರಿಕೆಹುಲ್ಲಿನ ರಸವನ್ನಾಗಲಿ ಅಥವಾ ಕೊಬ್ಬರಿ ಎಣ್ಣೆಗೆ ರಸ ಹಾಕಿ ತಯಾರಿಸಿದ ತೈಲಪಾಕವನ್ನಾಗಲಿ ಆಗತಾನೆ ಬೆಂಕಿಸ್ಪರ್ಷದಿಂದ ಆದ ಗಾಯದ ಮೇಲೆ ಹಾಕುವುದರಿಂದ ಗಾಯ ಬೇಗ ವಾಸಿಯಾಗುತ್ತದೆ.

4 ಗರಿಕೆಹುಲ್ಲು ಮತ್ತು ಅರಿಸಿನವನ್ನು ನಯವಾಗಿ ಅರೆದು ಕಜ್ಜಿ, ತುರಿ, ನವೆ, ದದ್ದು ಮತ್ತು ಕುರು ಇರುವ ಕಡೆ ದಿವಸಕ್ಕೆ 2-3 ಬಾರಿಯಂತೆ ಕೆಲವು ದಿವಸ ಲೇಪಿಸುವುದರಿಂದ ಅವು ವಾಸಿಯಾಗುತ್ತವೆ

5 ಗರಿಕೆ ಹುಲ್ಲಿನ ಸಮೂಲವನ್ನು ತಂದು ಅರೆದು ರಸ ಮಾಡಿಕೊಂಡು ಈ ರಸವನ್ನು 7-14 ಮಿ ಲೀ. ಪ್ರಮಾಣದಷ್ಟು ತೆಗೆದುಕೊಂಡು ದಿವಸಕ್ಕೆ ಮೂರು ಸಾರಿಯಂತೆ ಕೆಲವು ದಿವಸ ಸೇವಿಸುವುದರಿಂದ ಮೂಲವ್ಯಾಧಿ ವಾಸಿಯಾಗುತ್ತದೆ

6 ಗರಿಕೆಹುಲ್ಲಿನ ಸಮೂಲದ ರಸಕ್ಕೆ ಜೇನು ತುಪ್ಪ ಸೇರಿಸಿ ಸೇವಿಸುವುದರಿಂದ ವಾಂತಿ, ಜ್ವರ, ಹಸಿವಿಲ್ಲದಿರುವಿಕೆ, ಅಜೀರ್ಣ, ನಿಶ್ಯಕ್ತಿ ಮುಂತಾದ ತೊಂದರೆಗಳು ವಾಸಿಯಾಗುತ್ತವೆ



# ಗರುಗದ ಸೊಪ್ಪು

| | |
|---|---|
| ವೈಜ್ಞಾನಿಕ ಹೆಸರು | ಎಕ್ಲಿಪ್ಟ ಆಲ್ಬ [Eclipta alba (L ) Hassk ] =ಎ.ಪ್ರೊಸ್ಟ್ರಾಟ [=E prostrata (L )L ] |
| ಸಸ್ಯದ ಕುಟುಂಬ | ಆಸ್ಟಿರೇಸಿ [Asteraceae] |
| ಕನ್ನಡದ ಇತರ ಹೆಸರುಗಳು | ಅಜಗರ, ಕಾಡುಗರುಗ, ಕಾಡಿಗೆಗರಿಗೆ, ಕೇಶವರ್ಧನ, ಗರಗಲು, ಗರುಂಗ್ |
| ಇತರ ಭಾಷೆಯ ಹೆಸರುಗಳು | ಸಂ - ಕೇಶರಾಜ, ಬೃಂಗರಾಜ<br>ಹಿಂ -ಭಂಗ್ರ<br>ತ - ಕರಿಸಲಾಂಗಣ್ಣಿ, ಕರಿಸಾಲೆ, ಗರುಗ<br>ತೆ - ಗಲಗರ<br>ಇಂ.- ದಿ ಕೆಸುರಿ, |

**ಪರಿಚಯ**

ಕಾಲುವೆ ಮತ್ತು ಚರಂಡಿಗಳ ಅಂಚಿನಲ್ಲಿ,ಕುಯ್ಲಾದ ಭತ್ತದ ಗದ್ದೆಯಲ್ಲಿ ಮತ್ತು ನೆರಳು ತೇವವಿರುವ ತೋಟಗಳಲ್ಲಿ ಈ ಮೂಲಿಕೆಯು ಕಳೆಯಂತೆ ಬೆಳೆಯುತ್ತದೆ. ಗರುಗದ ಮೂಲಿಕೆಯು ಹರಡಿ ಇಲ್ಲವೆ ನೆಟ್ಟಗೆ ಬೆಳೆಯುತ್ತದೆ. ಕಾಂಡವು ಎಳೆಯದಾಗಿರುವಾಗ ನೇರಳೆ ಮಿಶ್ರಿತ ಹಸಿರಾಗಿರುತ್ತದೆ. ಮತ್ತು ಕಾಂಡದ ಮೇಲೆ ಬಿಳಿಯ ರೋಮಗಳಿರುತ್ತವೆ ಸರಳವಾದ ಎಲೆಗಳು ಅಭಿಮುಖವಾಗಿ ಜೋಡಣೆಯಾಗಿರುತ್ತವೆ. ಎಲೆಗಳು ಕರ್ನೆ ಅಥವಾ ನೀಳಾಕಾರವಾಗಿರುತ್ತವೆ ಮತ್ತು ಅವುಗಳ ಮೇಲೆ ರೋಮಗಳಿರುತ್ತವೆ ಎಲೆಯ ಕಂಕುಳಲ್ಲಿ ಸೂರ್ಯಕಾಂತಿ ಹೂವನ್ನು ಹೋಲುವ ಹೂಗಳಿರುತ್ತವೆ ಹೂವಿನ ಬಣ್ಣ ಬಿಳುಪಾಗಿರುತ್ತದೆ ಕಪ್ಪನೆಯ ಕಾಯಿಗೆ ಮೂರು ಏಣುಗಳಿರುತ್ತವೆ

## ಉಪಯೋಗಗಳು

1 ಗರುಗದ ರಸವನ್ನು ಮೂಗಿಗೆ ಕೆಲವು ತೊಟ್ಟು ಹಾಕಲು ಹಾವಿನ ವಿಷ ಇಳಿಯುತ್ತದೆ

2 ಗರುಗದ ಎಲೆ ಮತ್ತು ಮೆಣಸನ್ನು ಸಮಭಾಗ ತೆಗೆದುಕೊಂಡು ಚೆನ್ನಾಗಿ ಅರೆದು ಎಲಚಿಬೀಜದ ಗಾತ್ರದ ಮಾತ್ರೆ ಮಾಡಿಟ್ಟುಕೊಂಡು ಮಜ್ಜಿಗೆಯಲ್ಲಿ ತೇಯ್ದು ಕುಡಿಯುವುದರಿಂದ ಎಲ್ಲ ಬಗೆಯ ಅಜೀರ್ಣವು ವಾಸಿಯಾಗುತ್ತದೆ

3 ಗರುಗದ ಸೊಪ್ಪಿನ ರಸ ಕುಡಿಯುವುದರಿಂದ ಛಳಿ, ಜ್ವರ ವಾಸಿಯಾಗುತ್ತದೆ

4 ಅರ್ಧ ಹಿಡಿಯಷ್ಟು ಗರುಗದ ಸೊಪ್ಪನ್ನು ಅರೆದು ಮಜ್ಜಿಗೆಯಲ್ಲಿ ಕದಡಿ ದಿನಕ್ಕೆ ಎರಡು ಬಾರಿ ಕುಡಿಯುವುದರಿಂದ ಸ್ವರಭಂಗ ಪರಿಹಾರವಾಗುತ್ತದೆ

5 ಗರುಗದ ರಸ (ಕಾಡುಗರುಗ) 1 ತೊಲದಷ್ಟು ಆಕಳ ಹಾಲಿನಲ್ಲಿ ಪ್ರತಿನಿತ್ಯ ಬೆಳಗ್ಗೆ ಸೇವಿಸುವುದರಿಂದ ಅಪಸ್ಮಾರ ಪರಿಹಾರವಾಗುತ್ತದೆ. 1-2 ತಿಂಗಳು ಈ ಚಿಕಿತ್ಸೆ ನಡೆಸಬೇಕು

6 ಗರುಗದ ಸೊಪ್ಪು 1ಭಾಗ, ಹಸಿಶುಂಠಿ $^1/_4$ ಭಾಗ ಇವುಗಳನ್ನು ನಿಂಬೆಹಣ್ಣಿನ ರಸದಲ್ಲಿ ಅರೆದು ನಿತ್ಯ ಚಟ್ಣಿಯಂತೆ ಉಪಯೋಗಿಸಿದರೆ ಕಫ, ಬಾವು, ಅಜೀರ್ಣ, ರಕ್ತಹೀನತೆ (Anaemia), ಚರ್ಮರೋಗಗಳು ಮತ್ತು ಕ್ಷಯ ಪರಿಹಾರವಾಗುತ್ತದೆ

7 ಗರುಗದ ಸೊಪ್ಪು ಮತ್ತು ಕರಿಮೆಣಸನ್ನು ಅರೆದು ಬಟ್ಟೆಯಲ್ಲಿ ಕಟ್ಟಿ ಎಡಗಡೆ ತೊಡೆವಾಳೆಯಾಗಿದ್ದರೆ ಬಲಗಡೆ ಕಿವಿಗೆ, ಬಲಗಡೆಯಾಗಿದ್ದರೆ ಎಡಕಿವಿಗೆ ಹಿಂಡುವುದರಿಂದ ತೊಡೆವಾಳೆ ಕರಗಿ ಹೋಗುತ್ತದೆ.

8 ಗರುಗದ ಸೊಪ್ಪನ್ನು ಎಳ್ಳೆಣ್ಣೆಯಲ್ಲಿ ಕರಿದು ಚೂರ್ಣಮಾಡುಕೊಂಡು ಪ್ರತಿದಿನ ಬೆಳಗ್ಗೆ -ರಾತ್ರಿ ಒಂದೊಂದು ತೊಲ ತಿಂದು ನಂತರ ನೀರು ಕುಡಿಯುವುದರಿಂದ ತೊನ್ನು (Vitiligo, Leukoderma)

ನಿವಾರಣೆಯಾಗುತ್ತದೆ. ಕರಿದ ನಂತರ ಬಾಣಲೆಯಲ್ಲಿ ಉಳಿದ ಎಣ್ಣೆಯನ್ನು ಮೈಗೆ ಮತ್ತು ತೊನ್ನಿರುವ ಕಡೆ ಲೇಪಿಸಲು ಬಳಸಬಹುದು

9 ಗರುಗದ ಸೊಪ್ಪಿನ ರಸವನ್ನು, ಕಾಲಿನ ಬೆರಳುಗಳ ಸಂದಿಯಲ್ಲಿ ಉಂಟಾಗುವ ಬಿರುಕುಗಳಿಗೆ ಹಚ್ಚುವುದರಿಂದ ಬಿರುಕುಗಳು ಕೂಡಿಕೊಂಡು ಬೇಗ ವಾಸಿಯಾಗುತ್ತವೆ

10 ಗರುಗದ ಸೊಪ್ಪಿನ ರಸ, ನೆಲ್ಲಿಕಾಯಿ ರಸ, ಅತಿಮಧುರ, ಎಳ್ಳೆಣ್ಣೆ ಸೇರಿಸಿ ಸಿದ್ಧ ಪಡಿಸಿದ ತೈಲವು ಕೂದಲಿನ ಬೆಳವಣಿಗೆಗೆ ಸಹಕಾರಿ ಹಾಗೂ ಕಣ್ಣಿಗೆ ತಂಪನ್ನು ಉಂಟು ಮಾಡುತ್ತದೆ

## ಪಶುರೋಗ ಚಿಕಿತ್ಸೆಯಲ್ಲಿ

ಗರುಗದ ಸೊಪ್ಪಿನ ಕುಡಿ1 ಹಿಡಿ, ಕಾಡು ಮೆಣಸಿನ ಗಿಡದ ಕುಡಿ 1ಹಿಡಿ, ಸೀಗೆ ಮರದ ಕುಡಿ 1 ಹಿಡಿ ತೆಗೆದುಕೊಂಡು ಒರಳಿನಲ್ಲಿ ಹಾಕಿ ತಲಾ ಎರಡು ಚಮಚ ಕರಿಮೆಣಸು, ಲವಂಗ ಮತ್ತು ಮರಾಟ ಮೊಗ್ಗು ಸೇರಿಸಿ ರುಬ್ಬಿ ನೀರಿನೊಡನೆ ಕುಡಿಸುವುದರಿಂದ ತೊಳ್ಳೆರೋಗ ವಾಸಿಯಾಗುತ್ತದೆ



# ಗುಲಗಂಜಿ

| | |
|---|---|
| ವೈಜ್ಞಾನಿಕ ಹೆಸರು | ಎಬ್ರಸ್ ಪ್ರಿಕಟೋರಿಯಸ್ [Abrus precatorius L] |
| ಸಸ್ಯದ ಕುಟುಂಬ | ಫ್ಯಾಬೇಸಿ [Fabaceae] |
| ಕನ್ನಡದ ಇತರ ಹೆಸರುಗಳು | ಗುಂಜಿ, ಗುಂಡುಮಣಿ, ಮಧುಕವಲ್ಲಿ, ಹೌಡಿಗೆ, |
| ಇತರ ಭಾಷೆಯ ಹೆಸರುಗಳು | ಸಂ. -ಗುಂಜ<br>ಹಿಂ - ಗುಂಗ್ಚ, ಗುಂಚಿ, ರತಿ,<br>ತ - ಗುಂಡುಮಣಿ, ಕುನ್ರಿಮಣಿ<br>ತೆ - ಗುರಿಗಿಂಜ<br>ಇಂ - ಕ್ರ್ಯಾಬ್ಸ್ ಐ, ಇಂಡಿಯನ್‌ಲಿಕ್ವಿರೈಸ್, ಜೆಕ್ವೈರಿಟಿ |

**ಪರಿಚಯ**

ಈ ಬಳ್ಳಿಯು ಕಳ್ಳಿ ಕುರುಚಲು ಗಿಡಗಳನ್ನೊಳಗೊಂಡ ಸಸ್ಯಾವರಣದಲ್ಲಿ ಸಣ್ಣ ಪೊದೆಗಳ ಮೇಲೆ ಹಬ್ಬಿ ಬೆಳೆಯುತ್ತದೆ ಬಳ್ಳಿ ಕಾಂಡದ ಮೇಲೆ ಸಂಯುಕ್ತ ಎಲೆಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ. ಒಂದು ಸಂಯುಕ್ತ ಎಲೆಯಲ್ಲಿ 10-20 ಜೊತೆ ಕಿರುಪತ್ರಗಳಿರುತ್ತವೆ. ಗುಲಾಬಿ ಬಣ್ಣದ ಸಣ್ಣ ಹೂಗಳು ಅಂತ್ಯಾರಂಭಿ ಪುಷ್ಪಮಂಜರಿಯಲ್ಲಿರುತ್ತವೆ. ಗಟ್ಟಿಯಾದ 3-4 ಸೆ ಮೀ. ಉದ್ದದ ಕಾಯಿಯಲ್ಲಿ 2-8 ಕಡುಗೆಂಪು ಬಣ್ಣದ ಹೊಳಪಿನ ಬೀಜಗಳಿರುತ್ತವೆ. ಬೀಜಗಳಿಗೆ ಒಂದು ಭಾಗದಲ್ಲಿ ಕಪ್ಪು ಮಚ್ಚೆಯಿರುತ್ತದೆ ಕೆಲವು ಬಗೆಯ ಗಿಡಗಳಲ್ಲಿ ಕೆಂಪು ಬೀಜಗಳಿಗೆ ಬದಲಾಗಿ ಬಿಳಿ ಬೀಜಗಳಿರುತ್ತವೆ. ಕೆಂಪು ಮತ್ತು ಬಿಳಿ ಬೀಜ ಬಿಡುವ ಗುಲಗಂಜಿ ಗಿಡಗಳೆರಡನ್ನೂ ಔಷಧಿ



ಚಿತ್ರ 40 · ಗುಲಗಂಜಿ - ಹೂ ಮತ್ತು ಕಾಯಿ ಇರುವ ಬಳ್ಳಿ

ತಯಾರಿಕೆಯಲ್ಲಿ ಉಪಯೋಗಿಸುತ್ತಾರೆ ಬಹುಪಾಲು ಔಷಧ ತಯಾರಿಕೆಯಲ್ಲಿ ಬಿಳಿಗುಲಗಂಜಿಯನ್ನೇ ಉಪಯೋಗಿಸುವುದು ಕಂಡು ಬರುತ್ತದೆ. ಈ ಮೊದಲು ಅಕ್ಕಸಾಲಿಗರು ಚಿನ್ನವನ್ನು ತೂಗಲು ಗುಲಗಂಜಿ ಬೀಜಗಳನ್ನು ಬಳಸುತ್ತಿದರು ಆದರೆ ಈಗ ಅದರ ಬಳಕೆ ಕಂಡು ಬರುತ್ತಿಲ್ಲ ಗುಲಗಂಜಿ ಬೀಜವು ಬಹಳ ವಿಷಯುಕ್ತವಾದದ್ದು ಬೀಜವನ್ನು ಔಷಧಕ್ಕೆ ಬಳಸುವ ಸಂದರ್ಭಗಳಲ್ಲ ಅದನ್ನು ಆಯುರ್ವೇದ ಗ್ರಂಥದಲ್ಲಿ ಹೇಳಿರುವಂತೆ ಶುದ್ಧಿಗೊಳಿಸಿ ವೈದ್ಯರ ಸಲಹೆಯಂತೆ ಬಳಸಬೇಕು

## ಉಪಯೋಗಗಳು

1 ಗುಲಗಂಜಿ ಬೇರು ಮತ್ತು ಬೀಜವನ್ನು ಚೂರ್ಣಮಾಡಿಕೊಂಡು ಎಮ್ಮೆ ಹಾಲಿಗೆ ಹಾಕಿ ಕಲಸಿ, ಮೊಸರು ಮಾಡಿ ಕಡೆದು ಬೆಣ್ಣೆ ತೆಗೆದು ನಿತ್ಯವು ಒಳ ಕಿವಿಗೆ ಗರಿಯಿಂದ ಲೇಪಿಸಲು ಬೇರೆ ಕಾರಣಗಳಿಂದ ಕಿವಿ ಕೇಳಿಸದಿದ್ದವರಿಗೆ ಕಿವಿ ಚೆನ್ನಾಗಿ ಕೇಳಿಸುವಂತಾಗುತ್ತದೆ

2 ಗುಲಗಂಜಿ ಬೇರನ್ನು ಹಾಲಿಗೆ ಹಾಕಿ ಕಾಯಿಸಿ ಹಾಲನ್ನು ಮಾತ್ರ ಸೇವಿಸುವುದರಿಂದ ಸ್ವಪ್ನ ಸ್ಖಲನ (Spermatorrhoea) ಹತೋಟಿಗೆ ಬರುತ್ತದೆ

3 ಬೇರನ್ನು ಬಾಯಿಯಲ್ಲಿ ಹಾಕಿಕೊಂಡು ಜಿಗಿದು ರಸವಿಟ್ಟು ಕೊಳ್ಳುವುದರಿಂದ ಹುಳುಕು ಹಲ್ಲಿನ ತೊಂದರೆ ನಿವಾರಣೆಯಾಗುತ್ತದೆ

4 ಎಲೆಯ ರಸ ಅಥವಾ ಬೇರನ್ನು ಅರೆದು ಸೇವಿಸುವುದರಿಂದ ರಕ್ತ ಶುದ್ಧಿಯಾಗುತ್ತದೆ, ಗಂಟಲು ನೋವು, ಒಣಕೆಮ್ಮು ಕಡಿಮೆಯಾಗುತ್ತದೆ.

5 ಎಲೆಯ ರಸವನ್ನು ಕಲೆಗಳಿರುವ ಕಡೆ ಲೇಪಿಸುವುದರಿಂದ ಕಲೆಗಳು ನಿವಾರಣೆಯಾಗುತ್ತವೆ.

6 ಎಲೆಯನ್ನು ಅರೆದು ಎಳ್ಳೆಣ್ಣೆಯೊಡನೆ ಕಲಸಿ ಬಿಸಿಮಾಡಿ ಇಲ್ಲವೆ ಕಾಯಿಸಿ

ತೈಲ ಮಾಡಿಕೊಂಡು ವಾಯು ನೋವಿರುವ (ಸಂಧಿವಾತ) ಕಡೆ ಲೇಪಿಸುವುದರಿಂದ ನೋವು ಕಡಿಮೆಯಾಗುತ್ತದೆ

7 ನಾಯಿ ಕಡಿದವರಿಗೆ ಸೊಪ್ಪನ್ನು ಅರೆದು ಎಳ್ಳೆಣ್ಣೆಯೊಡನೆ ಕುಡಿಸುತ್ತಾರೆ

8 ಎಲೆಗಳ ರಸ ಸೇವಿಸುವುದರಿಂದ ಉರಿಮೂತ್ರ ಉಪಶಮನವಾಗುತ್ತದೆ

9 ಗುಲಗಂಜಿ ಬೀಜವನ್ನು ಸುಟ್ಟು ಕರುಕುಮಾಡಿ ಹರಳೆಣ್ಣೆಯಲ್ಲಿ ಅರೆದು ಮುಲಾಮು ಮಾಡಿಟ್ಟುಕೊಂಡು ಈ ಮುಲಾಮನ್ನು ದಿವಸಕ್ಕೆ 3 ಸಾರಿಯಂತೆ ಕೆಲವು ದಿವಸ ಹಚ್ಚುವುದರಿಂದ ತೊನ್ನು ವಾಸಿಯಾಗುತ್ತದೆ

10 ಬೀಜವನ್ನು ಅರೆದು ಗಂಧ ಮಾಡಿಕೊಂಡು ಹೇನು ಕರೆಯಾದ ಕಡೆ ಲೇಪಿಸುವುದರಿಂದ ಹೇನುಕರೆ ವಾಸಿಯಾಗಿ ಕೂದಲು ಮೊದಲಿನಂತೆ ಬೆಳೆಯುತ್ತದೆ

11 ಗುಲಗಂಜಿ ಬೀಜ ಮತ್ತು ಚಿತ್ರಮೂಲದ ಬೇರನ್ನು ಚೆನ್ನಾಗಿ ಅರೆದು ತೊನ್ನಿರುವ ಜಾಗದ ಮೇಲೆ ಲೇಪಿಸುತ್ತಾರೆ

12 ಸುಮಾರು 1-3 ಗುಂಜಿ ತೂಕ ಗುಲಗಂಜಿ ಬೀಜದ ಚೂರ್ಣವನ್ನು ಹಾಲಿಗೆ ಹಾಕಿ ಕುದಿಸಿ ಹಾಲನ್ನು ಸೇವಿಸುವುದರಿಂದ ವೀರ್ಯವರ್ಧನೆಯಾಗುತ್ತದೆ

13 ಗುಲಗಂಜಿ ಬೀಜವನ್ನು ನೀರಿನಲ್ಲಿ ನೆನೆಸಿ ಅರೆದು ಅದಕ್ಕೆ ಸ್ವಲ್ಪ ಅಡಿಗೆ ಉಪ್ಪು ಸೇರಿಸಿ ಕುರು(boils) ವಿನ ಮೇಲೆ ಪಟ್ಟು ಹಾಕುವುದರಿಂದ ಅವು ಬೇಗನೆ ಮಾಗಿ ಒಡೆದು ಕೀವು ಹೊರ ಬಂದು ನೋವು ಕಡಿಮೆಯಾಗುತ್ತದೆ

14 ಅಲ್ಪ ಪ್ರಮಾಣದಲ್ಲಿ ಸಿಪ್ಪೆಸುಲಿದ ಗುಲಗಂಜಿ ಬೀಜದ ಚೂರ್ಣ ಸೇವನೆಯಿಂದ ಜಂತುಹುಳುಗಳು ಮಲದೊಡನೆ ಹೊರ ಬರುತ್ತವೆ

## ಪಶುರೋಗ ಚಿಕಿತ್ಸೆಯಲ್ಲಿ

1 ಗುಲಗಂಜಿ ಬೇರಿನ ಗಂಧವನ್ನು ಕಣ್ಣಿಗೆ ಹಚ್ಚುವುದರಿಂದ ಕಣ್ಣಿನ ಪೊರೆ ನಿವಾರಣೆಯಾಗುತ್ತದೆ

2 ಬಿಳಿ ಗುಲಗಂಜಿ ಸೊಪ್ಪಿನ ರಸ 1 ಸೇರು, ಬಿಳಿ ಕೊಮ್ಮ ರಸ 1 ಸೇರು, ಗಂಧವೀಡೆಲುಪ್ಪು 1 ತೊಲ ಇವುಗಳನ್ನು ಸಾರಾಯಿಯಲ್ಲಿ ಊರಲಿಟ್ಟು ಒಂದು ವೇಳೆ ಒಂದು ಗೊಟ್ಟದಂತೆ ದಿವಸಕ್ಕೆ 3 ಸಾರಿಯಂತೆ 14 ದಿವಸ ಕುಡಿಸುವುದರಿಂದ ನಾಯಿರೋಗ ಕಡಿಮೆಯಾಗುತ್ತದೆ. ಮೇಲಿನ ರಸವನ್ನೇ ಚಿಕಿತ್ಸಾ ಕಾಲದಲ್ಲಿ ಸುಮಾರು 7 ದಿವಸ 4-5 ತೊಟ್ಟಿನಷ್ಟು ಮೂಗಿಗೆ ಹಿಂಡಬೇಕು

3 ಶುದ್ಧಿ ಮಾಡಿದ ಗುಲಗಂಜಿ ಸಮೂಲದ ಚೂರ್ಣ 3 ತೊಲ, ಶುಂಠಿ 3 ತೊಲ ಮತ್ತು ಹಿಪ್ಪಲಿ 3 ತೊಲ ಇವುಗಳನ್ನು ಅರೆದು ಒಂದು ಸೇರು ನೀರಿಗೆ ಸೇರಿಸಿ ದಿವಸಕ್ಕೊಮ್ಮೆಯಂತೆ 5-6 ದಿವಸ ಕುಡಿಸುವುದರಿಂದ ನರಡಿ (ಗುಲ್ಮರೋಗ) ವಾಸಿಯಾಗುತ್ತದೆ





ಚಿತ್ರ 41 ಗೋರಂಟಿ - ಹೂ ಮತ್ತು ಕಾಯಿಗಳಿರುವ ರೆಂಬೆ

## ಉಪಯೋಗಗಳು

1 ಗೋರಂಟಿ ಬೇರಿನ ರಸ ಸುಮಾರು 7-14 ಮಿ.ಲೀ ತೆಗೆದುಕೊಂಡು ಅದಕ್ಕೆ 50-100 ಮಿ ಲೀ ಅಕ್ಕಿ ತೊಳೆದ ನೀರನ್ನು ಸೇರಿಸಿ ದಿವಸಕ್ಕೆ ಮೂರು ಸಾರಿ ಕುಡಿಸುವುದರಿಂದ ಅರಿಸಿನ ಕಾಮಾಲೆ ವಾಸಿಯಾಗುತ್ತದೆ

2 ಗೋರಂಟಿ (ಮದರಂಗೀ) ಸೊಪ್ಪು 2 ತೊಲದಷ್ಟನ್ನು ನಿತ್ಯ ಬೆಳಗ್ಗೆ 1 ಲೋಟ ನೊರೆ ಹಾಲಿನಲ್ಲರೆದು 1-2 ವಾರ ಕುಡಿಯುವುದರಿಂದ ಕಾಮಾಲೆ ವಾಸಿಯಾಗುತ್ತದೆ

3 ಗೋರಂಟಿ ಎಲೆಯ ಕಷಾಯ ಮಾಡಿ ತಕ್ಕಷ್ಟು ಹಾಲು ಸಕ್ಕರೆ ಸೇರಿಸಿ 24 ದಿವಸ ಕುಡಿಯುವುದರಿಂದ ದೇಹದಲ್ಲಿ ಬಲವುಂಟಾಗುತ್ತದೆ ಮತ್ತು ರಕ್ತ ಶುದ್ಧಿಯಾಗುತ್ತದೆ.

4 ಗೋರಂಟಿಸೊಪ್ಪು, ಬೆಳ್ಳುಳ್ಳಿ, ಮೆಣಸು, ನಿಂಬೆರಸ, ಸೇರಿಸಿ ಅರೆದು ಮುಲಾಮು ಮಾಡಿ ಹಚ್ಚುವುದರಿಂದ ಉಗುರುಸುತ್ತು ನಿವಾರಣೆಯಾಗುತ್ತದೆ.

5 ಗೋರಂಟಿ ಸೊಪ್ಪನ್ನು ನಿಂಬೆಹುಳಿಯಲ್ಲಿ ಅರೆದು ಉರಿಯುವ ಅಂಗಾಲಿಗೆ ಪಟ್ಟು ಹಾಕುವುದರಿಂದ ಉರಿ ಕಡಿಮೆಯಾಗುತ್ತದೆ.

6 ಗೋರಂಟಿ ಗಿಡದ ಚಕ್ಕೆಯ ಕಷಾಯ ಕುಡಿಯುವುದರಿಂದ ಮೂತ್ರಕೋಶದಲ್ಲಿನ ಕಲ್ಲು ನಿವಾರಣೆಯಾಗುತ್ತದೆ.

7 ಹೆಂಗಸರು ಗೋರಂಟಿ ಬಣ್ಣವನ್ನು ಕೈಯಿಗೆ ಹಚ್ಚುತ್ತಾರೆ. ಇದು ಅಲಂಕಾರ ಮಾತ್ರವಲ್ಲ ಇದರಿಂದ ದೇಹಕ್ಕೆ ತಂಪು ಉಂಟಾಗುತ್ತದೆ.

8 ಒಂದು ಭಾಗ ಗೋರಂಟಿ ಸೊಪ್ಪಿನ ರಸಕ್ಕೆ ಮೂರು ಭಾಗ ಎಳ್ಳು ಅಥವಾ ಕೊಬ್ಬರಿಎಣ್ಣೆ ಸೇರಿಸಿ ಕಾಯಿಸಿ ತಯಾರಿಸಿದ ಎಣ್ಣೆಯನ್ನು ತಲೆಗೆ ಹಚ್ಚುವುದರಿಂದ ನೆತ್ತಿ ತಂಪಾಗುತ್ತದೆ ಜೊತೆಗೆ ಕೂದಲಿಗೆ ವರ್ಣವನ್ನು ತರುತ್ತದೆ

9 ಗೋರಂಟಿ ಹೂಗೊಂಚಲನ್ನು ತಲೆಹತ್ತಿರ ಇಟ್ಟುಕೊಂಡು ಮಲಗಿದರೆ ಅನಿದ್ರೆಯಿಂದ ಬಳಲುವವರಿಗೆ ನೆಮ್ಮದಿಯಾಗಿ ನಿದ್ರೆ ಬರುತ್ತದೆ

10 ಹಿಸ್ಟೀರಿಯ ರೋಗವುಳ್ಳ ಹೆಂಗಸರು ಗೋರಂಟಿ ಹೂಗೊಂಚಲನ್ನು ತಲೆಯಲ್ಲಿ ಮುಡಿಯುವ ಅಭ್ಯಾಸ ರೂಢಿಸಿಕೊಂಡರೆ ಅವರಿಗೆ ಚೆನ್ನಾಗಿ ನಿದ್ರೆ ಬರುವುದರ ಜೊತೆಗೆ ರೋಗವು ಕ್ರಮೇಣ ವಾಸಿಯಾಗುತ್ತದೆ





ಚಿತ್ರ 42 ಗಂಧದ ಮರ - ಹೂಗಳಿರುವ ರೆಂಬೆ

# ಗಂಧದ ಮರ (ಶ್ರೀ ಗಂಧ)

| | |
|---|---|
| ವೈಜ್ಞಾನಿಕ ಹೆಸರು | ಸ್ಯಾಂಟಾಲಂ ಆಲ್ಬಂ [Santalum album L ] |
| ಸಸ್ಯದ ಕುಟುಂಬ | ಸ್ಯಾಂಟಲೇಸಿ [Santalaceae] |
| ಕನ್ನಡದ ಇತರ ಹೆಸರುಗಳು | ಗಂಧ, ಚಂದನ, ಭದ್ರಶ್ರೀ |
| ಇತರ ಭಾಷೆಯ ಹೆಸರುಗಳು | ಸಂ -ಚಂದನ, ಶ್ರೀಗಂಧ, ಶ್ವೇತ ಚಂದನ |
| | ಹಿಂ - ಚಂದನ್, ಸ಼ಫೇದ್, ಚಂದನ್ |
| | ತ - ಇಂಗಂ, ಚಂದನಮರಂ |
| | ತೆ - ಚಂದನಮು |
| | ಇಂ - ಸ್ಯಾಂಡಲ್ ವುಡ್ ಟ್ರೀ |

**ಪರಿಚಯ**

ಗಂಧದ ಮರದ ತೌರು ಕರ್ನಾಟಕ ಈ ಮರವು ನಮ್ಮ ಅರಣ್ಯಗಳಲ್ಲಿ ಬೆಳೆಯುವ ಅತ್ಯಂತ ಬೆಲೆಬಾಳುವ ಮರವೆಂದು ಹೆಸರು ಪಡೆದಿದೆ. ಈ ಮರವು ಬೆಂಗಳೂರು, ಮೈಸೂರು, ಹಾಸನ, ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡು ಬರುತ್ತದೆ

ಈ ಮರವು ಸುಮಾರು 35 ಅಡಿ ಎತ್ತರದವರೆಗೂ ಬೆಳೆಯುತ್ತದೆ. ಮರವು ಸದಾಕಾಲ ಎಲೆಗಳಿಂದ ತುಂಬಿರುತ್ತದೆ ಕಾಂಡವು ಅಷ್ಟೇನು ದಪ್ಪವಿರುವುದಿಲ್ಲ ಬಲಿತ ಮರದ ಕಾಂಡದ ದಪ್ಪ 1 ರಿಂದ 1 $^1/_2$ ಅಡಿ ಇರುತ್ತದೆ. ಹೊಳಪಿನಿಂದ ಕೂಡಿದ ಎಲೆಗಳು ಅಭಿಮುಖವಾಗಿ ಜೋಡಣೆಯಾಗಿರುತ್ತವೆ. ಹೂಗಳು ಕಂದು ಬಣ್ಣಕ್ಕಿರುತ್ತವೆ. ಇಲ್ಲವೆ ಕಂದು ಮಿಶ್ರಿತ ಕೆಂಪಗಿರುತ್ತವೆ. ಬಲಿತ ಮತ್ತು ಒಣಗಿದ ಗಂಧದ ಮರದ ತುಂಡುಗಳಿಂದ ಗಂಧ ಮತ್ತು ಗಂಧದ ಎಣ್ಣೆ ತೆಗೆಯುತ್ತಾರೆ.

## ಉಪಯೋಗಗಳು

1 ಗಂಧದ ಕೊರಡನ್ನು ತಂಡುಲೋದಕದಲ್ಲಿ (ಅಕ್ಕಿ ನೆನೆಸಿ ಬಸಿದುಕೊಂಡ ನೀರು) ತೇಯ್ದು ಒಂದು ತೊಲ ಗಂಧಕ್ಕೆ ಒಂದು ತೊಲ ಸಕ್ಕರೆ ಸೇರಿಸಿ ದಿವಸಕ್ಕೆರಡು ಬಾರಿಯಂತೆ 1-2 ವಾರ ಸೇವಿಸುವುದರಿಂದ ಉರಿಮೂತ್ರ ಕಡಿಮೆಯಾಗುತ್ತದೆ.

2 ಗಂಧದಮರ ಮತ್ತು ಬಜೆಯನ್ನು ಮಜ್ಜಿಗೆಯಲ್ಲಿ ತೇಯ್ದು, ಎರಡರ ಗಂಧವನ್ನು ಸೇರಿಸಿ ಕಲಸಿ ಬಿಳಿಯ ಚಿಬ್ಬಿಗೆ ಲೇಪಿಸುವುದರಿಂದ ಚಿಬ್ಬು ವಾಸಿಯಾಗುತ್ತದೆ

3 ಗಂಧದ ಕೊರಡಿನಿಂದ ಗಂಧ ತೇಯ್ದು ಸೆಖೆ ಗುಳ್ಳೆಗಳೆದ್ದಿರುವ ಕಡೆ ಲೇಪಿಸುವುದರಿಂದ ಇಲ್ಲವೆ ಗಂಧದ ಪುಡಿಯನ್ನು ಸೆಖೆಗುಳ್ಳೆಗಳೆದ್ದಿರುವ ಕಡೆ ಸಿಂಪಡಿಸುವುದರಿಂದ ಅವು ವಾಸಿಯಾಗುತ್ತವೆ

4 ಗಂಧದ ಕೊರಡನ್ನು ಅರಿಸಿನ ಮತ್ತು ಹಾಲಿನೊಡನೆ ಅರೆದು ಗಂಧ ಮಾಡಿಕೊಂಡು ಮೊಡವೆ ಗುಳ್ಳೆಗಳಿಗೆ ಕೆಲವು ದಿವಸ ಹಚ್ಚುವುದರಿಂದ ಅವು ವಾಸಿಯಾಗುತ್ತವೆ ಗಂಧದ ಎಣ್ಣೆ ಮತ್ತು ಸಾಸಿವೆ ಎಣ್ಣೆಯ ಮಸೆಣ್ಣೆ ಮಾಡಿ ಬೇಕಾದರೂ ಹಚ್ಚಬಹುದು.

5 ಗಂಧದ ಕೊರಡನ್ನು ಎದೆ ಹಾಲಿನಲ್ಲಿ ಅರೆದು ತೆಗೆದ ಗಂಧವನ್ನು ನಸ್ಯ ಮಾಡಿದರೆ ದಮ್ಮು ಮತ್ತು ಬಿಕ್ಕಳಿಕೆ ಶಮನವಾಗುತ್ತವೆ.

6 ಗಂಧದ ಎಣ್ಣೆ 2-3 ತೊಟ್ಟು, ಕಿವಿಗೆ ಹಾಕುವುದರಿಂದ ಕಿವಿ ಸೋರುವುದು ನಿಲ್ಲುತ್ತದೆ.

## ಪಶುರೋಗ ಚಿಕಿತ್ಸೆಯಲ್ಲಿ

ಗಂಧದ ಎಣ್ಣೆಯಲ್ಲಿ ಕರ್ಪೂರವನ್ನು ಅರೆದು ಬಾಯಿಯಲ್ಲಿ ಕಾಣಿಸಿಕೊಳ್ಳುವ ದಡಾರದ ಹುಣ್ಣಿಗೆ ಲೇಪಿಸುತ್ತಾರೆ



# ಚೆಂಬಳಿಕೆ

| | |
|---|---|
| ವೈಜ್ಞಾನಿಕ ಹೆಸರು | ಎರಿತ್ರೋಕ್ಸೈಲಂ ಮಾನೊಗೈನಂ<br>[Erythroxylum monogynum Roxb ]<br>=ಎ. ಇಂಡಿಕಂ<br>[=E indicum (DC ) Bedd ] |
| ಸಸ್ಯದ ಕುಟುಂಬ | ಎರಿತ್ರೋಕ್ಸೈಲೇಸಿ [Erythroxylaceae] |
| ಕನ್ನಡದ ಇತರ ಹೆಸರುಗಳು · | ಕುರುವಾಕುಮರ, ಕುಂಬಳಾಕ್ಕೆ, ಗ್ಯಾದರಿ, ಗಂಧಗಿರಿ, ಚುಂಬುಳು, ಜೀವದಾರಿ, ದೇವದಾರಿ, |
| ಇತರ ಭಾಷೆಯ ಹೆಸರುಗಳು | ತ. - ದೇವದಾರು, ಚೆಮ್ಮನಟ್ಟಿ, ತಸದರಂ<br>ತೆ. - ಅಡವಿ ಗೋರಂಟಿ, ದೇವದಾರು, ಗಾತಿರಿ,<br>ಇಂ - ಬಾಸ್ಟರ್ಡ್ ಸ್ಯಾಂಡಲ್, ರೆಡ್ ಸಿಡಾರ್, |

**ಪರಿಚಯ**

ಈ ಸಸ್ಯವು ವಾತಾವರಣಕ್ಕೆ ತಕ್ಕಹಾಗೆ ಪೊದೆಯಂತೆ ಇಲ್ಲವೆ ಸಣ್ಣ ಮರದಂತೆ ಬೆಳೆಯುತ್ತದ. ಈ ಪೊದರು ಗಿಡವು ಕಳ್ಳಿ ಕುರುಚಲು ಗಿಡಗಳನ್ನೊಳಗೊಂಡ ಸಸ್ಯಾವರಣದಲ್ಲಿ ಹೆಚ್ಚಾಗಿ ಬೆಳೆಯುತ್ತದೆ. ಸರಳವಾದ ಅಂಡಾಕಾರದ ಎಲೆಗಳು ಕಾಂಡದ ಮೇಲೆ ಪರ್ಯಾಯವಾಗಿ ಜೋಡಣೆಯಾಗಿರುತ್ತವೆ. ಎಲೆಯ ಕಂಕುಳಲ್ಲಿ ಸಣ್ಣದಾದ ಬಿಳಿ ಬಣ್ಣದ ಹೂಗಳು ಒಂಟಿಯಾಗಿ ಇಲ್ಲವೆ ಗುಂಪಾಗಿರುತ್ತವೆ ಹಣ್ಣು ಕೆಂಪಗಿರುತ್ತದೆ.

## ಉಪಯೋಗಗಳು

1 ಬೇರಿನ ಗಂಧಕ್ಕೆ ಚಿತ್ರಮೂಲದ ಬೇರಿನ ಗಂಧ ಸೇರಿಸಿ ತಿನ್ನಿಸುವುದರಿಂದ ಉದರ ಸಂಬಂಧದ ರೋಗಗಳು ವಾಸಿಯಾಗುತ್ತವೆ

2 ಮರದ ತೊಗಟೆಯ ಸೇವನೆಯಿಂದ ಉದರಶೂಲೆ, ಜ್ವರ, ಮೂತ್ರ ಕೋಶದ ರೋಗಗಳು ವಾಸಿಯಾಗುತ್ತವೆ

3 ಚಂಬಳಿಕೆ ಗಿಡದ ಚೂರ್ಣ, ಸಬ್ಸೀಗೆ ಬೀಜ, ಸೈಂಧವ ಲವಣ ಮತ್ತು ಹಿಂಗನ್ನು ಎಕ್ಕದ ಹಾಲಿನಲ್ಲಿ ಅರೆದು ಲೇಪಿಸುವುದರಿಂದ ಕೀಲುವಾತ ಗುಣವಾಗುತ್ತದೆ

4 ಚಂಬಳಿಕೆ ಗಿಡದ ತೈಲವನ್ನು ಕಜ್ಜಿ, ತುರಿ ಮುಂತಾದ ಚರ್ಮರೋಗಗಳಿಗೆ ಹೊರ ಲೇಪನವಾಗಿ ಬಳಸುತ್ತಾರೆ

5 ಚಂಬಳಿಕೆಯ ಎಲೆಯ ರಸವನ್ನು ಸಕ್ಕರೆ ಜೇನುತುಪ್ಪದೊಡನೆ ತಿನ್ನುವುದರಿಂದ ಬಲವೀರ್ಯವೃದ್ಧಿಯಾಗುತ್ತದೆ



# ಚೆಂಡುಹೂ

| | |
|---|---|
| ವೈಜ್ಞಾನಿಕ ಹೆಸರು | ಟಗೆಟಿಸ್ ಇರೆಕ್ಟ (Tagetes erecta L ) |
| ಸಸ್ಯದ ಕುಟುಂಬ | ಆಸ್ಟಿರೇಸಿ (Asteraceae) |
| ಕನ್ನಡದ ಇತರ ಹೆಸರುಗಳು | ಗೊಂಡೆಗಿಡ, ಚೆಂಡುಮಲ್ಲಿಗೆ, ಸೀಮೆಶ್ಯಾವಂತಿ |
| ಇತರ ಭಾಷೆಯ ಹಸರುಗಳು | ಸಂ - ಸ್ಥೂಲಪುಷ್ಪ, ಜಂಡುಗ, ಗಂದುಗ<br>ಹಿಂ - ಗೆಂಡ, ಗುಟ್ಟೇರ<br>ತ - ತುರುಕ್ಕನಮಂಡಿ<br>ತೆ - ಬಂಟಿ, ಬಂಟಿಚೆಟ್ಟು<br>ಇಂ - ಆಫ್ರಿಕನ್ ಮರ್ರೆಗೋಲ್ಡ್ |

## ಪರಿಚಯ

ಮೆಕ್ಸಿಕನ್ ಮೂಲದ ಈ ಮೂಲಿಕೆಯು ಆಗಮನ ಭಾರತಕ್ಕೆ ಎಂದಾಯಿತೆಂದು ಖಚಿತವಾಗಿ ಹೇಳಲಾಗದಿದ್ದರೂ ಪ್ರೊ ಬಿ ಜಿ ಎಲ್ ಸ್ವಾಮಿಯವರು, ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಭಾರತಕ್ಕೆ ಬಂದಂತೆ ತೋರುತ್ತದೆ ಎಂದು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ ಈ ಮೂಲಿಕೆಯನ್ನು ಅಲಂಕಾರಿಕ ಗಿಡವಾಗಿ ಉದ್ಯಾನವನಗಳಲ್ಲಿ ಹೂಗಳಿಗಾಗಿ ಕೈತೋಟಗಳಲ್ಲಿ ಬೆಳೆಸಲಾಗುತ್ತಿದೆ ಈ ಗಿಡವು ಪೊದೆಯಂತೆ ಬೆಳೆಯುತ್ತದೆ ಸರಳವಾದ ಎಲೆಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ. ಎಲೆಗಳಿಗೆ ವಾಸನೆಯಿರುತ್ತದೆ ಸರಳವಾದ ಎಲೆಗಳು ಸೀಳುವುದರಿಂದ ಸಂಯುಕ್ತ ಎಲೆಯಂತೆ ಕಾಣುತ್ತದೆ ಎಲೆಯ ಸೀಳುಗಳ ಉದ್ದ 1-5 ಸೆ ಮೀ ಇರುತ್ತದೆ ಹಳದಿ ಅಥವಾ ಕಿತ್ತಳೆ ಬಣ್ಣದ ಹೂಗಳು ಚೆಂಡು ಪುಷ್ಪಮಂಜರಿಯಲ್ಲಿ ಒತ್ತಾಗಿ ಜೋಡಣೆಯಾಗಿರುತ್ತವೆ ಚೆಂಡು ಪುಷ್ಪಮಂಜರಿಯ ಅಗಲ ಸಾಧಾರಣವಾಗಿ 5-10 ಸೆ ಮೀ ಇರುತ್ತದೆ

## ಉಪಯೋಗಗಳು

1 ಹೂದಳದ ರಸ ಕುಡಿಸುವುದರಿಂದ ರಕ್ತ ಶುದ್ಧಿಯಾಗುತ್ತದೆ

2 ಹೂದಳದ ರಸಸೇವನೆಯಿಂದ ರಕ್ತಮೂಲವ್ಯಾಧಿ ಗುಣವಾಗುತ್ತದೆ

3 ಹೂದಳಗಳ ರಸ, ಕಬ್ಬಿಣದ ಅದಿರು ಮತ್ತು ಎಳ್ಳೆಣ್ಣೆ ಸೇರಿಸಿ ಕಬ್ಬಿಣದ ಪಾತ್ರೆಯಲ್ಲಿಟ್ಟು ಬಾಯಿ ಸೀಲು ಮಾಡಿ ಭೂಮಿಯಲ್ಲಿ ಒಂದು ತಿಂಗಳು ಕಾಲ ಹುಗಿದಿಟ್ಟು ನಂತರ ತೆಗೆದು ಈ ಮಿಶ್ರಣವನ್ನು ಚೆನ್ನಾಗಿ ಅರೆದು ಸೋಸಿ ಬಿಸಿಲಿನಲ್ಲಿಟ್ಟು ನೀರನ್ನು ಹಿಂಗಿಸಿ ಬರಿತೈಲವನ್ನು ಉಳಿಸಿಕೊಂಡು ಬಾಟಲ್‌ನಲ್ಲಿ ಸಂಗ್ರಹಿಸಿಟ್ಟುಕೊಂಡು ಕೂದಲಿಗೆ ಹಚ್ಚುವುದರಿಂದ ಕೂದಲಿಗೆ ವರ್ಣವುಂಟಾಗುತ್ತದೆ



# ಚೌಡಂಗಿ

| | |
|---|---|
| ವೈಜ್ಞಾನಿಕ ಹೆಸರು | ಸೊಲಾನಂ ಇರಿಯಾಂತಂ<br>(Solanum erianthum D Don)<br>=ಸೊ. ವರ್ಬಾಸಿಫೋಲಿಯಂ<br>(=S verbascifolium L ) |
| ಸಸ್ಯದ ಕುಟುಂಬ | ಸೊಲನೇಸಿ (Solanaceae) |
| ಕನ್ನಡದ ಇತರ ಹೆಸರುಗಳು | ಅರಿಮಣಿಗಿಡ, ಕಲ್ಲಟ್ಟಿ, ಕಾಡುಸುಂಡೆ, ಕಲ್ಲಾರತಿ, ಸವುಡಂಗಿ, ಸೌಡಂಗಿ |
| ಇತರ ಭಾಷೆಯ ಹೆಸರುಗಳು | ಸಂ - ಗಂಧಿರ, ವಧಿ, ಪ್ರಿಯಂಕರಿ<br>ಹಿಂ - ಅಶೇತ<br>ತ. - ಅನ್ನೈಚುಂಡ್ಶೈ, ಮಲೈಚುಂಡ್ಶೈ, ಸುಂಡ್ಶೈ<br>ತೆ - ರಸಗಡಿ, ಬುಡಮ |

## ಪರಿಚಯ

ಚೌಡಂಗಿ ಸಾಮಾನ್ಯವಾಗಿ ಹಳ್ಳಿಗಳ ಸುತ್ತಮುತ್ತ, ಗೊಬ್ಬರಗುಂಡಿಯ ಹತ್ತಿರ, ಪಾಳುಬಿದ್ದ ಕೋಟೆಕೊತ್ತಲ, ಮನೆಗಳ ಹತ್ತಿರ ಮತ್ತು ಬೀಳು ಭೂಮಿಯಲ್ಲಿ ಬೆಳೆಯುತ್ತದೆ. ಪ್ರಾಕೃತಿಕವಾಗಿ ಇದು ಕಾಡುಗಳಲ್ಲಿ ಕಂಡುಬರುವುದು ಅಪರೂಪ. ಚೌಡಂಗಿ 8-12 ಅಡಿ ಎತ್ತರ ಬೆಳೆಯುವ ಮಧ್ಯಮ ತರಹದ ಒಂದು ಮರ ಕಾಂಡ ಅಷ್ಟೊಂದು ಗಟ್ಟಿಯಾಗಿರುವುದಿಲ್ಲ ಮರದಲ್ಲಿ ಮುಳ್ಳುಗಳಿರುವುದಿಲ್ಲ ಸರಳವಾದ ಕರ್ಣಿಯಾಕಾರದ ಅಥವಾ ಉದ್ದ ಅಂಡಾಕಾರದ ಎಲೆಗಳು ಪರ್ಯಾಯವಾಗಿರುತ್ತವೆ ಆದರೆ ಕಾಂಡದ ತುದಿಯಲ್ಲಿ ಒತ್ತಾಗಿ ಜೋಡಣೆಯಾಗಿರುವುದರಿಂದ ಅಲ್ಪ ಸ್ವಲ್ಪ ಎದುರುಬದರಾಗಿರುತ್ತವೆ ಹಸಿರು ಮಿಶ್ರಿತ ಬದನೆ ಗಿಡದ ಹೂಗಳಂತಹ ಹೂಗಳು ಎಲೆಯ ಕಂಕುಳಲ್ಲಿ



ಚಿತ್ರ 15 · ಚೌಡಂಗಿ - ಹೂಗಳಿರುವ ರೆಂಬೆ

ಗೊಂಚಲೋಪಾದಿಯಾಗಿರುತ್ತವೆ. ಸಣ್ಣ ಗೋಲಿಗಾತ್ರದ ಹಣ್ಣುಗಳು ಎಳಸಾಗಿರುವಾಗ ಹಸಿರಾಗಿರುತ್ತವೆ ಬಲಿತಂತೆ ಕಿತ್ತಳೆಬಣ್ಣಕ್ಕೆ ತಿರುಗುತ್ತವೆ ಕಾಯಿಯ ಮೇಲೆ ಯಾವುದೇ ರೀತಿಯ ಗೆರೆಗಳಾಗಲಿ, ಪಟ್ಟಿಗಳಾಗಲಿ ಇರುವುದಿಲ್ಲ

## ಉಪಯೋಗಗಳು

1 ಒಣಗಿದ ಚೌಡಂಗಿ ಗಿಡದ ಸಮೂಲವನ್ನು ಬಿಸಿನೀರಿನೊಡನೆ ಅರೆದು ಪಟ್ಟು ಹಾಕುವುದರಿಂದ ಊತ ಮತ್ತು ಉರಿ ಶಮನವಾಗುತ್ತದೆ

2 ಗರ್ಭಿಣಿ ಹೆಂಗಸರ ಕೆಮ್ಮಿಗೆ ಚೌಡಂಗಿ ಸೊಪ್ಪಿನ ರಸಕ್ಕೆ ರಾಗಿ ಹಿಟ್ಟು ಹಾಕಿ ಕಲಸಿ ರೊಟ್ಟಿ ಮಾಡಿ ಕೊಡುತ್ತಾರೆ.

3 ಚೌಡಂಗಿ ಸೊಪ್ಪಿನೊಡನೆ ಅರಿಶಿನ, ಮೆಣಸು ಸೇರಿಸಿ ಅರೆದು ವಾಯು ನೋವಿರುವ ಜಾಗದ ಮೇಲೆ ಪಟ್ಟು ಹಾಕುತ್ತಾರೆ.

4 ಪ್ಲೇಗಿನ ಗಡ್ಡೆಗೂ ಚೌಡಂಗಿ ಸೊಪ್ಪನ್ನು ಅರೆದು ಲೇಪಿಸುತ್ತಾರೆ ಇದರಿಂದ ಗಡ್ಡೆ ಕರಗಿ ಜ್ವರ ಕಡಿಮೆಯಾಗುತ್ತದೆ





ಚಿತ್ರ 46 ಜಾಲರಿಮರ - ಹೂಗಳಿರುವ ರೆಂಬೆ

# ಜಾಲರಿಮರ

| | |
|---|---|
| ವೈಜ್ಞಾನಿಕ ಹೆಸರು | ಶೊರಿಯ ರಾಕ್ಸಬರ್ಜೈ (Shorea roxburghi G Don) =ಶೊ. ಟಾಲುರ (=S talura Roxb ) |
| ಸಸ್ಯದ ಕುಟುಂಬ | ಡಿಪ್ಟಿರೊಕಾರ್ಪೇಸಿ (Dipterocarpaceae) |
| ಕನ್ನಡದ ಇತರ ಹೆಸರುಗಳು | ಅರಗಿನಮರ, ಜಲರಂಡ, ಜಾಲದಮರ, ಜಾಲಾರಿಮರ |
| ಇತರ ಭಾಷೆಯ ಹೆಸರುಗಳು | ತ - ತಾಲುರ, ತಾಲಲಿ<br>ತೆ - ಜಾಲರಿ |

**ಪರಿಚಯ**

ಈ ಮರವನ್ನು ಮೊದಲು ಅರಗಿನ ಕೀಟಗಳನ್ನು ಸಾಕಲು ಬೆಳೆಸುತ್ತಿದ್ದರು ಆದುದರಿಂದ ಇದನ್ನು ಅರಗಿನ ಅಥವಾ ಮೈಸೂರು ಅರಗಿನ ಮರವೆಂದು ಕರೆಯುತ್ತಿದ್ದರು ಇತ್ತೀಚೆಗೆ ಈ ಮರವನ್ನು ಅಲ್ಲಲ್ಲಿ ಹೂವಿಗಾಗಿ ಬೆಳೆಸುತ್ತಿರುವುದನ್ನು ಕಾಣಬಹುದು ಚಳಿಗಾಲದ ಕೊನೆಯಲ್ಲಿ ಎಲೆಗಳಲ್ಲಿ ಉದುರಿಹೋದ ಮೇಲೆ ಹೊಸ ಚಿಗುರೆಲೆ ಹುಟ್ಟುತಿದ್ದಂತೆಯೇ ಮರವು ಬಿಳುಪಾದ ಪರಿಮಳಯುಕ್ತ ಹೂಗಳನ್ನು ಗೊಂಚಲುರೂಪದಲ್ಲಿ ಬಿಡುತ್ತದೆ

**ಉಪಯೋಗಗಳು**

1 ಮರದ ಗೋಂದನ್ನು ಜೇನುತುಪ್ಪ ಅಥವಾ ಸಕ್ಕರೆಯೊಡನೆ ತಿನ್ನುವುದರಿಂದ ಆಮಶಂಕೆ ಭೇದಿ ನಿವಾರಣೆಯಾಗುತ್ತದೆ





ಚಿತ್ರ 47 ಜೀವಹಾಲೆ ಬಳ್ಳಿ

# ಜೀವಹಾಲೆಬಳ್ಳಿ

| | |
|---|---|
| ವೈಜ್ಞಾನಿಕ ಹೆಸರು | ಲೆಪ್ಟಡೇನಿಯ ರೆಟ್ಟಿಕ್ಯುಲೇಟ (Leptadenia reticulata (Retz )Wt & Arn) |
| ಸಸ್ಯದ ಕುಟುಂಬ | ಅಸ್ಲಿಪಿಯಡೇಸಿ (Asclepiadaceae) |
| ಕನ್ನಡದ ಇತರ ಹೆಸರುಗಳು | ಜೀವಂತಿ, ಪಲತೀಗೆಬಳ್ಳಿ, ಬುಗುಡಿಹೂವಿನ ಗೆಡ್ಡೆ, ಸೀಗುಂಟ ಸೀಹಾಲೆ, ಹಿರಂದೋಡಿ |
| ಇತರ ಭಾಷೆಯ ಹೆಸರುಗಳು | ಸಂ - ಜೀವಂತಿ, ಶಾಕಶ್ರೇಷ್ಟ, ಸ್ವರ್ಣಜೀವಂತಿ |
| | ಹಿಂ - ಡಿಡೀಶಾಕ, ದೊರಿ, ಜೀವಂತಿ |
| | ತ - ಪಾಲುಕುಡ್ಶೈ |
| | ತೆ - ಪಾಲತಿಗೆ, ಕಲಾಸ, ಮುಕ್ಕುತುಮ್ಮುಡು |

**ಪರಿಚಯ**

ಇದು ಸಾಮಾನ್ಯವಾಗಿ ಪೊದೆಗಳ ಮೇಲೆ ಮತ್ತು ಬೇಲಿಗಳ ಮೇಲೆ ಹಬ್ಬಿ ಬೆಳೆಯುವ ಬಳ್ಳಿಗಿಡ ಗಿಡದಲ್ಲಿ ತಿಳಿ ಹಳದಿ ಬಣ್ಣದ ಸಸ್ಯಕ್ಷೀರವಿರುತ್ತದೆ ಬಲಿತ ಬಳ್ಳಿಕಾಂಡದ ತೊಗಟೆ ಒರಟಾಗಿದ್ದು ಹಳದಿ ಮಿಶ್ರಿತ ಕಂದು ಬಣ್ಣದ್ದಾಗಿರುತ್ತದೆ. ಅಂಡ-ಹೃದಯಾಕಾರದ ಎಲೆಗಳು ಅಭಿಮುಖವಾಗಿ ಜೋಡಣೆಯಾಗಿರುತ್ತವೆ ಎಲೆಯ ಬುಡ ಸಮಾನಾಂತರವಾಗಿರುತ್ತದೆ ಎಲೆಯ ಕಂಕುಳಲ್ಲಿರುವ ಛತ್ರಿಯಂತಹ ಮಧ್ಯಾರಂಭಿ ಹೂಗೊಂಚಲಿನಲ್ಲಿ ಹಸಿರು ಮಿಶ್ರಿತ ಹಳದಿ ಹೂಗಳಿರುತ್ತವೆ ಒಂದೇ ತೊಟ್ಟಿನಲ್ಲಿ ಅಭಿಮುಖವಾಗಿರುವ ಜೋಡಿಕಾಯಿಗಳಿರುತ್ತವೆ ಬೀಜಗಳು ರೇಷ್ಮೆನೂಲಿನಂತಹ ರೋಮ ಗುಚ್ಛವನ್ನು ಹೊಂದಿರುತ್ತವೆ ಇವು ರೋಮಗಳ ಸಹಾಯದಿಂದ ಗಾಳಿಯಲ್ಲಿ ಪ್ಯಾರಚೂಟಿನಂತೆ ಸುಲಭವಾಗಿ ಪ್ರಸಾರವಾಗುತ್ತವೆ

ಜೀವಹಾಲೆ ಬಳ್ಳಿಯು ಆಯುರ್ವೇದದಲ್ಲಿ 'ಜೀವಂತಿ' ಎಂಬ ಹೆಸರಿನಿಂದ ಪ್ರಚಲಿತವಾಗಿದೆ ಇದರ ಜೊತೆಗೆ 'ಲೆಪ್ಟಡೇನಿಯ ಪೈರೊಟೆಕ್ನಿಕ' ಮತ್ತು 'ಫ್ಲಿಕಿಂಜೇರಿಯ ಮಾಕ್ರ್ಯ'ಗಳನ್ನೂ ಜೀವಂತಿ ಎಂಬುದಾಗಿ ಪರಿಗಣಿಸಲಾಗಿದೆ ಆದರೆ, ಕೆಲವು ಕಡೆಗಳಲ್ಲಿ ಈ ಎರಡೂ ಸಸ್ಯಗಳನ್ನು ಕೇವಲ ಪ್ರತಿನಿಧಿ ದ್ರವ್ಯವೆಂಬುದಾಗಿ ಮಾತ್ರ ಗಣನೆಗೆ ತೆಗೆದುಕೊಳ್ಳಲಾಗಿದೆ. ಈ ಮೂಲಿಕೆಗಳನ್ನು ಮುಂಬರುವ ಮಾಲಿಕೆಗಳಲ್ಲಿ ಪರಿಚಯಿಸಲಾಗುವುದು

## ಉಪಯೋಗಗಳು

1 ಬೇರನ್ನು ಅರೆದು ಮೈಗೆ ಲೇಪಿಸುವುದರಿಂದ ಪಿತ್ತದ ಗಂಧೆ ಕಡಿಮೆಯಾಗುತ್ತದೆ

2 ಬೇರಿನ ಚೂರ್ಣ ಅಥವಾ ಕಷಾಯ ಸೇವನೆಯಿಂದ ಮಲಬದ್ಧತೆ, ಹೃದಯದೌರ್ಬಲ್ಯ ಮತ್ತು ಕೆಮ್ಮು ನಿವಾರಣೆಯಾಗುತ್ತದೆ.



# ಜಂಬುನೇರಳೆ

| | |
|---|---|
| ವೈಜ್ಞಾನಿಕ ಹೆಸರು | ಸೈಜೀಜಿಯಂ ಕುಮಿನಿ<br>(Syzygium cumini (L ) Skeels)<br>=ಸೈ ಜಾಂಬೋಲಿನಂ<br>(=S jambolanum DC ) |
| ಸಸ್ಯದ ಕುಟುಂಬ | ಮಿರ್ಟೇಸಿ (Myrtaceae) |
| ಕನ್ನಡದ ಇತರ ಹೆಸರುಗಳು | ಜಂನೇರಳೆ, ನೇರಳೆ |
| ಇತರ ಭಾಷೆಯ ಹೆಸರುಗಳು | ಸಂ. - ಜಂಬು<br>ಹಿಂ - ಜಾಮುನ್, ಜಾಮ್<br>ತ. - ಜಂಬುನರೇಡು, ನರೇಂಡಂ, ಸಂಬಾಲ್<br>ತೆ. - ಜಂಬುನಾಗ್ಯೆ, ನೀರೀಡು<br>ಇಂ.- ಬ್ಲಾಕ್ ಪ್ಲಮ್, ಇಂಡಿಯನ್ ಬ್ಲಾಕ್ ಚೆರ್ರಿ, ಜಾಂಬೂಲ್ |

**ಪರಿಚಯ**

ಈ ಮರವು ಎಲ್ಲಾ ತರಹದ ಹವಾಗುಣದಲ್ಲಿ ಬೆಳೆಯುತ್ತದೆ ನದಿಗಳ ಆಸುಪಾಸಿನಲ್ಲಿ ತೊರೆಗಳ, ಕೆರೆಕಟ್ಟೆಗಳ ಸಮೀಪ ತೇವಾಂಶವಿರುವ ಕಡೆ ಹುಲುಸಾಗಿ ಬೆಳೆಯುತ್ತದೆ ಕೆಲವು ಕಡೆ ಹಣ್ಣಿಗಾಗಿ ಮತ್ತು ಸಾಲುಮರವಾಗಿ ಇದನ್ನು ಬೆಳೆಸುತ್ತಾರೆ. ಮರದ ಎತ್ತರ ಹವಾಮಾನ ಮತ್ತು ಮಣ್ಣಿನ ಫಲವತ್ತತೆಗೆ ಅನುಗುಣವಾಗಿ 15-80 ಅಡಿ ಇರುತ್ತದೆ. ತೊಗಟೆಯ ಬಣ್ಣ ಬೂದು ಇಲ್ಲವೆ ಕಂದು, ತೊಗಟೆ ಮೃದುವಾಗಿರುತ್ತದೆ. ಸರಳವಾದ ಉದ್ದ ಅಂಡಾಕಾರದ ಎಲೆಗಳು ಅಭಿಮುಖವಾಗಿ ಜೋಡಣೆಯಾಗಿರುತ್ತವೆ ಒರಟಾದ ಎಲೆಯು ಹೊಳಪಾಗಿದ್ದು ಗಾಢ ಹಸಿರಾಗಿರುತ್ತದೆ ಮತ್ತು ಕೆಳಭಾಗ ತಿಳಿಹಸಿರಾಗಿರುತ್ತದೆ ಶ್ವೇತವರ್ಣದ, ಕಿರುಗಾತ್ರದ





ಚಿತ್ರ 48 ಜಂಬುನೇರಳೆ – ಮೇಲಿನ ಚಿತ್ರ ಹೂಗಳಿರುವ ರೆಂಬೆ; ಕೆಳಗಿನ ಚಿತ್ರ ಹಣ್ಣುಗಳು

ಹೂಗಳು ಮೂರು, ಮೂರರ ರೀತಿ ಕವಲೊಡೆದ ಪುಷ್ಪಮಂಜರಿಯಲ್ಲಿರುತ್ತವೆ ಪುಷ್ಪಮಂಜರಿಯು ಎಲೆಯ ಕಂಕುಳಲ್ಲಿರುತ್ತವೆ ಇಲ್ಲವೆ ಉದುರಿಹೋದ ಎಲೆಯ ಕಂಕುಳಲ್ಲಿರುತ್ತವೆ ಹೂವಿನಲ್ಲಿ 4 ಪುಷ್ಪದಳಗಳು ಮತ್ತು ಹಲವಾರು ಕೇಸರಗಳಿರುತ್ತವೆ ಕಾಯಿಗಳು ಮೊದಲು ಹಸಿರಾಗಿದ್ದು ಮಾಗಿದ ಮೇಲೆ ನೇರಳೆ ಬಣ್ಣಕ್ಕೆ (ಕಪ್ಪುಮಿಶ್ರಿತ ಕೆಂಪು) ತಿರುಗುತ್ತವೆ

## ಉಪಯೋಗಗಳು

1 ಜಂಬುನೇರಳೆ ಚಕ್ಕೆ ಸುಟ್ಟ ಕರಕನ್ನು ಜೇನುತುಪ್ಪದೊಡನೆ ತಿನ್ನುವುದರಿಂದ ವಾಕರಿಕೆ ಮತ್ತು ವಾಂತಿಯಾಗುವುದು ನಿಲ್ಲುತ್ತದೆ

2 ಜಂಬುನೇರಳೆ ಚಕ್ಕೆಯ ರಸದಿಂದ ಆಗಾಗ ಬಾಯಿ ಮುಕ್ಕಳಿಸಿದರೆ ವಸಡು ಸೋರುವುದು ನಿಲ್ಲುತ್ತದೆ ಮತ್ತು ಹಲ್ಲುಗಳು ವಸಡಿನಲ್ಲಿ ಸಡಿಲವಾಗಿದ್ದರೆ ಗಟ್ಟಿಯಾಗಿ ನಿಲ್ಲುತ್ತವೆ

3 ತೊಗಟೆಯ ಚೂರ್ಣವನ್ನು ಹುಣ್ಣುಗಳ ಮೇಲೆ ಸಿಂಪಡಿಸುವುದರಿಂದ ಅವು ಬೇಗ ವಾಸಿಯಾಗುತ್ತವೆ

4 ಜಂಬುನೇರಳೆಯ ಚಿಗುರೆಲೆಗಳನ್ನು ಅಕ್ಕಿ ತೊಳೆದ ನೀರಿನಲ್ಲಿ ಅರೆದು ಕುಡಿಸುವುದರಿಂದ ಎಲ್ಲಾ ಬಗೆಯ ಪ್ರದರ ರೋಗಗಳು ವಾಸಿಯಾಗುತ್ತವೆ ಇದೇ ಚಿಕಿತ್ಸೆಯನ್ನು ಗರ್ಭಸ್ರಾವವಾಗುವ ಭಯವುಂಟಾದವರೂ ಉಪಯೋಗಿಸಬಹುದು

5 ಒಂದು ಭಾಗ ಎಲೆಯನ್ನು ಅರೆದುಕೊಂಡು ಅದಕ್ಕೆ 5 ಭಾಗ ಸಾಸಿವೆ ಎಣ್ಣೆ ಸೇರಿಸಿ ಕಾಯಿಸಿ ತಯಾರಿಸಿಕೊಂಡ ತೈಲವನ್ನು ಮೈಮೇಲೆ ಊತ ಉಂಟಾಗಿರುವ ಕಡೆ ಮತ್ತು ಗುಳ್ಳೆಗಳೆದ್ದಿರುವ ಕಡೆ ಲೇಪಿಸುವುದರಿಂದ ಅವು ವಾಸಿಯಾಗುತ್ತವೆ

6 ಸಮಪ್ರಮಾಣದಲ್ಲಿ ನೇರಳೆ, ಮಾವು ಮತ್ತು ಬೆಟ್ಟನೆಲ್ಲಿಕಾಯಿ ಮರದ ಎಲೆಗಳನ್ನು ತೆಗೆದುಕೊಂಡು ಅರೆದು ರಸಮಾಡಿಕೊಂಡು, ಸುಮಾರು 7-14 ಮಿ ಲೀ ರಸಕ್ಕೆ ಮೇಕೆ ಹಾಲು ಸೇರಿಸಿ ದಿವಸಕ್ಕೆ 3 ಸಾರಿ ಕುಡಿಸುವುದರಿಂದ ರಕ್ತಾತಿಸಾರ ಗುಣವಾಗುತ್ತದೆ

7 ಎಲೆಯ ರಸಕ್ಕೆ (7-14 ಮಿ ಲೀ ಪ್ರಮಾಣ) ಸಕ್ಕರೆ ಸೇರಿಸಿ ದಿವಸಕ್ಕೆ 3 ಸಾರಿ ಕುಡಿಯುವುದರಿಂದ ಅತಿಯಾದ ಬಾಯಾರಿಕೆ ಕಡಿಮೆಯಾಗುತ್ತದೆ

8 ನೇರಳೆ ಎಲೆಯನ್ನು ಅರೆದು ಎಳ್ಳೆಣ್ಣೆ ಸೇರಿಸಿ ಸಿದ್ಧಪಡಿಸಿದ ತೈಲವನ್ನು ಲೇಪಿಸುವುದರಿಂದ ಪರಂಗಿಹುಣ್ಣು ಮತ್ತು ಉಪದಂಶ ರೋಗಗಳು ಗುಣವಾಗುತ್ತವೆ

9 ನೇರಳೆಹಣ್ಣಿನ ಶರ್ಬತ್ ಸೇವನೆಯಿಂದ ದಣಿವು, ಪಿತ್ತ, ದಾಹ ಕಡಿಮೆಯಾಗುತ್ತದೆ ಅಲ್ಲದೆ ಅಜೀರ್ಣ ಮತ್ತು ಹೊಟ್ಟೆನೋವಿಗೂ ಹಿತಕಾರಿ

10 ದಿವಸಕ್ಕೆ 1-2 ಗ್ರಾಂ ಪ್ರಮಾಣದಷ್ಟು ಬೀಜದ ಚೂರ್ಣ ಸೇವನೆಯಿಂದ ಪ್ರಮೇಹ ಮತ್ತು ಮಧುಮೇಹ ಗುಣವಾಗುತ್ತದೆ

11 ಜಂಬುನೇರಳೆ ಬೀಜದ ಗಂಧವನ್ನು ಸೆಖೆಗುಳ್ಳೆಗಳಿದ್ದಿರುವ ಕಡೆ ಲೇಪಿಸುವುದರಿಂದ ಅವು ವಾಸಿಯಾಗುತ್ತವೆ

## ಪಶುರೋಗ ಚಿಕಿತ್ಸೆಯಲ್ಲಿ

1 ತಲಾ ಎರಡೆರಡು ಹಿಡಿಯಂತೆ ಜಂಬುನೇರಳೆ ಚಕ್ಕೆ, ಬಿಳಿ ಜಾಲಿಚಕ್ಕೆ ಮತ್ತು ತಂಗಡಿ ಚಕ್ಕೆ ಇವುಗಳನ್ನು ತೆಗೆದುಕೊಂಡು ನುಣ್ಣಗೆ ಅರೆದು ಒಂದು ಸೇರು ಮಜ್ಜಿಗೆ ಬೆರಸಿಟ್ಟುಕೊಂಡು ಬೆಳಗ್ಗೆ 1 ಸೇರು ಮತ್ತು ರಾತ್ರಿ 1ಸೇರು ಕುಡಿಸಬೇಕು ಈ ಚಿಕಿತ್ಸೆಯನ್ನು 2-3 ದಿವಸ ಮಾಡುವುದರಿಂದ ಭೇದಿ ಕಡಿಮೆಯಾಗುತ್ತದೆ.

2 ಒಂದೊಂದು ಹಿಡಿ ಜಂಬುನೇರಳೆ ಚಕ್ಕೆ, ಬಿಳಿಜಾಲಿ ಚಕ್ಕೆ ಮತ್ತು ಒಂದು ತೊಲ ಜಾಜುಕಲ್ಲು, ಇವುಗಳನ್ನು ಒಟ್ಟಿಗೆ ನುಣ್ಣಗೆ ಅರೆದು ಒಂದು ಸೇರು ಮಜ್ಜಿಗೆಯಲ್ಲಿ ಕಲಸಿ, ಬೆಳಗ್ಗೆ 1 ಸೇರು ರಾತ್ರಿ 1 ಸೇರು ಕುಡಿಸುವುದು. ಈ ಚಿಕಿತ್ಸೆಯನ್ನು 2-3 ದಿವಸ ಮಾಡುವುದರಿಂದ ರಕ್ತ ಭೇದಿ ನಿಲ್ಲುತ್ತದೆ.



# ತಾರೆಮರ

| | |
|---|---|
| ವೈಜ್ಞಾನಿಕ ಹೆಸರು | ಟರ್ಮಿನಾಲಿಯ ಬೆಲ್ಲಿರಿಕ [Terminalia bellirica (Gaertn )/Roxb ] |
| ಸಸ್ಯದ ಕುಟುಂಬ | ಕಾಂಬ್ರಿಟೇಸಿ [Combretaceae] |
| ಕನ್ನಡದ ಇತರ ಹೆಸರುಗಳು | ತೌರಿ, ಶಾಂತಿಮರ, ಸೋಹೊನ್ನೆ |
| ಇತರ ಭಾಷೆಯ ಹೆಸರುಗಳು | ಸಂ. - ಅನಿಲಘ್ನಕ, ಬಹಿರ, ಬಿಭೀತಕ, ಅಕ್ಷ, ತುಷ, ಕರ್ಷಫಲ, ಭೂತವಾಸ, ಕಲಿದ್ರುಮ |
| | ಹಿಂ. - ಬಹೇರ, ಬಹಿರ |
| | ತ. - ಅಕ್ಕಮಂ, ತನಿ, ತನ್ನಿಕ್-ಕಾಯ್ |
| | ತೆ - ತಂಡ್ರ, ತನಿ, ತಂಡಿ, ತಡಿ, ಕಾಟ್ಟು ಒಲುಪ್ಪೆ |
| | ಇಂ - ಬೆಲ್ಲೆರಿಕ್ ಮೈರೊಬಲನ್ |

**ಪರಿಚಯ**

ಈ ಮರವು ಉಷ್ಣವಲಯದ ಭಾಗಶಃ ನಿತ್ಯಹರಿದ್ವರ್ಣ ಸಸ್ಯಾವರಣ, ಬೇಸಿಗೆಯಲ್ಲಿ ಎಳೆಯುದುರುವ ಮಲೆನಾಡಿನ ಸಸ್ಯಾವರಣ ಬೇಸಿಗೆಯಲ್ಲಿ ಎಲೆಯುದುರುವ ಮೈದಾನ ಸೀಮೆಯ ಒಣ ಸಸ್ಯಾವರಣ ಮತ್ತು ಕಳ್ಳಿ ಕುರುಚಲು ಗಿಡಗಳನ್ನೊಳಗೊಂಡ ಸಸ್ಯಾವರಣದಲ್ಲಿ ಕಂಡು ಬರುತ್ತದೆ ಈ ಮರದಲ್ಲಿ ಶನೀಶ್ವರನು ನೆಲೆಸಿರುವನೆಂಬ ನಂಬಿಕೆಯಿಂದ ಈ ಮರವನ್ನು ಪೂಜಿಸುತ್ತಾರೆ ಈ ಮರದಿಂದ ಮನೆಯ ಸಾಮಾನುಗಳನ್ನು ತಯಾರಿಸುವುದಿಲ್ಲ ಹಾಗೂ ಬಳಸುವುದಿಲ್ಲ. ಉತ್ತರ ಭಾರತದಲ್ಲಿ ಈ ಮರವು ರಾಕ್ಷಸರ ಆವಾಸ ಸ್ಥಾನವೆಂಬ ಮೂಢನಂಬಿಕೆಯಿದೆ

ಈ ಮರವು 60-80 ಅಡಿ ಎತ್ತರ ಬೆಳೆಯುವ ಬೃಹದ್ಗಾತ್ರದ ಮರ. ಈ



ಚಿತ್ರ 49 ತಾರೆಮರ - ಕಾಯಿಗಳಿರುವ ರೆಂಬೆ

ಮರವು ಒಳ್ಳೆಯ ನೆರಳನ್ನು ಕೊಡುತ್ತದೆ ಇದರ ಕಾಂಡ ನೇರವಾಗಿ ಬೆಳೆಯುತ್ತದೆ ಉದ್ದ ತೊಟ್ಟಿನ ಅಂಡಾಕಾರದ ಎಲೆಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ ಎಲೆಗಳ ಉದ್ದ 3-8 ಅಂಗುಲ ಮತ್ತು ಅಗಲ 3-5 ಅಂಗುಲ ಇರುತ್ತವೆ ಎಲೆಗಳ ಕೆಳಭಾಗದಲ್ಲಿ ಒಂದು ಜೊತೆ ಗ್ರಂಥಿಗಳಿರುತ್ತವೆ ಎಲೆಗಳು ಎಳೆಯದಾಗಿದ್ದಾಗ ತಾಮ್ರ ವರ್ಣಕ್ಕಿರುತ್ತವೆ,•ಬಲಿತಾಗ ಹಸಿರು ವರ್ಣಕ್ಕೆ ತಿರುಗುತ್ತವೆ ಎಲೆಗಳು ಮಾರ್ಚ ವೇಳೆಗೆ ಉದುರಿ ಹೋಗುತ್ತವೆ. ಚಿಗುರೆಲೆಗಳ ಕಂಕುಳಿಂದ 3-6 ಅಂಗುಲ ಉದ್ದದ ಪುಷ್ಪಮಂಜರಿ ಬೆಳೆಯುತ್ತವೆ ಹೂಗಳು ಹಳದಿ ಇಲ್ಲವೆ ಕೆಂಪು ಮಿಶ್ರಿತ ಬಿಳಿಯಾಗಿರುತ್ತವೆ ಕಾಯಿಗಳು ಗೋಳಾಕಾರವಾಗಿರುತ್ತವೆ

## ಉಪಯೋಗಗಳು

1 ತಾರೆಮರದ ತೊಗಟೆಯ ಕಷಾಯದಲ್ಲಿ ಬಾವಂಚಿ ಬೀಜವನ್ನು ಒಂದು ರಾತ್ರಿ ನೆನೆ ಹಾಕಿ, ಮರುದಿವಸ ಹೊರತೆಗೆದು ಅರೆದು ಎಳ್ಳೆಣ್ಣೆಯಲ್ಲಿ ಕಲಸಿ ಲೇಪಿಸುವುದರಿಂದ ಬಿಳಿತೊನ್ನು ವಾಸಿಯಾಗುತ್ತದೆ

2 ತಾರೇಕಾಯಿ, ಹಿಪ್ಪಲಿ, ಸೈಂಧಲವಣ ಈ ಮೂರನ್ನು ಸಮಪ್ರಮಾಣ ತೆಗೆದುಕೊಂಡು ಚೂರ್ಣ ಮಾಡಿಟ್ಟುಕೊಳ್ಳಬೇಕು ಒಂದು ಚಮಚದಷ್ಟು ಈ ಚೂರ್ಣವನ್ನು ಬಿಸಿನೀರಿನಲ್ಲಿ ಕದಡಿ ನಿತ್ಯ 2ವೇಳೆ ಕುಡಿಯುವುದರಿಂದ ಸುಮಧುರ ಸ್ವರವುಂಟಾಗುತ್ತದೆ

3 ತಾರೇಕಾಯಿಯ ಚೂರ್ಣ ಒಂದು ಚಮಚದಷ್ಟು ತೆಗೆದುಕೊಂಡು 2ಚಮಚ ಜೇನುತುಪ್ಪದೊಡನೆ ರಾತ್ರಿ ಊಟವಾದ ನಂತರ ಸೇವಿಸುವುದರಿಂದ ದಮ್ಮು (ಉಬ್ಬಸ) ಕಡಿಮೆಯಾಗುತ್ತದೆ

4 ಅಳಲೆಕಾಯಿ 1 ಭಾಗ, ತಾರೆಕಾಯಿ 1 ಭಾಗ ಮತ್ತು ಬೆಟ್ಟನಲ್ಲಿಕಾಯಿ 1 ಭಾಗ ತೆಗೆದುಕೊಂಡು ಕುಟ್ಟಿ ಬಟ್ಟೆಯಲ್ಲಿ ಶೋಧಿಸಿದ ಪುಡಿಗೆ ತ್ರಿಫಲ ಚೂರ್ಣವೆಂದು ಕರೆಯುತ್ತಾರೆ ಈ ಚೂರ್ಣವು ಮೃದು ವಿರೇಚನದಂತೆ ಕೆಲಸ ಮಾಡುತ್ತದೆ ಇದೇ ಚೂರ್ಣದ ಕಷಾಯವನ್ನು ಗಾಯ ತೊಳೆಯಲು

ಉಪಯೋಗಿಸುತ್ತಾರೆ ಚೂರ್ಣ ಸೇವನೆಯಿಂದ ಕಣ್ಣಿನ ದೋಷಗಳು ಸಹ ನಿವಾರಣೆಯಾಗುತ್ತವೆ.

5 ತಾರೇಕಾಯಿಯನ್ನು ಅರೆದು ಊತ ಬಂದಿರುವ ಕಡೆ ಮತ್ತು ನೋವಿರುವ ಕಡೆ ಲೇಪಿಸುತ್ತಾರೆ.

6 ಕಾಯಿಯ ಚೂರ್ಣವನ್ನು ಸಿಂಪಡಿಸುವುದರಿಂದ ರಕ್ತಸ್ರಾವ ನಿಲ್ಲುತ್ತದೆ.

7 ಹೀಚುಕಾಯಿಗಳನ್ನು ಸೇವಿಸುವುದರಿಂದ ಮಲಬದ್ಧತೆ ನಿವಾರಣೆಯಾಗುತ್ತದೆ

8 ಬಲಿತ ಹಾಗೂ ಒಣಗಿದ ಕಾಯಿಯ ಚೂರ್ಣ ಸೇವನೆಯಿಂದ ಅತಿಸಾರ ಕಡಿಮೆಯಾಗುತ್ತದೆ.

9 ಬೀಜದ ಚೂರ್ಣವನ್ನು ಪ್ರತಿದಿವಸ ಸೇವಿಸುವುದರಿಂದ ನಪುಂಸಕತ್ವ ನಿವಾರಣೆಯಾಗಿ ಕಾಮೋದ್ದೀಪನವಾಗುತ್ತದೆ.

10 ಬೀಜದಿಂದ ತೆಗೆದ ತೈಲವನ್ನು ಮೈಗೆ ಲೇಪಿಸುವುದರಿಂದ ನವೆ ಕಡಿಮೆಯಾಗುತ್ತದೆ.



# ತಾವರೆ

| | |
|---|---|
| ವೈಜ್ಞಾನಿಕ ಹೆಸರು | ನೆಲುಂಬೊ ನುಸಿಫೆರ [Nelumbo nucifera Gaertn ] |
| ಸಸ್ಯದ ಕುಟುಂಬ | ನೆಲಂಬೊನೇಸಿ [Nelubonaceae] |
| ಕನ್ನಡದ ಇತರ ಹೆಸರುಗಳು | ಕಮಲ, ಕಮಲದಹೂ, ತಾಮರ, ತಾವರೆಗೆಡ್ಡೆ, ಕೆಂದಾವರೆ, ಬಿಳಿತಾವರೆ, ಬಿಳಿ ದಾವರೆ, |
| ಇತರ ಭಾಷೆಯ ಹೆಸರುಗಳು | ಸಂ - ಅಂಬುಜ, ಕಮಲ, ಪದ್ಮ<br>ಹಿಂ. - ಅಂಬುಜ, ಕನ್ನಾಲ್, ಪದಂ, ಲಾಲ್‌ಕಮಲ್<br>ತ - ಅಂಬಾಲ್, ತಾಮರೈ, ಶಿವಪುತ್ತಾಮರೈ<br>ತೆ - ಕಾಲುಂಗ್, ತಮರ, ಯರ್ರತಮರ,<br>ಇಂ. - ಇಂಡಿಯನ್ ಲೋಟಸ್, ಸೇಕ್ರೆಡ್ ಲೋಟಸ್, ಚೈನೀಸ್ ವಾಟರ್ ಲಿಲ್ಲಿ, ಈಜಿಪ್ಷಿಯನ್ ಬೀನ್, ಪೈಥಾಗೊರಿಯನ್ ಬೀನ್ |

**ಪರಿಚಯ**

ಪವಿತ್ರ ಹಾಗೂ ಪೂಜನೀಯ ಪುಷ್ಪವೆಂದು ಪರಿಗಣಿತವಾದ ತಾವರೆಯ ಪರಿಚಯವಿಲ್ಲದವರು ಅಪರೂಪ ತಾವರೆ ಹೂವಿಗೆ ವರಮಹಾಲಕ್ಷ್ಮಿ ಮತ್ತು ಗೌರಿ ಹಬ್ಬದಲ್ಲಿ ಅಪಾರ ಬೇಡಿಕೆಯಿರುತ್ತದೆ.

ತಾವರೆ ಸಾಮಾನ್ಯವಾಗಿ ಕೆರೆ, ಕಟ್ಟೆ, ಕೊಳ ಮುಂತಾದ ಕಡೆ ಬೆಳೆಯುವ ಜಲ ಸಸ್ಯ. ಗಿಡದ ಕಂದು ನೀರಿನ ಕೆಳಭಾಗದ ಕೆಸರಿನಲ್ಲಿ ಹುದುಗಿರುತ್ತದೆ

ಕಂದಿನಿಂದ ಎಲೆಗಳು ಬೆಳೆಯುತ್ತವೆ ಗುಂಡನೆಯ ತಟ್ಟೆಯಂತಿರುವ ಬಲಿತ ಎಲೆಗಳು ನೀರಿನ ಮೇಲೆ ಹರಡಿಕೊಂಡಿರುತ್ತವೆ ಇಲ್ಲವೆ ನೀರಿನ ಮೇಲೆ ಬಟ್ಟಲಿನಂತೆ ನಿಂತಿರುತ್ತವೆ ನೀರಿನೊಳಗಿನ ಕಂದಿನಿಂದ ಮೊಳೆಯುವ ಹೂ ನೀರಿನ ಮೇಲ್ಮೈಗೆ ಬರುವವರೆಗೂ ಅದರ ತೊಟ್ಟು ಬೆಳೆಯುತ್ತಲೇಯಿರುತ್ತದೆ, ಹೂ ನೀರಿನ ಮೇಲೆ ಬಂದ ನಂತರ ಬೆಳವಣಿಗೆಗೆ ಕುಂಟಿತವಾಗುತ್ತದೆ ಅರಳಿದ ತಾವರೆ ನೋಡಲು ಆಕರ್ಷಕವಾಗಿರುತ್ತದೆ

ಪ್ರಕೃತಿಯಲ್ಲಿ ಎರಡು ಬಗೆಯ ತಾವರೆಗಳು ಕಂಡುಬರುತ್ತವೆ. ಕೆಲವು ಗುಲಾಬಿಗೆಂಪಿನ ಹೂ ಬಿಡುತ್ತವೆ (ಕೆಂದಾವರೆ) ಇನ್ನು ಕೆಲವು ಬಿಳಿ ಹೂ ಬಿಡುತ್ತವೆ ಈ ಎರಡೂ ಬಗೆಯನ್ನು ವೈಜ್ಞಾನಿಕವಾಗಿ ಒಂದೇ ಎಂದು ಪರಿಗಣಿಸುತ್ತಾರೆ ಆದರೆ ಔಷಧ ಪ್ರಯೋಗಗಳಲ್ಲಿ ಕೆಲವು ಕಡೆ ಬಿಳಿ ಮತ್ತು ಕೆಲವು ಕಡೆ ಕೆಂದಾವರೆಯನ್ನು ಬಳಸಬೇಕೆಂದು ಸೂಚಿಸಲಾಗಿದೆ ಅಂತಹ ಪ್ರಯೋಗಗಳಲ್ಲಿ ತಿಳಿಸಿರುವ ಬಗೆಯನ್ನು ಉಪಯೋಗಿಸಬೇಕು ಉಳಿದೆಡೆಗಳಲ್ಲಿ ಯಾವ ಬಗೆಯ ತಾವರೆಯನ್ನಾದರೂ ಉಪಯೋಗಿಸಬಹುದು

## ಉಪಯೋಗಗಳು

1 ಬೇರನ್ನು ಅರೆದು ಲೇಪಿಸುವುದರಿಂದ ಇಲ್ಲವೆ ಬೇರಿನ ಚೂರ್ಣವನ್ನು ಕಲಸಿ ಹುಳುಕಡ್ಡಿಯಾಗಿರುವ ಕಡೆ ಲೇಪಿಸುವುದರಿಂದ ಹುಳುಕಡ್ಡಿ ವಾಸಿಯಾಗುತ್ತದೆ ಇದೇ ಚಿಕಿತ್ಸೆಯನ್ನು ಇತರ ಚರ್ಮಕಾಯಿಲೆಗಳಲ್ಲೂ ಪ್ರಯೋಗಿಸಬಹುದು.

2 ಆಗತಾನೆ ತೆಗೆದ ಬಿಳಿ ತಾವರೆಯ ಗೆಡ್ಡೆಯ ರಸ ಕುಡಿಸುವುದರಿಂದ ನಾಗರಹಾವು ಕಡಿದ ವಿಷ ಪರಿಹಾರವಾಗುತ್ತದೆ ಈ ಚಿಕಿತ್ಸೆ ಶ್ರೀಲಂಕದಲ್ಲಿ ಪ್ರಚಲಿತವಾಗಿದೆ

3 ತಾವರೆ ಗೆಣಸನ್ನು ಎಳ್ಳೆಣ್ಣೆಯಲ್ಲಿ ಬೇಯಿಸಿ, ಗೋಮೂತ್ರದಲ್ಲಿ ಅರೆದು ತಿನ್ನಿಸುವುದರಿಂದ ಮೂತ್ರ ಕಟ್ಟು ಪರಿಹಾರವಾಗುತ್ತದೆ

4 ತಾವರೆ ಬೇರು ಸೇವನೆಯಿಂದ ಕೆಮ್ಮು ಮತ್ತು ಪಿತ್ತ ಶಮನವಾಗುತ್ತದೆ ಅತಿಯಾದ ಬಾಯಾರಿಕೆಯನ್ನು ಶಮನಮಾಡುವುದರ ಜೊತೆಗೆ ದೇಹವನ್ನು ತಂಪುಗೊಳಿಸುತ್ತದೆ

5 ತಾವರೆ ಎಲೆಯ ರಸ ತಯಾರಿಸಿಕೊಂಡು ನಾನಾ ವಿಧದ ವಿಷ ಸೇವಿಸಿದವರಿಗೆ ಕುಡಿಸುವುದರಿಂದ ವಿಷಪರಿಹಾರವಾಗುತ್ತದೆ.

6 ಎಲೆಯ ಹಾಸಿಗೆಮಾಡಿ ಜ್ವರ ಬಂದವರನ್ನು ಮಲಗಿಸುವುದರಿಂದ ಜ್ವರದ ತಾಪ ಕಡಿಮೆಯಾಗುತ್ತದೆ.

7 ಬಿಳಿತಾವರೆ ಹೂವಿನ ದಳಗಳನ್ನಾಗಲಿ ಅಥವಾ ದಳಗಳಿಂದ ತಯಾರಿಸಿದ ಗುಲ್ಕನ್ನಾಗಲಿ ಸೇವಿಸುವುದರಿಂದ ಹೃದಯ ಮತ್ತು ಮೆದುಳು ಬಲಗೊಳ್ಳುತ್ತವೆ ಹಾಗೂ ಉದರದೊಳಗಾಗುವ ಎಲ್ಲಾ ಬಗೆಯ ಗಾಯಗಳಿಗೂ (ulcers) ಉತ್ತಮ ಔಷಧವಾಗುತ್ತದೆ.

8 ತಾವರೆಗಿಡದಿಂದ ತಯಾರಿಸಿದ ಶರಬತ್ ಸೇವನೆಯಿಂದ ಸಿಡುಬಿನ ರೋಗದಲ್ಲಿ ದೇಹವನ್ನು ತಂಪುಗೊಳಿಸುತ್ತದೆ ಮತ್ತು ಹೊಸದಾಗಿ ಸಿಡುಬಿನ ಗುಳ್ಳೆಗಳು ಉಕ್ಕದಂತೆ ತಡೆಯುತ್ತದೆ.

9 ಕೆಂದಾವರೆಯ ದಳಗಳನ್ನು ಅರೆದಾಗಲಿ ಅಥವಾ ಚೂರ್ಣವನ್ನಾಗಲಿ ಹಚ್ಚಿಕೊಳ್ಳುವುದರಿಂದ ಮುಖದ ಅಂದ ಹೆಚ್ಚಾಗುತ್ತದೆ.

10 ತಾವರೆ ಹೂವಿನ ಕಷಾಯವನ್ನು ಬೆಳಿಗ್ಗೆ-ಸಂಜೆ 50-100 ಮಿ.ಲೀ ಪ್ರಮಾಣದಷ್ಟನ್ನು ಕೆಲವು ದಿವಸ ಕುಡಿಯುವುದರಿಂದ ಮೆದುಳಿಗೆ ಶಕ್ತಿ ಬಂದು ಜ್ಞಾಪಕಶಕ್ತಿ ವೃದ್ಧಿಯಾಗುತ್ತದೆ ಇದೇ ಚಿಕಿತ್ಸೆಯನ್ನು ಬಾಲನೆರೆಯಾದವರೂ ಉಪಯೋಗಿಸುವುದರಿಂದ ಎಳೆವಯಸ್ಸಿನ ನೆರೆ ಹತೋಟಿಗೆ ಬರುತ್ತದೆ

11 ಕಮಲದ ದಳ ಮತ್ತು ಕೇಸರಗಳನ್ನು ಹಿಂಡಿತೆಗೆದ ರಸ 4 ಚಮಚಕ್ಕೆ $^1/_2$ ತೊಲ ಕಾಲ್ಲಿಕಲ್ಲುಸಕ್ಕರೆ ಸೇರಿಸಿ ಕುಡಿಯುವುದರಿಂದ ರಕ್ತಮೂಲವ್ಯಾಧಿ ಗುಣವಾಗುತ್ತದೆ ದಿವಸಕ್ಕೆ ಒಂದು ಹೊತ್ತಿನಂತೆ 7-14 ದಿವಸ ಈ ಚಿಕಿತ್ಸೆ ನಡೆಸಬೇಕು.

12 ತಾವರೆ ಹೂವಿನ ಕೇಸರಗಳನ್ನು ಜೇನುತುಪ್ಪ ಮತ್ತು ಹಸುವಿನ ಬೆಣ್ಣೆಯೊಡನೆ ತಿನ್ನಿಸುವುದರಿಂದ ರಕ್ತಮೂಲವ್ಯಾಧಿ ಗುಣವಾಗುತ್ತದೆ

13 ತಾವರೆ ಹೂವಿನ ದಳಗಳಿಂದ ತಯಾರಿಸಿದ ಗುಲ್ಕನ್ ಸೇವನೆಯು ಹೃದಯಕ್ಕೆ ಹಿತಕಾರಿ

14 ತಾವರೆ ಬೀಜದ ಚೂರ್ಣವನ್ನು ಹಾಲಿನೊಡನೆ ತಿನ್ನುವುದರಿಂದ ಶಿಥಿಲವಾದ ಸ್ತನಗಳು ಘನವಾಗಿ ಸ್ತ್ರೀಯರ ಸೌಂದರ್ಯ ಹೆಚ್ಚಾಗುತ್ತದೆ

## ಪಶುರೋಗ ಚಿಕಿತ್ಸೆಯಲ್ಲಿ

ತಾವರೆಗೆಡ್ಡೆ 1 ಹಿಡಿ ಪ್ರಮಾಣ, ಕಿರುಕಾನಾಲೆ ಸೊಪ್ಪು 2 ಹಿಡಿ ಪ್ರಮಾಣ, ಮಾದಳದ ಹೀಚು 2, ಬಿಳಿ ಬಸರಿ ಬೇರು 2 ಹಿಡಿ ಪ್ರಮಾಣ ತೆಗೆದುಕೊಂಡು ಚೆನ್ನಾಗಿ ಅರೆದು ಒಂದು ಸೇರು ಮಜ್ಜಿಗೆಯಲ್ಲಿ ಕಲಸಿ ದಿನಕೊಂದು ನಾರಿಯಂತೆ 2-3 ದಿವಸ ಗರ್ಭ ಧರಿಸಿದ ಪಶುವಿಗೆ ಕುಡಿಸುವುದರಿಂದ ಗರ್ಭಸ್ರಾವವಾಗುವುದಿಲ್ಲ





ಚಿತ್ರ 51 · ತಿಗಡು ಮರ - ಒಳಗಿನ ಚಿತ್ರ ಪುಷ್ಪಮಂಜರಿ

# ತಿಗಡು ಮರ

| | |
|---|---|
| ವೈಜ್ಞಾನಿಕ ಹೆಸರು | ಓರೊಜೈಲಂ ಇಂಡಿಕಂ<br>[Oroxylum indicum (L ) Vent ] |
| ಸಸ್ಯದ ಕುಟುಂಬ | ಬಿಗ್ನೋನಿಯೇಸಿ (Bignoniaceae) |
| ಕನ್ನಡದ ಇತರ ಹೆಸರುಗಳು | ಅಲಂದ, ಆನೆಮುಂಗು, ತಿಗಡೆ, ದುಂಡುಕರ್ರ, ಪಟಗನಿ, ಬುನವಾಲೆ, ಮೊಕ್ಕಡ, ಸೋನೆಪಟ್ಟ, ಹೊನೆ |
| ಇತರ ಭಾಷೆಯ ಹೆಸರುಗಳು | ಸಂ. - ತ್ರಿವೃತ್, ಸ್ಯೋನಾಖ, ಶ್ಯೊನಾಕ<br>ಹಿಂ. - ಅಲ್ರು, ಘಲ್ ಘಲ, ಸ್ನವತ<br>ತ. - ಪೇವಕಾಯ್, ಪೆಳಕಾಯಿ, ವಂಗಮರಂ<br>ತೆ - ಮೊಕ್ಕವೇವ, ದುಂಡಿಲ್ಲುಂ, ಪಂಪನ<br>ಇಂ - ಇಂಡಿಯನ್ ಟ್ರಂಫೆಟ್ ಫ್ಲವರ್ |

**ಪರಿಚಯ**

ಈ ಮರವು ಪಶ್ಚಿಮ ಘಟ್ಟಗಳ ನಿತ್ಯ ಹರಿದ್ವರ್ಣ ಕಾಡುಗಳಲ್ಲಿ ಬೆಳೆಯುತ್ತದೆ ಉಳಿದ ಕಡೆಗಳಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ ಇತ್ತೀಚೆಗೆ ಕೆಲವು ಕಡೆ ಅಲಂಕಾರಿಕ ಮರವಾಗಿ ಬೆಳೆಸಲಾಗುತ್ತಿದೆ. ಈ ಮರವು ಸಾಧಾರಣವಾಗಿ 25-50 ಅಡಿ ಎತ್ತರ ಬೆಳೆಯುತ್ತದೆ. ನೆಟ್ಟಗೆ ಬೆಳೆಯುವ ಕಾಂಡ ಅಷ್ಟೇನು ದಪ್ಪನಾಗಿರುವುದಿಲ್ಲ ಸಂಯುಕ್ತ ಎಲೆಗಳು ಅಭಿಮುಖವಾಗಿ ಜೋಡಣೆಯಾಗಿರುತ್ತವೆ ಒಂದು ಸಂಯುಕ್ತ ಎಲೆಯ ಉದ್ದ 3-6 ಅಡಿ ಇರುತ್ತವೆ ಸಂಯುಕ್ತ ಎಲೆಯ ಕವಲು ರೆಂಬೆಗಳ ಮೇಲೆ ಕಿರುಪತ್ರಗಳಿರುತ್ತವೆ ಹೂಗಳು ಸುಮಾರು 4 ಅಡಿ ಎತ್ತರದ ಪುಷ್ಪಮಂಜರಿಯಲ್ಲಿರುತ್ತದ ಅದರಲ್ಲಿ

ಹೂವಿಲ್ಲದ ಪುಷ್ಪಮಂಜರಿಯ ದೇಟಿನ ಉದ್ದವೇ 3 ಅಡಿಯಿರುತ್ತದೆ ಹೂಗಳ ಉದ್ದ 2-3 ಅಂಗುಲ ಇರುತ್ತದೆ ಹೂಗಳ ಹೊರಭಾಗ ಕೆಂಪು ಮಿಶ್ರಿತ ತಿಳಿ ನೇರಳೆಯಾಗಿದ್ದರೆ, ಒಳಭಾಗ ಕೆಂಪು ಮಿಶ್ರಿತ ಹಳದಿಯಾಗಿರುತ್ತದೆ ಹೂವಿನಲ್ಲಿ 5 ಕೇಸರುಗಳಿರುತ್ತವೆ ಕಾಯಿ ಚಪ್ಪಟೆಯಾಗಿದ್ದು ಕತ್ತಿಯಂತಿರುತ್ತದೆ

## ಉಪಯೋಗಗಳು

1 ತಿಗಡು ಮರದ ಬೇರು, ವಜ್ರನೀಲಿ ಗಿಡದ ಬೇರು ಮತ್ತು ತ್ರಿಫಲವನ್ನು ಸಮಪ್ರಮಾಣದಲ್ಲಿ ತೆಗೆದುಕೊಂಡು ಕಲ್ಕವಮಾಡಿ ಇಲಿ ಕಡಿದವರಿಗೆ ಕುಡಿಸುವುದರಿಂದ ವಿರೇಚನವಾಗಿ ಇಲಿ ವಿಷ ಪರಿಹಾರವಾಗುತ್ತದೆ

2 ಬೇರಿನ ತೊಗಟೆಯ ಚೂರ್ಣಮಾಡಿಟ್ಟುಕೊಂಡು ದಿವಸಕ್ಕೆ 15ಗುಂಜಿ ಪ್ರಮಾಣದ ಚೂರ್ಣವನ್ನು ತೆಗೆದುಕೊಂಡು ಮೂರು ಭಾಗ ಮಾಡಿ ಹೊತ್ತಿಗೆ ಒಂದು ಭಾಗದಂತೆ ದಿವಸಕ್ಕೆ ಮೂರು ಬಾರಿಯಂತೆ ಕೆಲವು ದಿವಸ ಸೇವಿಸುವುದರಿಂದ ವಾಯುರೋಗ, ಭೇದಿ, ರಕ್ತಭೇದಿ, ಹೊಟ್ಟೆಯುಬ್ಬರ ಮತ್ತು ಕೆಮ್ಮು ಕಡಿಮೆಯಾಗುತ್ತದೆ

3 ಮರದ ತೊಗಟೆಯ ಕಷಾಯವನ್ನು ಸಂಧಿವಾತದಿಂದಾಗಿ ಬಾತುಕೊಂಡಿರುವ ಮಂಡಿಚಿಪ್ಪು ಮತ್ತು ಗೆಣ್ಣುಗಳ ಮೇಲೆ ಲೇಪಿಸುತ್ತಾರೆ

4 ಮರದ ತೊಗಟೆ ಮತ್ತು ಎಳ್ಳೆಣ್ಣೆ ಸೇರಿಸಿ ಕಾಯಿಸಿ ತಯಾರಿಸಿದ ತೈಲವನ್ನು ಕಿವಿಗೆ ಹಾಕುವುದರಿಂದ ಕಿವಿ ಸೋರುವುದು ನಿಲ್ಲುತ್ತದೆ

5 ಎಳೆಯ ಕಾಯಿಗಳ ಸೇವನೆಯು ಹಸಿವನ್ನುಂಟುಮಾಡುತ್ತದೆ ಮತ್ತು ಉದರಲ್ಲಿನ ವಾಯುವನ್ನು ಹೊರಹಾಕುವುದರಿಂದ ಹೊಟ್ಟೆಯುಬ್ಬರ ಸಹ ಕಡಿಮೆಯಾಗುತ್ತದೆ

6 ಹಲವು ದಿವಸ ಹಣ್ಣು ಅಥವಾ ಹಣ್ಣಿನ ಚೂರ್ಣ ಸೇವನೆಯಿಂದ ತೊನ್ನು ನಿವಾರಣೆಯಾಗುತ್ತದೆ

7 ಬೀಜಗಳ ಸೇವನೆಯು ಮೃದು ವಿರೇಚನದಂತೆ ಕೆಲಸ ಮಾಡುತ್ತದೆ



# ತುರುಚನ ಬಳ್ಳಿ

| | |
|---|---|
| ವೈಜ್ಞಾನಿಕ ಹೆಸರು | ಟ್ರಾಜಿಯ ಇನ್‌ವಾಲ್ಯುಕ್ರಾಟ [Tragia involucrata L ] |
| ಸಸ್ಯದ ಕುಟುಂಬ | ಯುಫೊರ್ಬಿಯೇಸಿ [Euphorbiaceae] |
| ಕನ್ನಡದ ಇತರ ಹೆಸರುಗಳು | ಅಂಟುಸುರುಸುರಿಗೆ, ಚೇಳುರಿಗಿಡ, ತುರುಚಿ ಬಳ್ಳಿ, ಹಲಿಗಿಲು |
| ಇತರ ಭಾಷೆಯ ಹೆಸರುಗಳು | ಸಂ - ಕಸಗಿನ್ನೀ, ದೂಮವುಷ್ಪ, ವಿರಿಶ್ಚಿಕಾಲಿ<br>ಹಿಂ - ಬಿಚ್ಚೆ, ಬರ್ಹಂತ<br>ತ - ಅಂಬು, ಕನ್ನಿಚಿ, ಕಂಜುರಿ, ಸಿರುಕಂಚಿನಿ<br>ತೆ. - ಚಿನ್ನದುಲಗೊಂಡಿ, ವೆದ್ದೊಲಗೊಂಡಿ<br>ಇಂ. - ಕ್ಲೈಂಬಿಂಗ್ ನೆಟ್ಲ್, ಸ್ಕಾರ್ಪಿಯನ್ ಲೀಫ್ |

## ಪರಿಚಯ

ಈ ಬಳ್ಳಿ ಗಿಡವು ಸಾಮಾನ್ಯವಾಗಿ ಕಲ್ಲುಬಂಡೆಗಳ ಸಂದುಗೊಂದುಗಳಲ್ಲಿ ಮತ್ತು ಬೀಳು ಭೂಮಿಯಲ್ಲಿ ಹಬ್ಬಿ ಬೆಳೆಯುತ್ತದೆ. ಈ ಬಳ್ಳಿಯನ್ನು ಸುಲಭವಾಗಿ ಗುರುತಿಸಬಹುದು, ಬಳ್ಳಿ ಕಾಂಡದ ಮೇಲೆ ಮತ್ತು ಎಲೆಗಳ ಮೇಲೆ ವಿಪರೀತ ರೋಮಗಳಿರುತ್ತವೆ. ಜೊತೆಗೆ ಎಲೆಯಾಗಲಿ ಅಥವಾ ಬಳ್ಳಿಯಾಗಲಿ ಮೈಗೆ ತಾಗಿದರೆ ತಾಗಿದ ಜಾಗದಲ್ಲಿ ಉರಿಯುಂಟಾಗುತ್ತದೆ. [ಈ ಉರಿ ಬಹಳ ಕಾಲ ಹಾಗೇ ಇರುತ್ತದೆ. ಉರಿಯನ್ನು ಕಡಿಮೆ ಮಾಡಲು ಹಳ್ಳಿಗಳಲ್ಲಿ ಆ ಜಾಗದ ಮೇಲೆ ಹಸುವಿನ ಸಗಣಿ ಸವರುತ್ತಾರೆ ]

ಬಳ್ಳಿ ಕಾಂಡದ ಮೇಲೆ ಸರಳವಾದ ಮತ್ತು ಅಂಡಾಕಾರದ ಎಲೆಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ ಕೆಲವು ಬುಡದ ಎಲೆಗಳು ಮಾತ್ರ

ಮೂರು ಹಾಲೆಗಳಾಗಿ ಸೀಳಿರುತ್ತವೆ ಎಲೆಯ ಕಂಕುಳಲ್ಲಿರುವ ಅಂತ್ಯಾರಂಭಿ ಪುಷ್ಪಮಂಜರಿಯ ತುದಿಯಲ್ಲಿ ಹಲವು ಗಂಡು ಹೂಗಳು ಮತ್ತು ಬುಡದಲ್ಲಿ ಕೆಲವು ಹೆಣ್ಣು ಹೂಗಳಿರುತ್ತವೆ ಹೆಣ್ಣು ಹೂವಿನ ಪುಷ್ಪಪಾತ್ರ ಪತ್ರಕಗಳು ಸಂಯುಕ್ತ ಗರಿ ರೂಪದಲ್ಲಿರುತ್ತವೆ. ಅವು ಹೆಣ್ಣು ಹೂ ಕಾಯಿಯಾದಾಗಲೂ ಉಳಿದು ಕಾಯಿಯನ್ನು ಆವರಿಸಿಕೊಂಡಿರುತ್ತವೆ

## ಉಪಯೋಗಗಳು

1 ಬೇರನ್ನು ತುಳಿಸಿ ಎಲೆಯೊಡನೆ ಅರೆದು ಮೈಗೆ ಲೇಪಿಸುವುದರಿಂದ ನವೆ ಮತ್ತು ಮೈಮೇಲೆ ಏಳುವ ಗಂಧೆ ಗುಳ್ಳೆಗಳು ವಾಸಿಯಾಗುತ್ತವೆ

2 ಬೇರಿನ ಕಷಾಯ ಕುಡಿಯುವುದರಿಂದ ಉಬ್ಬಸ ಮತ್ತು ಬಿಟ್ಟು ಬಿಟ್ಟು ಬರುವ ಜ್ವರ ವಾಸಿಯಾಗುತ್ತದೆ.

3 ಬಳ್ಳಿಯ ಸಮೂಲವನ್ನು ಅರೆದು ಆನೆಕಾಲುರೋಗ (Filarialis) ದಿಂದ ಬಾತುಕೊಂಡಿರುವ ವೃಷಣ ಮತ್ತು ಕಾಲುಗಳಿಗೆ ಲೇಪಿಸುವುದರಿಂದ ಊತದ ನೋವು ನೋವಿನಿಂದ ಬಂದಿರುವ ಜ್ವರ ವಾಸಿಯಾಗುತ್ತದೆ





ಚಿತ್ರ 53 . ತುಂಬೆ

# ತುಂಬೆ

| | |
|---|---|
| ವೈಜ್ಞಾನಿಕ ಹೆಸರು | ಲ್ಯೂಕಾಸ್ ಆಸ್ಪೆರ<br>[Leucas aspera (willd )Spreng ] |
| ಸಸ್ಯದ ಕುಟುಂಬ | ಲ್ಯಾಮಿಯೇಸಿ [Lamiaceae] |
| ಕನ್ನಡದ ಇತರ ಹೆಸರುಗಳು | ಒಳ್ಳೆತುಂಬೆ, ತುಂಬೆಸೊಪ್ಪು |
| ಇತರ ಭಾಷೆಯ ಹೆಸರುಗಳು | ಸಂ - ದ್ರೋಣ, ದ್ರೋಣಪುಷ್ಪಿ<br>ಹಿಂ - ಚೋಟ-ಹಾಲ್ ಕುಶ<br>ತ - ತುಂಬೈಚೇಡಿ<br>ತೆ - ತುಮ್ಮಚೆಟ್ಟು<br>ಇಂ - ವೈಟ್ ಹೆಡ್ ನೆಟಲ್ |

**ಪರಿಚಯ**

ತುಂಬೆ ಗಿಡವು ಎಲ್ಲಾ ಬಗೆಯ ಮಣ್ಣಿನಲ್ಲಿ ಹುಲುಸಾಗಿ ಬೆಳೆಯುವ ಒಂದು ಕಳೆಗಿಡ ಹೊಲ ಕುಯ್ಲಾದ ನಂತರ ಹೊಲದಲ್ಲಿ ಹೆಚ್ಚಾಗಿ ಕಂಡುಬರುತ್ತದೆ ತುಂಬೆ ಹೂ, ಶಿವನ ಪೂಜೆಗೆ ಶ್ರೇಷ್ಠ ಎಂಬ ನಂಬಿಕೆಯಿದೆ ಆದುದರಿಂದ ವಿಶೇಷ ಸಂದರ್ಭಗಳಲ್ಲಿ ತುಂಬೆ ಹೂವಿನಿಂದ ಹಾರ ತಯಾರಿಸಿ ಶಿವನನ್ನು ಅಲಂಕರಿಸುತ್ತಾರೆ

ತುಂಬೆ, ನೇರವಾಗಿ ಬೆಳೆಯುವ ಒಂದು ಏಕವಾರ್ಷಿಕ ಮೂಲಿಕೆ ಕಾಂಡವು ವಿರಳವಾಗಿ ಕವಲೊಡೆದಿರುತ್ತದೆ. ಕಾಂಡಕ್ಕೆ ನಾಲ್ಕು ಏಣುಗಳಿರುತ್ತವೆ ಕಾಂಡದ ಮೇಲೆ ವಾಸನಾಯುಕ್ತ ಗ್ರಂಥಿ ರೋಮಗಳಿರುತ್ತವೆ ಚಿಕ್ಕ ತೊಟ್ಟಿರುವ ನೀಳಾಕಾರದ ಎಲೆಗಳು ಗಿಣ್ಣಿನ ಭಾಗದಲ್ಲಿ ಅಭಿಮುಖವಾಗಿ ಜೋಡಣೆಯಾಗಿರುತ್ತವೆ ಹೂವಿಗೆ ಎರಡು ತುಟಿಯುಳ್ಳ ಬಿಳಿಯ ಕೂಡುದಳವಿರುತ್ತದೆ

'ದ್ರೋಣಪುಷ್ಪಿ' ಎಂದು ಆಯುರ್ವೇದ ಗ್ರಂಥಗಳಲ್ಲಿ ಉಲ್ಲೇಖವಿರುವ ಹೆಸರಿಗೆ ಲ್ಯೂಕಾಸ್ ಸಿಫಲೋಟಸ್ (ದ್ರೋಣಪುಷ್ಪಿ) ಎಂಬುದನ್ನು ಮಾತ್ರ ಸ್ವೀಕಾರಾರ್ಹ ಮೂಲಿಕೆಯೆಂದು ಮತ್ತು ಇತರ ತುಂಬೆಗಳಾದ ಲ್ಯೂಕಾಸ್ ಆಸ್ಪೆರ (ತುಂಬೆ) ಮತ್ತು ಲ್ಯೂ ಇಂಡಿಕ (ಕರ್ಜಾಲಿಗಿಡ, ಗಂಟುತುಂಬೆ)ಗಳನ್ನು ಕೇವಲ ಪ್ರತಿನಿಧಿ ಮೂಲಿಕೆಗಳೆಂಬುದಾಗಿ ಪರಿಗಣಿಸಲಾಗಿದೆ

## ಉಪಯೋಗಗಳು

1 ತುಂಬೆಬೇರು 2 ತೊಲ ತೆಗೆದುಕೊಂಡು ಜಜ್ಜಿ ಮಜ್ಜಿಗೆಯಲ್ಲಿ ಕದಡಿ ಕುದಿಸಿ ಪ್ರತಿನಿತ್ಯ ಬೆಳಿಗ್ಗೆ ಕುಡಿಯಬೇಕು ಹೀಗೆ ಪ್ರತಿ ದಿವಸ ಸೇವಿಸಿದರೆ ಜಂತುಹುಳುಗಳು ನಾಶವಾಗುತ್ತವೆ (ತುಂಬೆರಸ ಮತ್ತು ನಿಂಬೆಹಣ್ಣಿನ ರಸದ ಮಿಶ್ರಣವನ್ನೂ ಸಹ ಉಪಯೋಗಿಸುತ್ತಾರೆ)

2 ಸಮಪ್ರಮಾಣ ತುಂಬೆಸೊಪ್ಪು, ಬೆಳ್ಳುಳ್ಳಿ ಮತ್ತು ಮೆಣಸು ತೆಗೆದುಕೊಂಡು ಚೆನ್ನಾಗಿ ಅರೆದು ರಸಮಾಡಿಕೊಂಡು ಬಲಗಡೆ ತಲೆನೋವಿರುವಾಗ ಎಡಕಿವಿಗೆ ಮತ್ತು ಎಡಗಡೆ ತಲೆನೋವಿರುವಾಗ ಬಲಕಿವಿಗೆ ಎರಡು ಹನಿ ರಸವನ್ನು ಹಾಕಬೇಕು

3 ತುಂಬೆಸೊಪ್ಪು 1 ಭಾಗ, ಮೆಣಸು 1/2 ಭಾಗ, ಇವೆರಡನ್ನೂ ಕೂಡಿಸಿ ಅರೆದು ಎರಡು ಕಡಲೆಕಾಳಿನಷ್ಟು ಪ್ರಮಾಣದ ಗುಳಿಗೆ ಮಾಡಿ ಜೇನುತುಪ್ಪದೊಡನೆ ಕಲಸಿ ತಿನ್ನಲಿಕ್ಕೆ ಕೊಡಬೇಕು ದಿವಸಕ್ಕೆ 2 ಹೊತ್ತಿನಂತೆ 3 ದಿವಸ ಕೊಡಬೇಕು. ಇದರಿಂದ ಚಳಿ ಜ್ವರ ವಾಸಿಯಾಗುತ್ತದೆ.

4 ತುಂಬೆರಸ 1/2 ತೊಲ, ತುಲಸಿ ರಸ 1 ತೊಲ, ಮೆಣಸಿನ ಪುಡಿ 2 ಆಣೆ ತೂಕ, ಮತ್ತು 1 ಚಮಚ ಜೇನುತುಪ್ಪ ಇವುಗಳೆಲ್ಲವನ್ನು ಸೇರಿಸಿ ಪ್ರತಿನಿತ್ಯ ಬೆಳಗ್ಗೆ ಮತ್ತು ರಾತ್ರಿ 3-4 ದಿವಸ ಸೇವಿಸುವುದರಿಂದ ಎಲ್ಲಾ ಬಗೆಯ ಜ್ವರಗಳು ವಾಸಿಯಾಗುತ್ತವೆ.

5 ತುಂಬೆ ಗಿಡದ ಸ್ವರಸದ ಸಮಭಾಗದಷ್ಟು ಸುಣ್ಣದ ತಿಳಿನೀರನ್ನು ಸೇರಿಸಿ ಚೆನ್ನಾಗಿ ಕಲಕಿ ದಿವಸಕ್ಕೊಮ್ಮೆ ಹೊತ್ತಿಗೆ ಎರಡು ಚಮಚದಂತೆ 2-3 ವಾರ ಸೇವಿಸಿದರೆ ಮೂಲವ್ಯಾಧಿ ವಾಸಿಯಾಗುತ್ತದೆ

6 ತುಂಬೆಯ 21 ಎಲೆಗಳನ್ನು ಬಾಳೆಯ ಎಲೆಯಲ್ಲಿ ಸುತ್ತಿ ಬೆಂಬೂದಿಯಲ್ಲಿಟ್ಟು ಪಕ್ವಮಾಡಿ, ತುಂಬೆ ಎಲೆಯನ್ನು ಹೊರತೆಗೆದುಕೊಂಡು 4-6 ಚಿಟಿಕೆ ಸೈಂಧಲವಣವನ್ನು ಸೇರಿಸಿ ದಿನಕ್ಕೆ ಎರಡು ಬಾರಿಯಂತೆ 1-2 ವಾರ ತಿನ್ನುವುದರಿಂದ ಅಜೀರ್ಣರೋಗಗಳು ನಿವಾರಣೆಯಾಗುತ್ತವೆ

7 ತುಂಬೆರಸ ಹೊತ್ತಿಗೆ 5 ರಿಂದ 10 ತೊಟ್ಟು ಇದರ ಎರಡರಷ್ಟು ಜೇನುತುಪ್ಪ ಮತ್ತು 2-3 ಚಿಟಿಕೆ ಬಿಳಿಗಾರ ಸೇರಿಸಿ ದಿವಸಕ್ಕೆ 3 ಹೊತ್ತಿನಂತೆ 3-4 ದಿವಸ ಸೇವಿಸುವುದರಿಂದ ನೆಗಡಿ ವಾಸಿಯಾಗುತ್ತದೆ.

8 ತುಂಬೆಯ ಸಮೂಲದ ರಸ 2-3 ಚಮಚ ಪ್ರಮಾಣಕ್ಕೆ 5 ಗುಂಜಿ ತೂಕ ಕರಿ ಮೆಣಸಿನ ಚೂರ್ಣ ಮತ್ತು ಎರಡು ಚಮಚ ಜೇನುತುಪ್ಪ ಸೇರಿಸಿ ನಿತ್ಯ ಎರಡುಹೊತ್ತಿನಂತೆ 2-3 ವಾರ ಸೇವಿಸುವುದರಿಂದ ಕಫಜನ್ಯ ಪಾಂಡುರೋಗ ನಿವಾರಣೆಯಾಗುತ್ತದೆ.

9 ತುಂಬೆಸಮೂಲದ ಕಷಾಯಕ್ಕೆ 12 ಗುಂಜಿ ತೂಕ ಹಿಪ್ಪಲಿ ಚೂರ್ಣ ಮತ್ತು ಒಂದು ಚಮಚ ಜೇನುತುಪ್ಪ ಸೇರಿಸಿ ನಿತ್ಯ 2 ಹೊತ್ತಿನಂತೆ 2 ವಾರ ಕುಡಿಯುವುದರಿಂದ ಸಂಧಿವಾತ (ಆಮವಾತ) ನಿವಾರಣೆಯಾಗುತ್ತದೆ

10 ತುಂಬೆ ಎಲೆರಸಕ್ಕೆ ಬಾಳೆದಿಂಡಿನ ರಸ ಸೇರಿಸಿ ಕುಡಿಯುವುದರಿಂದ ಹಾವಿನ ವಿಷ ಪರಿಹಾರವಾಗುತ್ತದೆ. (ಒಂದು ವೇಳೆಗೆ 10 ಎಲೆಗಳನ್ನು ಮಾತ್ರ ಉಪಯೋಗಿಸಬೇಕು )

11 ತುಂಬೆಹೂವಿನ ರಸಕ್ಕೆ ಎಳ್ಳೆಣ್ಣೆ ಸೇರಿಸಿ ಕಣ್ಣಿಗೆ ಹಚ್ಚಿದರೆ ಇರುಳುಗಣ್ಣು ವಾಸಿಯಾಗುತ್ತದೆ

## ಪಶುರೋಗ ಚಿಕಿತ್ಸೆಯಲ್ಲಿ

1 ನಾಲ್ಕು ಹಿಡಿ ತುಂಬೆಸೊಪ್ಪಿಗೆ ಒಂದು ಹಿಡಿ ಉಪ್ಪು ಸೇರಿಸಿ ಅರೆದು ಮೈಗೆ ಲೇಪಿಸುವುದರಿಂದ ಉಣ್ಣೆಯ ಉಪಟಳ ಕಡಿಮೆಯಾಗುತ್ತದೆ

2 ತುಂಬೆಸೊಪ್ಪಿನ ರಸ 5 ಚಮಚ, ಭಂಗಿಸೊಪ್ಪಿನ ಚೂರ್ಣ 1 ತೊಲ ಮತ್ತು ಪಚ್ಚ ಕರ್ಪೂರ $^1/_2$ ತೊಲ ಇವುಗಳನ್ನು ನುಣ್ಣಗೆ ಅರೆದು ಕಣ್ಣಿಗೆ ಹಚ್ಚುವುದರಿಂದ ಕಣ್ಣಿನನೂತಿ ವಾಸಿಯಾಗುತ್ತದೆ

3 ತುಂಬೆಸೊಪ್ಪಿನ ರಸಕ್ಕೆ ಸುಣ್ಣ ಸೇರಿಸಿ ಚೆನ್ನಾಗಿ ಕಲ್ಲದಲ್ಲಿ ಅರೆದು ನರಹುಣ್ಣು (ನರೋಲಿ)ಯ ಮೇಲೆ ಲೇಪಿಸುತ್ತಾ ಬಂದರೆ ಕ್ರಮೇಣ ನರೋಲಿ ಕಡಿಮೆಯಾಗುತ್ತವೆ

4 ತುಂಬೆ ಸೊಪ್ಪನ್ನು ಅರೆದು ರಸ ಮಾಡಿಕೊಂಡು ಒಂದು ಗೊಟ್ಟದೊಷ್ಟು ಕುಡಿಸಿ ಉಳಿದಷ್ಟನ್ನು ಮೈಗೆ ಲೇಪ ಹಾಕುವುದರಿಂದ ಶಲೆ ಗುಣವಾಗುತ್ತದೆ

5 ತುಂಬೆ ರಸವನ್ನು ಹಾವು ಕಡಿದಾಗ ಉಪಯೋಗಿಸುತ್ತಾರೆ ಚಿಕಿತ್ಸಾ ಕ್ರಮಕ್ಕೆ ಮುತ್ತುಗದ ಉಪಯೋಗಗಳನ್ನು ನೋಡುವುದು.

6 ತುಂಬೆಸೊಪ್ಪನ್ನು ತಲೆದೂಗುವ ರೋಗದಲ್ಲಿ ಉಪಯೋಗಿಸುತ್ತಾರೆ ಚಿಕಿತ್ಸಾ ಕ್ರಮಕ್ಕೆ ಆಡುಮುಟ್ಟದ ಬಳ್ಳಿಯ ಉಪಯೋಗಗಳನ್ನು ನೋಡುವುದು



# ತೇಗ

| | |
|---|---|
| ವೈಜ್ಞಾನಿಕ ಹೆಸರು | ಟೆಕ್ಟೊನ ಗ್ರಾಂಡಿಸ್ (Tectona grandıs L f ) |
| ಸಸ್ಯದ ಕುಟುಂಬ | ವರ್ಬಿನೇಸಿ (Verbenaceae) |
| ಕನ್ನಡದ ಇತರ ಹೆಸರುಗಳು | ತಡ್ಡಿ, ತ್ಯಾಗದಮರ, ಸಾಗುವಾನಿಮರ |
| ಇತರ ಭಾಷೆಯ ಹೆಸರುಗಳು | ಸಂ - ಸಕ, ಶಾಖ |
| | ಹಿಂ. - ಸಗ್ವನ್ |
| | ತ - ತೇಕ್ಕು |
| | ತೆ - ವೆದ್ದತೇಕು |
| | ಇಂ - ಟೀಕ್ |

**ಪರಿಚಯ**

ಪ್ರಪಂಚದ ಅತ್ಯುತ್ತಮ ಮರವೆಂದು ಹೆಸರಾದ ಈ ಮರದ ತವರು ದಕ್ಷಿಣ ಭಾರತ ಈ ಮರವು ಸ್ವಾಭಾವಿಕವಾಗಿ ಬೆಳೆಯುತ್ತದೆಯಾದರೂ, ಚೌಬೀನೆಗಾಗಿ ತೋಟದೋಪಾದಿಯಾಗಿ ಬೆಳೆಸಲಾಗುತ್ತಿದೆ

ತೇಗದ ಮರವು ಸ್ಥಳ ಗುಣಗಳನ್ನು ಅವಲಂಬಿಸಿ 90-120 ಅಡಿ ಎತ್ತರ ಬೆಳೆಯುತ್ತದೆ. ನೀಳವಾದ ಕಾಂಡವು ಕಂಬದಂತಿರುತ್ತದೆ ಬಲಿತ ಹಳೆಯ ಮರದ ಬುಡದಲ್ಲಿ ತಡೆಗೋಡೆಗಳಂತಹ ಬೇರುಗಳಿರುತ್ತವೆ ಎಳೆಯ ರೆಂಬೆಗಳಿಗೆ ನಾಲ್ಕು ಮೂಲೆಗಳಿರುತ್ತವೆ. ತಿಳಿ ಕಂದು ಬಣ್ಣದ ಅಥವಾ ಬೂದಿ ಬಣ್ಣದ ನಾರು ನಾರಾಗಿರುವ ಮರದ ತೊಗಟೆಯು ತೆಳು ಪದರದ ರೂಪದಲ್ಲಿ ಉದುರಿ ಬೀಳುತ್ತದೆ ಸರಳವಾದ ಮತ್ತು ಅಗಲವಾದ ಎಲೆಗಳು ಅಭಿಮುಖವಾಗಿ ಜೋಡಣೆಯಾಗಿರುತ್ತವೆ. ಎಲೆಗಳ ತಳಭಾಗ ಒರಟಾಗಿ ಮತ್ತು ಮೇಲ್ಭಾಗ ನಯವಾಗಿರುತ್ತದೆ ವಾತಾವರಣಕ್ಕೆ ಅನುಗುಣವಾಗಿ ಡಿಸೆಂಬರ್-ಮಾರ್ಚನಿಂದ



ಚಿತ್ರ 54 ತೇಗ - ಪುಷ್ಪಮಂಜರಿ ಇರುವ ರೆಂಬೆ

ಒಡಿದು ಏಪ್ರಿಲ್-ಜೂನ್ ವರೆಗೆ ಹಳೆಯ ಎಲೆಗಳು ಉದುರಿಹೋಗಿ ಮರ ಬೋಳಾಗಿ ನಿಲ್ಲುತ್ತವೆ ಮಳೆಗಾಲದಲ್ಲಿ ಮರ ಹೂ ಬಿಡಲಾರಂಭಿಸುತ್ತದೆ. ಹೂಗಳು ಬೆಳ್ಳಗೂ, ಸಣ್ಣಗೂ ಮತ್ತು ಹೇರಳವಾಗಿರುತ್ತವೆ ಹೂಗಳಿಗೆ ಒಂದು ರೀತಿಯ ಸುವಾಸನೆಯಿರುತ್ತದೆ ಗುಂಡಾಗಿರುವ ಕಾಯಿ ಮೃದುವಾಗಿದ್ದು $1/_2$ ಅಂಗುಲ ಉದ್ದವಿರುತ್ತದೆ

## ಉಪಯೋಗಗಳು

1 ತೇಗದ ಮರದ ಬೇರನ್ನು ಮೇಕೆ ಹಾಲಿನಲ್ಲಿ ಕುದಿಸಿ ಬೇರನ್ನು ತೆಗೆದು ಹಾಲನ್ನು ಕುಡಿಯುವುದರಿಂದ ಮೂತ್ರ ಬಂಧನವಾಗುವುದಿಲ್ಲ.

2 ತೊಗಟೆಯ ಚೂರ್ಣವನ್ನು ಗೇರುಹುಣ್ಣಿನ ಮೇಲೆ ಸಿಂಪಡಿಸುವುದರಿಂದ ನೋವು ಮತ್ತು ಉರಿ ಶಮನವಾಗುತ್ತದೆ.

3 ತೇಗದೆಲೆಯ ಸ್ವರಸವನ್ನು ಕುದಿಸಿ ಪಾಕಮಾಡಿಕೊಂಡು ಲೇಪಿಸುವುದರಿಂದ ವಿಸರ್ಪ (ಕೆಟ್ಟದ್ದು - Erysipelas) ವಾಸಿಯಾಗುತ್ತದೆ.

4 ತೇಗದ ಬೀಜಗಳನ್ನು ತೇಯ್ದು ಗಂಧ ಮಾಡಿಕೊಂಡು ಸ್ವಲ್ಪ ಗಂಧವನ್ನು ಹೊಟ್ಟೆಗೆ ಕುಡಿಸಿ ಉಳಿದ ಸ್ವಲ್ಪ ಗಂಧವನ್ನು ನಾಭಿಯ ಮೇಲೆ ಲೇಪಿಸುವುದರಿಂದ ಮೂತ್ರಕೋಶದ ಕಲ್ಲು ಕರಗಿಹೋಗುತ್ತದೆ. ಕೆಲವು ದಿವಸಗಳವರೆಗೆ ಈ ಚಿಕಿತ್ಸೆ ಮಾಡಬೇಕಾಗುತ್ತದೆ.

5 ಬೀಜದಿಂದ ತಯಾರಿಸಿದ ತೈಲವನ್ನು ತಲೆಗೆ ಲೇಪಿಸುವುದರಿಂದ ಕೂದಲು ಬಲಗೊಳ್ಳುತ್ತವೆ ಮತ್ತು ಹುಲುಸಾಗಿ ಬೆಳೆಯುತ್ತದೆ.

6 ಬೀಜದಿಂದ ತೆಗೆದ ಎಣ್ಣೆಯನ್ನು ಲೇಪಿಸುವುದರಿಂದ ವ್ಯೆನವೆ ನಿವಾರಣೆಯಾಗುತ್ತದೆ





ಚಿತ್ರ 55 ತೊರೆಮತ್ತಿ - ಕಾಯಿಗಳಿರುವ ರೆಂಬೆ

# ತೊರೆಮತ್ತಿ

| | |
|---|---|
| ವೈಜ್ಞಾನಿಕ ಹೆಸರು | ಟರ್ಮಿನಾಲಿಯ ಅರ್ಜುನ<br>(Terminalia arjuna<br>(Roxb ex DC ) Wt & Arn ) |
| ಸಸ್ಯದ ಕುಟುಂಬ | ಕಾಂಬ್ರಿಟೇಸಿ (Combretaceae) |
| ಕನ್ನಡದ ಇತರ ಹೆಸರುಗಳು | ಅರ್ಜುನ, ಕರುಭ, ಕುದುರೆಕಿವಿಮರ,<br>ನೀರ್ಮತ್ತಿ, ಬಿಳಿಮತ್ತಿ, ಮಡ್ಡಿ |
| ಇತರ ಭಾಷೆಯ ಹೆಸರುಗಳು | ಸಂ. - ಅರ್ಜುನ<br>ಹಿಂ - ಅರ್ಜುನ್, ಕಹು<br>ತ - ವೆಲ್ಲಮಟ್ಟು, ಮರುಡು, ವೆಲ್ಲಮರ್ದ<br>ತೆ - ಯರ್ರಮಡ್ಡಿ, ತೆಲ್ಲಮಡ್ಡಿ<br>ಇಂ - ಅರ್ಜುನ ಮೈರೊಬಲನ್ |

**ಪರಿಚಯ**

ಈ ಮರವು ಸಾಮಾನ್ಯವಾಗಿ ನದಿ, ತೊರೆಯ ದಡದಲ್ಲಿ ಬೆಳೆಯುತ್ತದೆ ಇದನ್ನು ನಾಲುಮರವಾಗಿಯೂ ರಸ್ತೆಯ ಬದಿಯಲ್ಲಿ ತೋಟಗಳಲ್ಲಿ ಬೆಳೆಸುತ್ತಾರೆ

ಪರ್ಣಪಾತಿ ಮರವಾದ ತೊರೆಮತ್ತಿ ಸುಮಾರು 20 ರಿಂದ 30 ಅಡಿ ಎತ್ತರ ಬೆಳೆಯುತ್ತದೆ, ರೆಂಬೆಗಳು ಇಳಿ ಬಿದ್ದಿರುತ್ತವೆ ಮರದ ತೊಗಟೆ ದಪ್ಪನಾಗಿರುತ್ತದೆ, ಬಣ್ಣ ಸಾಧಾರಣವಾಗಿ ಬೂದು ಇಲ್ಲವೆ ತಿಳಿಗೆಂಪಾಗಿರುತ್ತದೆ ತೊಗಟೆ ಸುಲಭವಾಗಿ ಕಳಚಿ ಬಿದ್ದುಹೋಗುತ್ತದೆ ಸುಮಾರು 10-15 ಸೆ ಮೀ ಉದ್ದದ ಉದ್ದಅಂಡಾಕಾರದ ಎಲೆಗಳು ಪರ್ಯಾಯವಾಗಿ ಇಲ್ಲವೆ ಅಭಿಮುಖವಾಗಿ ಜೋಡಣೆಯಾಗಿರುತ್ತವೆ ಸಣ್ಣ ಸಣ್ಣ ಹೂಗಳು ಅಂತ್ಯಾರಭಿ ಪುಷ್ಪಮಂಜರಿಯಲ್ಲಿ ಜೋಡಿಸಲ್ಪಟ್ಟಿರುತ್ತವೆ ಹೊಳಪಾದ ಅಂಡಾಕಾರದ ಕಾಯಿಗಳಿಗೆ 5 ರೆಕ್ಕೆಯಂಥ ಏಣುಗಳಿರುತ್ತವೆ

## ಉಪಯೋಗಗಳು

1 ತೊರೆಮತ್ತಿ ಮರದ ಚಕ್ಕೆಯ ಚೂರ್ಣ $^1/_2$ ತೊಲದಷ್ಟನ್ನು ನಿತ್ಯ ಎರಡು ಹೊತ್ತಿನಂತೆ ಜೇನುತುಪ್ಪದೊಡನೆ 2-3 ವಾರ ಸೇವಿಸುವುದರಿಂದ ಹೃದಯ ಸಂಬಂಧದ ರೋಗಗಳು ಪರಿಹಾರವಾಗುತ್ತವೆ

2 ಎಲೆಯ ರಸವನ್ನು ಕಿವಿಗೆ ಹಾಕುವುದರಿಂದ ಕಿವಿನೋವು ಕಡಿಮೆಯಾಗುತ್ತದೆ

3 ತೊಗಟೆಯ ಕಷಾಯ ಅಥವಾ ಚೂರ್ಣ ಸೇವನೆಯಿಂದ ಪಿತ್ತಸಂಬಂಧದ ರೋಗಗಳು ವಾಸಿಯಾಗುತ್ತವೆ.

4 ತೊಗಟೆಯ ಚೂರ್ಣವನ್ನು ವ್ರಣಗಳ ಮೇಲೆ ಸಿಂಪಡಿಸುವುದರಿಂದ ಅವು ಬೇಗ ವಾಸಿಯಾಗುತ್ತವೆ.

5 ಮರದ ಬೂದಿಯನ್ನು ಹಾವು ಕಡಿದವರಿಗೆ ತಿನ್ನಿಸುತ್ತಾರೆ

6 ತೊಗಟೆಯನ್ನು ಅರೆದು ಮೂಳೆ ಮುರಿದ ಜಾಗದಮೇಲೆ ಪಟ್ಟು ಹಾಕಿಕಟ್ಟುತ್ತಾರೆ



# ದತ್ತೂರಿ ಗಿಡ

| | |
|---|---|
| ವೈಜ್ಞಾನಿಕ ಹೆಸರು | ಆರ್ಜಿಮೋನ್ ಮೆಕ್ಸಿಕಾನ (Argemone mexicana L ) |
| ಸಸ್ಯದ ಕುಟುಂಬ | ಪಪಾವಿರೇಸಿ (Papaveraceae) |
| ಕನ್ನಡದ ಇತರ ಹೆಸರುಗಳು | ಅರಿಶಿನ ಕಮ್ಮಟ್ಟ, ಅರಿಶಿನ ಉಮ್ಮತ್ತಿ, ಮುಳ್ಳುದತ್ತೂರಿ, ಪರಂಗಿದತ್ತೂರಿ |
| ಇತರ ಭಾಷೆಯ ಹೆಸರುಗಳು | ಸಂ - ಬಹ್ಮದಂಡಿ, ಸ್ವರ್ಣಕ್ಷೀರಿ, ಹೇಮದುಗ್ಧ, ಹೇಮಶಿಕ |
| | ಹಿಂ - ಪರಂಗಿ ದತ್ತೂರ, ಪಿಲದತ್ತೂರ, ಬ್ರಹ್ಮದುಂಡಿ, ಭರ್ ಬಂದ್, |
| | ತ. - ಕುರುಕ್ಕಂ, ಬಹ್ಮತಂಡು |
| | ತೆ. - ದತ್ತೂರಿಚೆಟ್ಟು, ಬ್ರಹ್ಮದಂಡಿ |
| | ಇಂ - ಮೆಕ್ಸಿನ್ ಪಾಪಿ, ಪ್ರಿಕ್ಲಿಪಾಪಿ, ಯಲ್ಲೊತಿಸಲ್ |

**ಪರಿಚಯ**

ದತ್ತೂರಿ ಮೂಲತಃ ದಕ್ಷಿಣ ಅಮೆರಿಕದ ಮೂಲಿಕೆ ಇದು ಕ್ರಿ.ಶ. 1790 ರಿಂದೀಚೆಗೆ ಭಾರತದಾದ್ಯಂತ ಕಳೆಯಂತೆ ಬೆಳೆಯುತ್ತಿದೆ. ರಾಶಿ ಹಾಕಿದ ಮಣ್ಣು ಮತ್ತು ಗೊಬ್ಬರದ ಮೇಲೆ ಇದು ಬಹು ಬೇಗನೆ ಮೊಳೆತು ಬೆಳೆಯುತ್ತದೆ ಈ ಮೂಲಿಕೆಯು ನೆಟ್ಟಗೆ ಇಲ್ಲವೆ ಕವಲೊಡೆದು ಬೆಳೆಯುತ್ತದೆ ಕಾಂಡದ ಮೇಲೆ ಅಲ್ಲಲ್ಲಿ ಮುಳ್ಳುಗಳಿರುತ್ತವೆ ಎಲೆ ಮತ್ತು ಕಾಂಡದೊಳಗೆ

ಹಳದಿ ಬಣ್ಣದ ಸನ್ನಕ್ಷೀರವಿರುತ್ತದೆ ಎಲೆಗಳಿಗೆ ತೊಟ್ಟಿರುವುದಿಲ್ಲ ಎಲೆಗಳ ಅಂಚು ಗರಿಪತ್ರಗಳಂತೆ ಹೋಳಾಗಿರುತ್ತದೆ ಮತ್ತು ಅವುಗಳ ತುದಿಯಲ್ಲಿ ನೀಲಿ ಮಿಶ್ರಿತ ಹಸಿರು ಬಣ್ಣದ ಮುಳ್ಳುಗಳಿರುತ್ತವೆ ಕಾಂಡದ ತುದಿಯಲ್ಲಿ ಅಥವಾ ಎಲೆಯ ಕಂಕುಳಲ್ಲಿ ತೊಟ್ಟಿರುವ ಒಂಟಿ ಹೂಗಳಿರುತ್ತವೆ ಹಳದಿ ಬಣ್ಣದ ಹೂಗಳು ನೋಡಲು ಆಕರ್ಷಕವಾಗಿ ಕಾಣುತ್ತವೆ ಅಂಡಾಕಾರದ ಕಾಯಿಯ ಮೇಲೆ ಮುಳ್ಳುಗಳಿದ್ದು ಅದರೊಳಗೆ ಅಸಂಖ್ಯಾತ ಸಾಸಿವೆ ಬೀಜದಂತಹ ಕಪ್ಪು ಬೀಜಗಳಿರುತ್ತವೆ

## ಉಪಯೋಗಗಳು

1 ಬೇರನ್ನು ಅರೆದು ಚೇಳು ಕಡಿದ ಜಾಗದಮೇಲೆ ಊತವಿರುವ ಕಡೆ ಲೇಪಿಸುತ್ತಾರೆ.

2 ಬೇರಿನ ಚೂರ್ಣ 1 ಗ್ರಾಂ ಪ್ರಮಾಣ ಸೇವಿಸುವುದರಿಂದ ಜಂತುಹುಳು ಮತ್ತು ಲಾಡಿಹುಳು ಮಲದೊಡನೆ ಹೊರಬರುತ್ತವೆ

3 ದತ್ತೂರಿ ಗಿಡದ ಹಳದಿ ಹಾಲು (ಪ್ರಮಾಣ ½ ಮಿ ಲೀ ) ಅಥವಾ ಸ್ವರಸ (ಪ್ರಮಾಣ 5 ಮಿ ಲೀ ) ಸೇವನೆಯಿಂದ ವಿಷಮ ಶೀತ ಜ್ವರ ವಾಸಿಯಾಗುತ್ತದೆ

4 ಬೀಜವನ್ನು ಅರೆದು ಸಂದಿವಾತದಿಂದ ಉಂಟಾದ ನೋವಿರುವ ಜಾಗದ ಮೇಲೆ ಲೇಪಿಸುವುದರಿಂದ ನೋವು ನಿವಾರಣೆಯಾಗುತ್ತದ

5 ಬೀಜದ ತೈಲ ಅಥವಾ ಗಿಡದ ರಸವನ್ನು ಲೇಪಿಸುವುದರಿಂದ ಎಲ್ಲಾ ವಿಧದ ಚರ್ಮ ರೋಗಗಳು ನಿವಾರಣೆಯಾಗುತ್ತ

6 ಬೀಜದ ಚೂರ್ಣ ಸುಮಾರು 200 ಮಿ ಗ್ರಾಂ ನಷ್ಟನ್ನು ನಾಲ್ಕು ಭಾಗಮಾಡಿ ಒಂದು ದಿವಸದಲ್ಲಿ ನಾಲ್ಕು ಹೊತ್ತು ಸೇವಿಸುವುದರಿಂದ ಕೆಮ್ಮುದಮ್ಮು ವಾಸಿಯಾಗುತ್ತದೆ ಈ ಚಿಕಿತ್ಸೆಯನ್ನು ವೈದ್ಯರ ಸಲಹೆಯಂತೆ ಕೆಲವು ದಿವಸಗಳವರೆಗೆ ಮುಂದುವರೆಸುವುದು

7 ಅತಿಯಾಗಿ ಹಾಲು ಉತ್ಪತ್ತಿಯಾಗುತ್ತಿರುವ ತಾಯಂದಿರು ದತ್ತೂರಿ ಬೀಜವನ್ನು ಅರಿಸಿನದೊಡನೆ ಅರೆದು ಎದೆಗೆ ಲೇಪಿಸಿದರೆ ಹಾಲು ಇಂಗಿಹೋಗುತ್ತದೆ

8 ದತ್ತೂರಿಗಿಡದ ಹಳದಿ ಹಾಲು ಅಥವಾ ಬೀಜದ ತೈಲವನ್ನು ಕಾಲಿನ ಆಣಿ ಮತ್ತು ನರೋಲಿಯ ಮೇಲೆ ಲೇಪಿಸುವುದರಿಂದ ಅವು ವಾಸಿಯಾಗುತ್ತದೆ

9 ದತ್ತೂರಿ ಬೀಜದ ಹೊಗೆಯನ್ನು ನೋವಿರುವ ಹಲ್ಲಿಗೆ ಕೊಳವೆಯ ಮೂಲಕ ಕೊಡುವುದರಿಂದ ಹಲ್ಲು ನೋವು ಕಡಿಮೆಯಾಗುತ್ತದೆ ಜೊತೆಗೆ ಹಲ್ಲಿನ ಮೇಲೆ ಕಟ್ಟಿರುವ ಕಲೆಯೂ ಹೋಗುತ್ತದೆ

## ಪಶುರೋಗ ಚಿಕಿತ್ಸೆಯಲ್ಲಿ

ದತ್ತೂರಿ ಬೀಜ 5 ಗ್ರಾಂ ಮತ್ತು ಪೆಟ್ಲುಪ್ಪು 5 ಗ್ರಾಂಗಳನ್ನು ಚೆನ್ನಾಗಿ ಅರೆದು ಮುಕ್ಕಾಲು ಲೀಟರ್ ಬಿಸಿನೀರು ಸೇರಿಸಿ ಎರುಡು ಹೊತ್ತು ಕುಡಿಸುವುದರಿಂದ ಜ್ವರ ವಾಸಿಯಾಗುತ್ತದೆ



# ದಾಗಡಿಬಳ್ಳಿ

| | |
|---|---|
| ವೈಜ್ಞಾನಿಕ ಹೆಸರು | ಕಾಕ್ಯುಲಸ್ ಹಿರ್ಸುಟಸ್ (Cocculus hirsutus (L ) Diels) |
| ಸಸ್ಯದ ಕುಟುಂಬ | ಮೆನಿಸ್ಪರ್ಮೇಸಿ (Menispermaceae) |
| ಕನ್ನಡದ ಇತರ ಹೆಸರುಗಳು | ಅಡಂಬುಬಳ್ಳಿ, ಎಡಾನಿಬಳ್ಳಿ, ದುಸರೀಬಳ್ಳಿ, ಧಗಡಿಬಳ್ಳಿ, ಸಿಂಗಾಡಿಬಳ್ಳಿ, ಸುಗಡಿಬಳ್ಳಿ |
| ಇತರ ಭಾಷೆಯ ಹೆಸರುಗಳು | ಸಂ - ಗಾರುಡಿ, ಪಿಲಹಿಂಡ, ವಾತಾಳಗರುಡಿ, ಮಹಾಮೂಲ, ದೀರ್ಘಸಿಂಡ |
| | ಹಿಂ - ಜಮ್ಟಿ-ಕಿ-ಜೆಲ್, ಫರಿದ್ ಬುರ್ತಿ, ಚಿರೆಟ |
| | ತ - ಕಾಟ್ಟುಕ್ಕೊಡಿ |
| | ತೆ - ದುಸಾರ್ಟಿಗೆ |
| | ಇಂ - ಫಿಷ್ ಬೆರ್ರಿ, ಬ್ರೂಮ್ ಕ್ರೀವರ್, ಇಂಕ್ ಬೆರ್ರಿ |

## ಪರಿಚಯ

ಈ ಮೂಲಿಕೆಯು ಕಳ್ಳಿ ಕುರುಚಲು ಗಿಡಗಳನ್ನೊಳಗೊಂಡ ಸಸ್ಯಾವರಣ ಮತ್ತು ಬೇಸಿಗೆಯಲ್ಲಿ ಎಲೆಯುದುರುವ ನಿತ್ಯಹರಿದ್ವರ್ಣ ಸಸ್ಯಾವರಣಟ ನೆಲದ ಮೇಲೆ, ಗಿಡದ ಮೇಲೆ ಮತ್ತು ಪೊದರಿನ ಮೇಲೆ ಹಬ್ಬಿ ಬೆಳೆಯುತ್ತದೆ ಈ ಮೂಲಿಕೆಯ ಬಳ್ಳಿ ಕಾಂಡದ ಮೇಲೆ ಭರ್ಜಿ ಅಥವಾ ನೀಳ ಅಂಡಾಕಾರದ ಎಲೆಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ ಎಲೆಗಳ ಮೇಲೆ ರೋಮಗಳಿರುವುದಿಲ್ಲ ಇದ್ದರೆ ವಿರಳವಾಗಿರುತ್ತವೆ ಎಲೆಯ ಕಂಕುಳಲ್ಲಿ ಹೆಣ್ಣು ಹೂಗಳು ಗೊಂಚಲಾಗಿ ಮತ್ತು ಗಂಡು ಹೂಗಳು ವಿರಳವಾಗಿ ಹಾಗೂ ಪ್ರತ್ಯೇಕವಾಗಿರುತ್ತವೆ ಚಪ್ಪಟೆಯಾದ ರಸಭರಿತ ಹಣ್ಣಿನ ಬಣ್ಣ ಕಪ್ಪು ಮಿಶ್ರಿತ ನೀಲಿ.

ಎಲೆಗಳನ್ನು ಅರೆದು ನೀರಿಗೆ ಹಾಕಿದರೆ ನೀರಿನ ಮೇಲೆ ಲೋಳೆಯಂತೆ ಗರಣೆ ಕಟ್ಟಿಕೊಳ್ಳುತ್ತದೆ

## ಉಪಯೋಗಗಳು

1 ಬೇರಿನ ಚೂರ್ಣ ಸೇವಿಸುವುದರಿಂದ ಶಕ್ತಿವರ್ಧನೆಯಾಗುತ್ತದೆ

2 ಬೇರಿನ ಚೂರ್ಣವನ್ನು ಹಾವು ಕಡಿದವರಿಗೆ ತಿನ್ನಿಸುತ್ತಾರೆ

3 ಬೇರಿನ ಕಷಾಯಕ್ಕೆ ಕೆಲವು ಕಾಳು ಕರಿ ಮೆಣಸು ಸೇರಿಸಿ ಮೇಕೆ ಹಾಲಿನೊಡನೆ ಪ್ರತಿ ದಿವಸ ಬೆಳಿಗ್ಗೆ ಕುಡಿಸುವುದರಿಂದ ಸಂಧಿವಾತ ಹಾಗೂ ಲೈಂಗಿಕ ರೋಗಗಳು ಗುಣವಾಗುತ್ತವೆ

4 ಎಲೆ ಮತ್ತು ಬೇರಿನ ಚೂರ್ಣ ಸೇವನೆಯಿಂದ ರತಿ ಸಂಬಂಧದ ರೋಗಗಳು, ಆಮವಾತ (ಸಂಧಿವಾತ), ದಮ್ಮುಕೆಮ್ಮು ಅಜೀರ್ಣ, ಅಜೀರ್ಣ ಸಂಬಂಧದ ಹೊಟ್ಟೆನೋವು ವಾಸಿಯಾಗುತ್ತದೆ ಜ್ವರ ನಿವಾರಣೆಯಾಗುತ್ತದೆ ಮತ್ತು ರಕ್ತವೂ ಶುದ್ಧಿಯಾಗುತ್ತದೆ

5 ದಾಗಡಿ ಎಲೆ ಮತ್ತು ಬೇರುಗಳನ್ನು ಅರೆದು ಲೇಪಿಸುವುದರಿಂದ ಎಲ್ಲಾ ವಿಧದ ಚರ್ಮ ರೋಗಗಳು ವಾಸಿಯಾಗುತ್ತವೆ. ಇದನ್ನೇ ಚೇಳುಕಡಿದ ಜಾಗದ ಮೇಲೆ ಲೇಪಿಸುವುದರಿಂದ ನೋವು, ಉರಿ ಶಮನವಾಗುತ್ತದೆ

6 ಎಲೆಯ ರಸವನ್ನು ಸಕ್ಕರೆಯೊಡನೆ ಸೇವಿಸುವುದರಿಂದ ಉರಿಮೂತ್ರ, ಮೂತ್ರತಡೆ ಮತ್ತು ಮೂತ್ರದಲ್ಲಿ ಕೀವು ಸುರಿಯುವುದು ವಾಸಿಯಾಗುತ್ತದೆ

7 ಎಲೆಯ ರಸವನ್ನು ನೀರಿಗೆ ಹಾಕಿದಾಗ ನೀರು ಲೋಳೆಯಂತಾಗುತ್ತದೆ ಅದಕ್ಕೆ ಸಕ್ಕರೆ ಸೇರಿಸಿ ಕುಡಿಯುವುದರಿಂದ ಗೊನ್ನೊರಿಯ ರೋಗ ಗುಣವಾಗುತ್ತದೆ

8 ಎಲೆಯ ರಸವನ್ನು ನೀರಿಗೆ ಹಾಕಿದಾಗ ಬರುವ ಲೋಳೆಯನ್ನು ಹಾಲಿನೊಡನೆ ಸೇವಿಸುವುದರಿಂದ ಸ್ವಪ್ನಸ್ಖಲನವಾಗುವುದಿಲ್ಲ, ಇದೇ

ಚಿಕಿತ್ಸೆಯಿಂದ ಕೆಮ್ಮು, ಬಾತುಕೊಂಡಿರುವ ರೆಪ್ಪೆಯ ಊತ ಸಹ ಕಡಿಮೆಯಾಗುತ್ತವೆ ಮತ್ತು ಗಟ್ಟಿಯಾದ ಸ್ಥನ ಮೃದುವಾಗುತ್ತದೆ

9 ದಾಗಡಿಯ ಸ್ವರಸ ಸೇವನೆಯಿಂದ ಶೀಘ್ರವೀರ್ಯ ಸ್ಖಲನ ಗುಣವಾಗುತ್ತದೆ ಮತ್ತು ಸಂಭೋಗ ಶಕ್ತಿ ವೃದ್ಧಿಯಾಗುತ್ತದೆ.

## ಪಶುರೋಗ ಚಿಕಿತ್ಸೆಯಲ್ಲಿ

ದಾಗಡಿ ಸೊಪ್ಪು 3 ಹಿಡಿ, ಎತ್ತಿನನಾಲಿಗೆ ಸೊಪ್ಪು 1 ಹಿಡಿ, ಗೆಜ್ಜುಗದ ಸೊಪ್ಪು 1 ಹಿಡಿ ಇವುಗಳನ್ನು ನೀರಿನಲ್ಲಿ ಅರೆದು ಅಕ್ಕಿ ಗಂಜಿಯೊಡನೆ ದಿನಕ್ಕೆ ಎರಡು ಬಾರಿಯಂತೆ 3 ದಿವಸ ಕುಡಿಸುವುದರಿಂದ ತಲೆದೂಗುವ ರೋಗ ವಾಸಿಯಾಗುತ್ತದೆ



# ದಾಲ್ಚಿನ್ನಿ ಮರ

| | |
|---|---|
| ವೈಜ್ಞಾನಿಕ ಹೆಸರು | ಸಿನ್ನಮೊಮಂ ಜೈಲಾನಿಕಮ್<br>(Cinnamomum zeylanicum Bl ) |
| ಸಸ್ಯದ ಕುಟುಂಬ | ಲಾರೇಸಿ<br>(Lauraceae) |
| ಕನ್ನಡದ ಇತರ ಹೆಸರುಗಳು | ಸಾಂಬಾರಚೆಕ್ಕೆ, ಸಾಂಬಾರವತ್ರೆ |
| ಇತರ ಭಾಷೆಯ ಹೆಸರುಗಳು | ಸಂ. - ತಮಾಲವತ್ರ, ಗುಡತ್ವಕ್, ವರಂಗಂ<br>ಹಿಂ - ದಾಲ್ಚಿನ್ನಿ<br>ತ - ವಟ್ಟೆ, ಲವಂಗ ವಟ್ಟೆ,<br>ತೆ - ಲವಂಗವಟ್ಟೆ, ಚಕ್ಕ, ದಾಲ್ಚಿನ್ನಿ<br>ಇಂ - ಚೈನೀಸ್ ಕ್ಯಾಸಿಯ, ಸಿನ್ನಮೋನ್ |

**ಪರಿಚಯ**

ದಾಲ್ಚಿನ್ನಿ ಮರದ ತೌರು ಕೇರಳದ ಮಲಬಾರ್ ಮತ್ತು ಶ್ರೀಲಂಕ ಸಾಂಬಾರು ಪದಾರ್ಥವಾಗಿ ಎಲೆ ಮತ್ತು ಮರದ ತೊಗಟೆಯನ್ನು ಬಹಳ ಹಿಂದಿನಿಂದಲೂ ಉಪಯೋಗಿಸಲಾಗುತ್ತಿದೆ. ಈ ಮರವನ್ನು ಪಶ್ಚಿಮ ಘಟ್ಟಗಳ ಇಳಿಜಾರಿನಲ್ಲಿ ಬೆಳೆಸುತ್ತಾರೆ

ನಿತ್ಯಹರಿದ್ವರ್ಣದ ಈ ಮರವು 20-40 ಅಡಿ ಎತ್ತರದವರೆಗೆ ಬೆಳೆಯುತ್ತದೆ ಎಳೆಯ ಕುಡಿಗಳು ಮತ್ತು ಎಲೆಗಳು ಕೆಂಪಾಗಿರುತ್ತವೆ ಬಲಿತಂತೆ ಹಸಿರು ವರ್ಣಕ್ಕೆ ತಿರುಗುತ್ತವೆ. ಎಲೆಗಳು 4-7 ಅಂಗುಲ ಉದ್ದವಿರುತ್ತವೆ. ಒರಟಾದ ಎಲೆಗಳು ಹೊಳಪಾಗಿರುತ್ತವೆ ಎಲೆಗಳ ಮೇಲೆ ಮೂರು ಪತ್ರ ನರಗಳು ಪ್ರಮುಖವಾಗಿ ಕಾಣುತ್ತವೆ ಬಲಿತ ಎಲೆಗಳಿಗೆ ವಾಸನೆಯಿರುತ್ತದೆ ಕಾಯಿಗಳು ½ -1 ಅಂಗುಲ ಉದ್ದವಿರುತ್ತವೆ ಮಾಗಿದ



ಚಿತ್ರ 58 ದಾಲ್ಚಿನ್ನಿ ಮರ - ಹೂಗಳಿರುವ ರೆಂಬೆ

ಮೇಲೆ ಕಪ್ಪು ಮಿಶ್ರಿತ ಕೆಂಪು ಬಣ್ಣ ತಳೆಯುತ್ತವೆ ಒಂದು ಹಣ್ಣಿಗೆ ಒಂದೇ ಬೀಜವಿರುತ್ತದೆ ಮರದ ತೊಗಟೆಗೆ ಬೂದು ಮಿಶ್ರಿತ ಕಂದು ಬಣ್ಣವಿರುತ್ತದೆ ಮತ್ತು ಸುವಾಸನೆಯಿರುತ್ತದೆ ಇದನ್ನೇ ದಾಲ್ಚಿನ್ನಿ ಎಂಬ ಹೆಸರಿನಿಂದ ಸಾಂಬಾರು ಪದಾರ್ಥವಾಗಿ ಮತ್ತು ಔಷಧ ತಯಾರಿಕೆಯಲ್ಲಿ ಬಳಸುತ್ತಾರೆ

## ಉಪಯೋಗಗಳು

1 ದಾಲ್ಚಿನ್ನಿ, ತೇಜಪತ್ರೆ, ಏಲಕ್ಕಿ ಒಂದೊಂದು ತೊಲದಂತೆ ಮತ್ತು ಹಿಪ್ಪಲಿ, ಕಲ್ಲುಸಕ್ಕರೆ, ಒಣದ್ರಾಕ್ಷಿ, ಜೇಷ್ಟಮಧುಗಳನ್ನು ಎರಡೆರಡು ತೊಲದಂತೆ ತೆಗೆದುಕೊಂಡು ಕೂಡಿಸಿ ಅರೆದು ಹೊತ್ತಿಗೆ 10 ಗುಂಜಿಯಂತೆ 3-4 ವಾರ ಸೇವಿಸುವುದರಿಂದ ಉಬ್ಬಸರೋಗ ಕಡಿಮೆಯಾಗುತ್ತದೆ

2 ದಾಲ್ಚಿನ್ನಿಯನ್ನು ಬಿಸಿನೀರಿನೊಡನೆ ನುಣ್ಣಗೆ ಅರೆದು ನೋವಿರುವ ಜಾಗಕ್ಕೆ ಲೇಪಿಸುವುದರಿಂದ ವಾತಶೂಲೆ ಪರಿಹಾರವಾಗುತ್ತದೆ, ಊತ ಕಡಿಮೆಯಾಗುತ್ತದೆ

3 ದಾಲ್ಚಿನ್ನಿಯನ್ನು ಬಾಯಿಯಲ್ಲಿ ಹಾಕಿ ಅಗಿಯುವುದರಿಂದ ಬಾಯಿಯ ದುರ್ಗಂಧ ದೂರವಾಗುತ್ತದೆ ಮತ್ತು ಹಲ್ಲುಗಳು ಗಟ್ಟಿಯಾಗುತ್ತವೆ

4 ದಾಲ್ಚಿನ್ನಿಯನ್ನು ಅರೆದು ಲೇಪಿಸುವುದರಿಂದ ಬಂಗು ನಿವಾರಣೆಯಾಗುತ್ತದೆ ದಾಲ್ಚಿನ್ನಿ ಸೇವನೆಯಿಂದ ಅರುಚಿ, ಅಜೀರ್ಣ, ಜ್ವರ, ಆಮದೋಷ, ಉದರಶೂಲೆ, ಉರಿ ಮೂತ್ರ ಮತ್ತು ಮೂಲವ್ಯಾಧಿ ನಿವಾರಣೆಯಾಗುತ್ತವೆ

5 ಮುಟ್ಟಿನ ಸ್ರಾವ ಸರಿಯಾಗಿ ಆಗದಿರುವಾಗ ದಾಲ್ಚಿನ್ನಿ ಸೇವನೆಯಿಂದ ಸ್ರಾವ ಸರಿಯಾಗಿ ಆಗುತ್ತದೆ

6 ದಾಲ್ಚಿನ್ನಿಯನ್ನು ಅಗಿದು ತಿನ್ನುವುದರಿಂದ ವಾಕರಿಕ ಮತ್ತು ವಾಂತಿ ನಿಲ್ಲುತ್ತದೆ

8 ದಾಲ್ಚಿನ್ನಿ ತೈಲವನ್ನು ವಸಡಿಗೆ ಲೇಪಿಸುವುದರಿಂದ ಹಲ್ಲುನೋವು ಕಡಿಮೆಯಾಗುತ್ತದೆ

9 ದಾಲ್ಚಿನ್ನಿ ತೈಲವನ್ನು ಜನನೇಂದ್ರಿಯಕ್ಕೆ ಲೇಪಿಸುವುದರಿಂದ ಧ್ವಜಬಂಗ (Loss of erection) ನಿವಾರಣೆಯಾಗುತ್ತದೆ

10 ದಾಲ್ಚಿನ್ನಿ ತೈಲವನ್ನು ಕ್ಷಯಕ್ಕೆ ಸಂಬಂಧಿಸಿದ ಹುಣ್ಣುಗಳ ಮೇಲೆ ಲೇಪಿಸುವುದರಿಂದ ಬೇಗ ಗುಣವಾಗುತ್ತವೆ

11 ದಾಲ್ಚಿನ್ನಿ ತೈಲವನ್ನು ಚೇಳು ಕಡಿದ ಜಾಗದ ಮೇಲೆ ಲೇಪಿಸುತ್ತಾರೆ



# ದಾಸವಾಳ

| | |
|---|---|
| ವೈಜ್ಞಾನಿಕ ಹೆಸರು | ಹೈಬಿಸ್ಕಸ್ ರೊಸಾ-ಸೈನೆನ್ಸಿಸ್<br>[Hibisus rosa-sinensis L ] |
| ಸಸ್ಯದ ಕುಟುಂಬ | ಮಾಲ್ವೇಸಿ<br>[Malvaceae] |
| ಕನ್ನಡದ ಇತರ ಹೆಸರುಗಳು | ಕೆಂಪು ದಾಸವಾಳ, ಕೆಂಪು ಪುಂಡರಿಕ, ದಾಸವಾಳ, ದಾಸಾನಿಹೂ, ಬಿಳಿದಾಸವಾಳ |
| ಇತರ ಭಾಷೆಯ ಹೆಸರುಗಳು | ಸಂ. - ಜಪಾಪುಷ್ಪ, ರುದ್ರಪುಷ್ಪ<br>ಹಿಂ - ಜಸುನ್, ಜಸಂಡ್, ಗುಧಾಲ್<br>ತ. - ಚೆಂಬರತ್ತಿ ಪೂ, ಸವತ್ ಪೂ,<br>ತೆ. - ದಾಸನಪೂ, ದಾನಚೆಟ್ಟು, ಜಪಪುಷ್ಪಮು, ಮಂದಾರ<br>ಇಂ - ಶೋಪ್ಲವರ್, ಚೈನಾರೋಸ್ |

**ಪರಿಚಯ**

ಮೂಲತಃ ಚೀನಾ ದೇಶದ ದಾಸವಾಳ ಗಿಡವನ್ನು ಮುಖ್ಯವಾಗಿ ಅಲಂಕಾರಕ್ಕಾಗಿ, ಬಣ್ಣ ಬಣ್ಣದ ಹೂಗಳಿಗಾಗಿ ಉದ್ಯಾನವನಗಳಲ್ಲಿ ಬೆಳೆಸುತ್ತಾರೆ. ದಾಸವಾಳದ ಹಲವಾರು ಪ್ರಭೇದಗಳು ಮತ್ತು ತಳಿಗಳು ಬೇಸಾಯದಲ್ಲಿವೆ ಅವುಗಳಲ್ಲಿ ಹೈಬಿಸ್ಕಸ್ ರೋಸಾ-ಸೈನೆಸ್ಸಿಸ್ ಎಂಬ ಸಸ್ಯವನ್ನು ಔಷಧ ತಯಾರಿಕೆಯಲ್ಲಿ ಮುಖ್ಯವಾಗಿ ಬಳಸಲಾಗುತ್ತಿದೆ.

ಇದು ಸಾಮಾನ್ಯವಾಗಿ ಪೊದೆಯಂತೆ ಬೆಳೆಯುತ್ತದೆ. ಗಟ್ಟಿಯಾದ ಕಾಂಡದ ಮೇಲೆ ಸರಳವಾದ ಹೃದಯದಾಕಾರದ, ಅಂಡಾಕಾರದ ಎಲೆಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ ಎಲೆಯು ಅಂಚು



ಚಿತ್ರ 59 ದಾಸವಾಳ - ಹೂ ಇರುವ ರೆಂಬೆ

ಹಲ್ಲಿನಂತಿರುತ್ತದೆ. ದ್ವಿಲಿಂಗಿ ಹೂಗಳು ಎಲೆಯ ಕಂಕುಳಲ್ಲಿ ಒಂಟಿಯಾಗಿರುತ್ತವೆ ಹೂವಿನ ಬಣ್ಣ ಬಿಳಿ, ಕೆಂಪು ಇಲ್ಲವೆ ಗುಲಾಬಿಯಾಗಿರುತ್ತದೆ ಹೂವಿನಲ್ಲಿ ಹಲವು ಉಪರಿಪುಷ್ಪಪತ್ರಕಗಳು, 5 ಪುಷ್ಪಪತ್ರಕಗಳು ಮತ್ತು 5 ದಳಗಳಿರುತ್ತವೆ ಹಲವಾರು ಕೇಸರಗಳ, ಕೇಸರನಳಿಕೆ ಬೆಸೆದುಕೊಂಡು ಕೇಸರ ಕೊಳವೆಯಾಗಿರುತ್ತದೆ ಈ ಕೊಳವೆಯ ಮೂಲಕ ಶಲಾಕೆ ಹೊರಚಾಚಿರುತ್ತದೆ ಅಂಡಾಶಯದಲ್ಲಿ 5 ಕೋಣೆಗಳಿರುತ್ತವೆ

ಔಷಧ ಪ್ರಯೋಗಗಳಲ್ಲಿ ಬಿಳಿದಾಸವಾಳ ಶ್ರೇಷ್ಠವೆಂಬ ನಂಬಿಕೆಯಿದೆ ಆದುದರಿಂದ ಬಿಳಿದಾಸವಾಳವನ್ನು ಹೆಚ್ಚಾಗಿ ಬಳಸಲಾಗುತ್ತಿದೆ ಚಿಕಿತ್ಸಾ ಪ್ರಯೋಗಗಳಲ್ಲಿ ಎಲ್ಲೆಲ್ಲಿ ಬಿಳಿ ಅಥವಾ ಕೆಂಪು ದಾಸವಾಳಗಳನ್ನು ಬಳಸಬೇಕೆಂದು ತಿಳಿಸಲಾಗಿದೆಯೋ ಆಯಾಯ ಪ್ರಯೋಗಗಳಲ್ಲಿ ಅದೇ ಮೂಲಿಕೆಯನ್ನು ಬಳಸುವುದರಿಂದ ಹೆಚ್ಚಿನ ಪ್ರಯೋಜನವುಂಟಾಗುತ್ತದೆ ತಿಳಿಸಿಲ್ಲದ ಕಡೆಗಳಲ್ಲಿ ಯಾವುದಾದರೊಂದನ್ನು (ಬಿಳಿ ಅಥವಾ ಕೆಂಪು) ಬಳಸಬಹುದು ಕೆಲವೊಮ್ಮೆ ಮೂಲಿಕೆಯು ದೊರೆಯದ ಸಂದರ್ಭಗಳಲ್ಲಿ ಯಾವುದು ಲಭ್ಯ (ಬಿಳಿ ಅಥವಾ ಕೆಂಪು) ವಿರುತ್ತದೆಯೋ ಅದನ್ನೇ ಬಳಸಿ ಚಿಕಿತ್ಸೆ ಮಾಡಿಕೊಳ್ಳಬಹುದೆಂದು ಅನುಭವಿಗಳು ಅಭಿಪ್ರಾಯ ಪಡುತ್ತಾರೆ. ತೋಟಗಳಲ್ಲಿ ಕಂಡುಬರುವ ದಾಸವಾಳದ ಮಿಶ್ರ ತಳಿಗಳು ಔಷಧಿ ತಯಾರಿಕೆಗೆ ಅಷ್ಟೊಂದು ಪ್ರಯೋಜನಕಾರಿಯಲ್ಲ

## ಉಪಯೋಗಗಳು

1 ಕೆಂಪು ದಾಸವಾಳದ 4-6 ಹೂಗಳನ್ನು ಕಿತ್ತು ತಂದು ಅದರ ತೊಟ್ಟಿನ ಭಾಗ ಕಿತ್ತುಹಾಕಿ ದಳದ ಭಾಗವನ್ನಷ್ಟೇ ತೆಗೆದುಕೊಂಡು ಅದಕ್ಕೆ 1 ತೊಲ ಕಲ್ಲುಸಕ್ಕರೆ ಸೇರಿಸಿ ತಿನ್ನಬೇಕು. ದಿವಸಕ್ಕೆ ಒಂದೆರಡು ಸಾರಿ ತೆಗೆದುಕೊಳ್ಳಬೇಕು 12 ವರ್ಷಕ್ಕಿಂತ ಕಡಿಮೆಯಿರುವವರಿಗೆ 1-2 ಹೂವು ಸಾಕು. ವಯೋಮಾನಕ್ಕೆ ತಕ್ಕಂತೆ ಹೆಚ್ಚಿಸಿ ಕೊಳ್ಳಬಹುದು ಹೀಗೆ 2-3 ದಿನ ತಿನ್ನುವುದರಿಂದ ಆಮಾತಿಸಾರ ಕಡಿಮೆಯಾಗುತ್ತದೆ ಪಥ್ಯಕ್ಕೆ ಮೊಸರು, ಅವಲಕ್ಕಿ, ಬೂರಾಸಕ್ಕರೆ

2 ಬಿಳಿದಾಸವಾಳದ ಬೇರು 1 ತೊಲದಷ್ಟು ತೆಗೆದುಕೊಂಡು ಸ್ವಲ್ಪ ಮಜ್ಜಿಗೆಯಲ್ಲಿ ಅರೆದು ಅದಕ್ಕೆ ಇನ್ನಷ್ಟು ಮಜ್ಜಿಗೆ ಸೇರಿಸಿ ಕದಡಿ ಪ್ರತಿನಿತ್ಯ ಕುಡಿಯಬೇಕು ಇದರಿಂದ ಮೂತ್ರಾಶ್ಮರಿ (ಮೂತ್ರನಾಳದಲ್ಲಿ ಕಲ್ಲು) ಪರಿಹಾರವಾಗುತ್ತದೆ ಇದೇ ಚಿಕಿತ್ಸೆ ಮಧುಮೇಹದ ರೋಗಕ್ಕೂ ಉಪಯೋಗವಾಗುತ್ತದೆ

3 ಹೂವಿನ ರಸ ಸೇವನೆಯಿಂದ ಸುಸ್ತು, ದಣಿವು ಪರಿಹಾರವಾಗುತ್ತದೆ.

4 ಹೂವನ್ನು ಗೋಮೂತ್ರದಲ್ಲಿ ಅರೆದು ತಲೆಗೆ ಲೇಪಿಸುವುದರಿಂದ ಕೂದಲು ಉದುರುವುದು ಕಡಿಮೆಯಾಗುತ್ತದೆ

5 ಹೂವಿನ ರಸಕ್ಕೆ ಎಳ್ಳೆಣ್ಣೆ ಸೇರಿಸಿ ತಯಾರಿಸಿದ ತೈಲವನ್ನು ತಲೆಗೆ ಹಚ್ಚುವುದರಿಂದ ಕಣ್ಣುರಿ, ತಲೆನೋವು, ಮುಂತಾದ ಶಿರರೋಗಗಳು ವಾಸಿಯಾಗುತ್ತವೆ

6 ಹೂವಿನ ದಳ ಅಥವಾ ಎಲೆಯನ್ನು ಜಜ್ಜಿರಾಗಿ ಹಿಟ್ಟಿನೊಡನೆ ಸೇರಿಸಿ ರೊಟ್ಟಿ ಮಾಡಿ ತಿನ್ನುವುದರಿಂದ ಉನ್ಮಾದ, ಮೆದುಳಿನ ದೌರ್ಬಲ್ಯ, ರಕ್ತಭೇದಿ, ರಕ್ತಮೂಲ, ಹೃದ್ರೋಗ ಮುಂತಾದವುಗಳು ಗುಣವಾಗುವುದಿಲ್ಲದೆ, ರಕ್ತವೂ ಶುದ್ಧಿಯಾಗುತ್ತದೆ

7 ಹೂವಿನ ಗುಲ್ಕನ್ ಮಾಡಿ ಸೇವಿಸುವುದರಿಂದ ಸಂಭೋಗ ಶಕ್ತಿ ವೃದ್ಧಿಯಾಗುತ್ತದೆ.

8 ಹೂವಿನ ರಸವನ್ನು ಹಾಲಿನೊಡನೆ ಸೇವಿಸುವುದರಿಂದ ರಕ್ತ ಪ್ರದರ ಮತ್ತು ಸಾಮಾನ್ಯ ಜ್ವರ ಗುಣವಾಗುತ್ತದೆ

9 ಬಿಳಿದಾಸವಾಳದ ಹತ್ತೆಂಟು ಹೂವುಗಳ ದಳಕ್ಕೆ $^1/_2$ ತೊಲ ಕಾಲ್ಪಿ ಕಲ್ಲುಸಕ್ಕರೆ $^1/_4$ ತೊಲೆ ಕಲ್ಲುನಾರನ್ನು ಸೇರಿಸಿ ಹಸುವಿನ ಹಾಲಿನಲ್ಲೆರೆದು ನಿತ್ಯ ಬೆಳಗ್ಗೆ ಕುಡಿಯುತ್ತಿದ್ದರೆ ರಕ್ತಪ್ರಮೇಹ, ಉರಿ ಮೂತ್ರ ಪರಿಹಾರವಾಗುತ್ತದೆ

10 ಬಿಳಿದಾಸವಾಳದ ಹೂವನ್ನು ಕೊಬ್ಬರಿ ಎಣ್ಣೆಯಲ್ಲಿ ಅರೆದು ಬಿಸಿಮಾಡಿ

1-2 ವಾರ ಗಂಡಾಮಾಲೆಯ ಮೇಲೆ ಲೇಪಿಸುವುದರಿಂದ ಗಂಡಾಮಾಲೆ ವಾಸಿಯಾಗುತ್ತದೆ

11 ಬಿಳಿದಾಸವಾಳದ ಹೂ ಮತ್ತು ಗರಿಕೆಹುಲ್ಲಿನ ರಸವನ್ನು ಕೊಬ್ಬರಿ ಎಣ್ಣೆಯಲ್ಲಿ ಕಾಯಿಸಿ ತೈಲವಾಕ ಮಾಡಿಕೊಂಡು ಬೆಂಕಿ ತಾಗಿ ಹುಣ್ಣಾಗಿರುವ ಕಡೆ ಲೇಪಿಸುವುದರಿಂದ ಬೇಗ ಗಾಯ ವಾಸಿಯಾಗುತ್ತದೆ.

12 ಪ್ರತಿದಿವಸ ಒಂದು ಹಿಡಿ ಬಿಳಿದಾಸವಾಳದ ಸೊಪ್ಪನ್ನು ಸಣ್ಣಗೆ ಚೂರು ಮಾಡಿ ಹಳೇ ಅಕ್ಕಿಯ ಹಿಟ್ಟಿನೊಂದಿಗೆ ಬೆರೆಸಿ ಮಾಡಿದ ರೊಟ್ಟಿಯನ್ನು ಒಂದು ತಿಂಗಳು ತಿನ್ನುವುದರಿಂದ ವೀರ್ಯ ವೃದ್ಧಿಯಾಗುತ್ತದೆ

## ಪಶುರೋಗ ಚಿಕಿತ್ಸೆಯಲ್ಲಿ

1 10 ಬಿಳಿದಾಸವಾಳದ ಎಲೆ, ಎರಡು ಹಿಡಿ ಬೇರು ಮತ್ತು ನಾಲ್ಕು ಹಿಡಿ ತುಳಸಿ ಎಲೆ ಇವುಗಳನ್ನು 1 ಪಾವು ಹಾಲಿಗೆ ಹಾಕಿ ಕುದಿಸಿ ಹಾಲನ್ನು ಮಾತ್ರ ಕುಡಿಸುವುದರಿಂದ ಹೊಟ್ಟೆಯುಬ್ಬರ ವಾಸಿಯಾಗುತ್ತದೆ

2 ಬಿಳಿದಾಸವಾಳದ ಸೊಪ್ಪು 100ಗ್ರಾಂ, ಹಾವುಮೆಕ್ಕೆಬಳ್ಳಿ 100ಗ್ರಾಂ ಮತ್ತು ತಲಾ 1ತೊಲ ಲವಂಗ, ಬಜೆ, ಬಾಲಮೆಣಸು, ಪಚ್ಚೆ ಕರ್ಪೂರ, ಶುಂಠಿ, ಇಂಗು, ತಾಟಿಬೆಲ್ಲ ಮತ್ತು 1 ಅಚ್ಚು ಬೆಲ್ಲ ಇವೆಲ್ಲವನ್ನು ಒಂದು ಸೇರು ಹುರುಳಿ ಕಾಳಿನ ರಸ (ಕಟ್ಟು) ಕ್ಕೆ ಸೇರಿಸಿ ಒಂದು ಸಾರಿಗೆ ಒಂದು ಗೊಟ್ಟದಂತೆ ದಿವಸಕ್ಕೆ ಎರಡು ಬಾರಿಯಂತೆ 2-3 ದಿವಸ ಕುಡಿಸುವುದರಿಂದ ಪಿಂಜರಿ ವಾಸಿಯಾಗುತ್ತದೆ.

3 ಬಿಳಿದಾಸವಾಳದ ಬೇರು ಎರಡು ಹಿಡಿಯಷ್ಟು ತೆಗೆದುಕೊಂಡು ಚೆನ್ನಾಗಿ ಅರೆದು ಮಜ್ಜಿಗೆ ಸೇರಿಸಿ ದಿವಸಕ್ಕೆ ಎರಡು ಹೊತ್ತಿನಂತೆ 2-3 ದಿವಸ ಕುಡಿಸುವುದರಿಂದ ರಕ್ತಯುಕ್ತ ಹಾಲು ಕರೆಯುವುದು (ಕೆಚ್ಚಲಬಾವು) ವಾಸಿಯಾಗುತ್ತದೆ





ಚಿತ್ರ 60 ದಾಳಿಂಬೆ - ಹೂ ಮತ್ತು ಕಾಯಿಗಳಿರುವ ರೆಂಬೆ

# ದಾಳಿಂಬೆ

| | |
|---|---|
| ವೈಜ್ಞಾನಿಕ ಹೆಸರು | ಪ್ಯುನಿಕ ಗ್ರಾನೇಟಮ್ [Punica granatum L ] |
| ಸಸ್ಯದ ಕುಟುಂಬ | ಪ್ಯುನಿಕೇಸಿ [Punicaceae] |
| ಕನ್ನಡದ ಇತರ ಹೆಸರುಗಳು | ದಾಡಿಂಬ, ದಾಡಿಮ್ಮ |
| ಇತರ ಭಾಷೆಯ ಹೆಸರುಗಳು | ಸಂ. - ದಾಡಿಮ<br>ಹಿಂ - ಅನರ್-ಕೆ-ವರ್<br>ತ - ಮದಲೈ, ಮಾದಲಂ<br>ತೆ - ದಾಲಿಮ್ಮ<br>ಇಂ - ಪೊಮಗ್ರನೇಟ್ |

**ಪರಿಚಯ**

ಇರಾನ್ ಮೂಲದ ಈ ಮರವನ್ನು ಭಾರತಾದ್ಯಂತ ಹಣ್ಣಿಗಾಗಿ ಬೆಳೆಸಲಾಗುತ್ತಿದೆ. ಭಾರತದಲ್ಲಿ ಹಲವಾರು ದಾಳಿಂಬೆ ತಳಿಗಳು ಬೇಸಾಯದಲ್ಲಿವೆ ಕರ್ನಾಟಕದಲ್ಲಿ ಬೇಸಾಯದಲ್ಲಿರುವ ಪ್ರಮುಖ ತಳಿಗಳೆಂದರೆ ಚಿಂತಾಮಣಿ, ಮಧುಗಿರಿ ಮತ್ತು ಜರಗಿನ ಹಳ್ಳಿ ತಳ್ಳಿಗಳು ಚಳಿಗಾಲ ತೀವ್ರವಾಗಿರುವಂಥ ಪ್ರದೇಶಗಳಲ್ಲಿ ಇದು ಪರ್ಣಪಾತಿ ಗಿಡ/ ಮರವಾಗಿ ಬೆಳೆದರೂ ಉಳಿದೆಡೆಗಳಲ್ಲಿ ನಿತ್ಯ ಹರಿದ್ವರ್ಣದ ಗಿಡ/ಮರವಾಗಿ ಬೆಳೆಯುತ್ತದೆ ಕಿರು ರೆಂಬೆಗಳ ಮೇಲೆ ಮುಳ್ಳುಗಳಿರುತ್ತವೆ ಸರಳವಾದ ಎಲೆಗಳು ಅಭಿಮುಖವಾಗಿ ಜೋಡಣೆಯಾಗಿರುತ್ತವೆ. ಎಲೆಯು ಅಂಡಾಕಾರವಾಗಿರುತ್ತವೆ ಅದರ ಮೇಲ್ಭಾಗ ಹೊಳೆಯುತ್ತಿರುತ್ತದೆ ಹೂಗಳು ಒಂಟಿಯಾಗಿ ಇಲ್ಲವೆ 2-4ರ ಗುಂಪುಗಳಲ್ಲಿ ಬಿಡುತ್ತವೆ ಹೂಗಳ ಬಣ್ಣ ಕೆಂಪು, ಹಳದಿ ಇಲ್ಲವೆ ಕಿತ್ತಳೆ ಮಿಶ್ರಿತ ಕೆಂಪಾಗಿರುತ್ತದೆ. ಹಣ್ಣಿನ ಗಾತ್ರ 5-12ಸೆ.ಮೀ ಇರುತ್ತದೆ ಹಣ್ಣಿನ ಒಳಭಾಗದ ತೆಳುಪಟಲಗಳಿಂದಾಗಿ ಅನೇಕ ಕೋಣೆಗಳಾಗಿ ವಿಭಾಗಿತವಾಗಿರುತ್ತದೆ.

ಕಾಯಿಯಲ್ಲಿ ಹಲವಾರು ಬೀಜಗಳಿರುತ್ತವೆ ಒಂದೊಂದು ಬೀಜದ ಸುತ್ತ ರಸಭರಿತ 'ಏರಿಲ್' ಎಂಬ ಹೊದಿಕೆಯಿರುತ್ತದೆ ಇದೇ ನಾವು ತಿನ್ನುವ ಭಾಗ

## ಉಪಯೋಗಗಳು

1 ದಾಳಿಂಬೆ ಗಿಡದ ಬೇರನ್ನು ನೀರಿನೊಡನೆ ಅರೆದು ಹಣೆಗೆ ಲೇಪಿಸುವುದರಿಂದ ಆಯಾಸದಿಂದ ಅಥವಾ ಉಷ್ಣದಿಂದ ಬಂದಿರುವ ತಲೆನೋವು ವಾಸಿಯಾಗುತ್ತದೆ.

2 ದಾಳಿಂಬೆ ಬೇರು, ಜೀರಿಗೆ, ಧನಿಯ ಮತ್ತು ಗುಲಾಬಿ ಗಿಡದ ಬೇರನ್ನು ಹಿಂದಿನ ದಿನ ನೀರಿನಲ್ಲಿ ನೆನೆಹಾಕಿ ನೀರನ್ನು ಬಸಿದುಕೊಂಡು ಅದಕ್ಕೆ ಸಕ್ಕರೆ ಸೇರಿಸಿ ಕುಡಿಯುವುದರಿಂದ ಸೆಖೆಗುಳ್ಳೆಗಳು ಕಡಿಮೆಯಾಗುತ್ತವೆ

3 ದಾಳಿಂಬೆ ಎಲೆಗಳನ್ನು ಅರೆದು ಬಿಲ್ಲೆಮಾಡಿಕೊಂಡು, ಆ ಬಿಲ್ಲೆಯನ್ನು ರಾತ್ರಿ ಮಲಗುವಾಗ ಕಣ್ಣಿನ ಮೇಲಿಟ್ಟು ಬಟ್ಟೆಯಿಂದ ಕಟ್ಟಿಕೊಂಡು ಮಲಗಿದರೆ ಕಣ್ಣಿನಲ್ಲಿ ಬಂದಿರುವ ಕೆಂಪು ಬಣ್ಣವು ಹೋಗುತ್ತದೆ

4 ದಾಳಿಂಬೆ ಎಲೆಗಳನ್ನು ಅರೆದು ಲೇಪಿಸಿದರೆ ಸುಟ್ಟ ಗಾಯ ಮತ್ತು ಸಿಡಿಮದ್ದಿನಿಂದ ಸುಟ್ಟ ಗಾಯದ ಉರಿ ಕಡಿಮೆಯಾಗುತ್ತದೆ

5 ದಾಳಿಂಬೆ ಹೂವಿನ ರಸವನ್ನು ಮಾಡಿಕೊಂಡು 4-6 ತೊಟ್ಟುಗಳನ್ನು ಮೂಗಿನಿಂದ ರಕ್ತ ಸುರಿಯಲಾರಂಭಿಸಿದಾಗ ಮೂಗಿಗೆ ಹಾಕುವುದರಿಂದ ರಕ್ತ ಸುರಿಯುವುದು ನಿಲ್ಲುತ್ತದೆ

6 ದಾಳಿಂಬೆ ಹೂವನ್ನು ಅರೆದು ಕುಡಿಯುವುದರಿಂದ ರಕ್ತಾತಿಸಾರ (Dysentery) ನಿಲ್ಲುತ್ತದೆ

7 ದಾಳಿಂಬೆ ಹೂವನ್ನು ಮೊಗ್ಗಾಗಿರುವಾಗ ತಂದು ಒಣಗಿಸಿ ಚೂರ್ಣ ಮಾಡಿಟ್ಟುಕೊಂಡು, ದಿವಸಕ್ಕೆ ಎರಡು ಹೊತ್ತು ತೊಗರಿಕಾಳಿನ ಪ್ರಮಾಣದಷ್ಟು ಸೇವಿಸುವುದರಿಂದ ಕೆಮ್ಮು ಗುಣವಾಗುತ್ತದೆ

8 ದಾಳಿಂಬೆಯ ಎಳೆ ಕಾಯಿಯನ್ನು ಅಥವಾ ಮಾಗಿದ ಹಣ್ಣಿನ ಮೇಲಿನ ಸಿಪ್ಪೆಯನ್ನು ಚೆನ್ನಾಗಿ ಅರೆದು ಮಜ್ಜಿಗೆಯೊಡನೆ ದಿವಸಕ್ಕೆ ಎರಡು ವೇಳೆ ತೆಗೆದುಕೊಳ್ಳುವುದರಿಂದ ರಕ್ತಭೇದಿ ನಿಲ್ಲುತ್ತದೆ

9 ದಾಳಿಂಬೆ ಹಣ್ಣು ಮತ್ತು ಶುಂಠಿಯನ್ನು ಒಟ್ಟಿಗೆ ಸೇವಿಸುವುದರಿಂದ ಮೂತ್ರಕಟ್ಟು ಪರಿಹಾರವಾಗುತ್ತದೆ

10 8 ಭಾಗ ದಾಳಿಂಬೆ ಹಣ್ಣಿನ ರಸಕ್ಕೆ, ಒಂದು ವರಹ ತೂಕ (4 5 ಗ್ರಾಂ) ಜೀರಿಗೆ ಚೂರ್ಣ ಸೇರಿಸಿ ಅರುಚಿಯಾದವರಿಗೆ ಕುಡಿಸಿದರೆ ನಾಲಿಗೆಗೆ ರುಚಿ ಉಂಟಾಗುತ್ತದೆ

11 ಹುಳಿಯಾದ ದಾಳಿಂಬೆ (ಕೆಲವು ನಾಟಿದಾಳಿಂಬೆ ಹಣ್ಣಿನ ರಸ ಹುಳಿಯಾಗಿರುತ್ತದೆ) ರಸದಿಂದ ಹಲ್ಲುಜ್ಜುವುದರಿಂದ ಹಲ್ಲುಗಳು ಹೊಳಪಾಗುತ್ತವೆ ಆದರೆ ಈ ಪ್ರಯೋಗವನ್ನು ಹಲವು ದಿವಸ ಮುಂದುವರೆಸಿದರೆ ಹಲ್ಲಿನ ಕವಚದ (Enamel) ಸವೆತವುಂಟಾಗುತ್ತದೆ.

12 ಹಣ್ಣಿನ ರಸ ಸೇವನೆಯಿಂದ ಪಿತ್ತ ಶಮನವಾಗುತ್ತದೆ ಮತ್ತು ರಕ್ತ ಶುದ್ಧಿಯಾಗುತ್ತದೆ.

13 ದಾಳಿಂಬೆ ಸಿಪ್ಪೆ $^{1}/_{4}$ ತೊಲ, ಅತಿಮಧುರ 2 ಆಣೆ ತೂಕ, ತಾರೇಕಾಯಿ 2 ಆಣೆ ತೂಕ ಇವುಗಳೆನ್ನೆಲ್ಲ ಕುಟ್ಟಿ ಕಷಾಯ ಮಾಡಿ 1 ತೊಲ ಕಲ್ಲುಸಕ್ಕರೆ ಸೇರಿಸಿ ದಿವಸಕ್ಕೆ ಎರಡು ಹೊತ್ತಿನಂತೆ 3-4 ದಿವಸ ಸೇವಿಸುವುದರಿಂದ ಒಣಕೆಮ್ಮು ವಾಸಿಯಾಗುತ್ತದೆ

14 ದಾಳಿಂಬೆ ಹಣ್ಣಿನ ಸಿಪ್ಪೆಯನ್ನು ಸಾಸಿವೆ ಎಣ್ಣೆಯಲ್ಲಿ ಕರಿಯಾಗುವಂತೆ ಹುರಿದು, ಕರಕು ಮಾಡಿ ಶಿಶ್ನಕ್ಕೆ ಲೇಪಿಸುತ್ತಾ ಇರಲು ಕೆಲವು ದಿವಸದಲ್ಲಿ, ಶಿಶ್ನಕ್ಕೆ ಘಡುಸುತನ ಬರುತ್ತದೆ ಇದೇ ಕರಕನ್ನು ಶಿಥಿಲವಾದ ಸ್ತನಕ್ಕೂ ಹಚ್ಚಿದರೆ ಗಟ್ಟಿಯಾಗುತ್ತದೆ

## ಪಶುರೋಗ ಚಿಕಿತ್ಸೆಯಲ್ಲಿ

ದಾಳಿಂಬೆ ಸೊಪ್ಪಿನ ರಸವನ್ನು ದನುರ್ವಾಯು ರೋಗದಲ್ಲಿ ಬಳಸುತ್ತಾರೆ. ಚಿಕಿತ್ಸಾ ಕ್ರಮಕ್ಕೆ ಬುಗುಡಿಹಂಬಿನ ಉಪಯೋಗಗಳನ್ನು ನೋಡುವುದು.



# ದೊಡ್ಡಪತ್ರೆ

| | |
|---|---|
| ವೈಜ್ಞಾನಿಕ ಹೆಸರು | ಕೊಲಿಯಸ್ ಆಂಬೋಯ್ನಿಕಸ್<br>[Coleus amboinicus Lour]<br>= ಕೊ. ಆರೊಮ್ಯಾಟಿಕಸ್<br>[=C aromaticus Benth ]<br>=ಪ್ಲೆಕ್ಟ್ರಾಂಥಸ್ ಆಂಬೊಯ್ನಿಕಸ್<br>[=Plectranthus amboinicus (Lour ) Spreng ] |
| ಸಸ್ಯದ ಕುಟುಂಬ | ಲ್ಯಾಮಿಯೇಸಿ<br>[Lamiaceae] |
| ಕನ್ನಡದ ಇತರ ಹೆಸರುಗಳು | ಕರ್ಪೂರವಲ್ಲಿ |
| ಇತರ ಭಾಷೆಯ ಹೆಸರುಗಳು | ಸಂ. - ಅಸ್ಮಂತಕ, ಪಾಷಾಣಭೇದಿ, ಕರ್ಪೂರವಳ್ಳಿ, ಹಿಮಸಾಗರ<br>ಹಿಂ - ಪಥೋರ್ ಚುರ್, ಅಂರೋಡ, ಪಂಜರಿ-ಕಾ-ಪಟ್ಟ<br>ತ. - ಕರ್ಪೂರವಲ್ಲಿ<br>ತೆ. - ಓಮಮು ಆಕು<br>ಇ. - ಇಂಡಿಯನ್ ಬೊರೇಜ್, ಕಂಟ್ರಿ ಬೊರೇಜ್ |

**ಪರಿಚಯ**

ಈ ಮೂಲಿಕೆಯನ್ನು ತೋಟಗಳಲ್ಲಿ ಅಲಂಕಾರಿಕ ಹಾಗೂ ಔಷಧಿಯ ಗಿಡವಾಗಿ ಬೆಳೆಸಲಾಗುತ್ತಿದೆ ಗಿಡದ ಕಾಂಡ ರಸಭರಿತವಾಗಿರುತ್ತದೆ ನೆಲಕ್ಕೆ ತಾಗುವ ಗಿಣ್ಣುಗಳಿಂದ ಬೇರುಗಳು ಮೊಳೆಯುತ್ತವೆ ಕಾಂಡವು ಬುಡದ ಕಡೆ

ನುಣುವಾಗಿದ್ದು ಹೊಳಪಿನಿಂದ ಕೂಡಿರುತ್ತದೆ ಆದರೆ ತುದಿ ಭಾಗದ ಕಡೆ ರೋಮಗಳು ಮತ್ತು ಗ್ರಂಥಿ ರೋಮಗಳಿರುವುದರಿಂದ ಹೊಳಪುತನ ಕಂಡುಬರುವುದಿಲ್ಲ ರಸಭರಿತ ಎಲೆಗಳು ಅಗಲ-ಅಂಡಾಕಾರವಾಗಿರುತ್ತವೆ ಎಲೆಯ ಅಂಚು ಹಲ್ಲಿನಂತಿರುತ್ತದೆ ಕಾಂಡದ ತುದಿಯಿಂದ ಬರುವ ಅಂತ್ಯಾರಂಭಿ ಪುಷ್ಪಮಂಜರಿಯಲ್ಲಿ ತಿಳಿನೇರಳೆ ಬಣ್ಣದ ಹೂಗಳು ಜೋಡಣೆಯಾಗಿರುತ್ತವೆ. ಗಿಡದ ಎಲ್ಲಾ ಭಾಗದಿಂದಲೂ ಒಂದು ರೀತಿಯ ಸುವಾಸನೆ ಹೊಮ್ಮುತ್ತಿರುತ್ತದೆ

## ಉಪಯೋಗಗಳು

**ಸೂಚನೆ** . ಅತಿಯಾದ ಪ್ರಮಾಣದಲ್ಲಿ ಎಲೆ ಮತ್ತು ಎಲೆಯ ಕಷಾಯ ಸೇವನೆಯಿಂದ ಅಮಲೇರುವುದರಿಂದ ಕಡಿಮೆ ಪ್ರಮಾಣದಲ್ಲಿ ಸೇವಿಸುವುದು ಒಳ್ಳೆಯದು

1 ದೊಡ್ಡಪತ್ರೆ ಎಲೆಗಳನ್ನು ದಿವಸಕ್ಕೆ 3 ವೇಳೆ ಅಗಿದು ತಿನ್ನುವುದರಿಂದ ಜಿವ್ಹಾಮೂಲಸ್ಥ ಗ್ರಂಥಿಗಳ ಊತ (Tonsillitis) ವಾಸಿಯಾಗುತ್ತದೆ.

2 ದೊಡ್ಡಪತ್ರೆ ಎಲೆಯ ರಸ ½ ಚಮಚ, ಒಂದು ಸಣ್ಣ ಚಿಟಿಕೆ ಹಿಪ್ಪಲಿ ಪುಡಿ ಮತ್ತು ಸ್ವಲ್ಪ ಜೇನುತುಪ್ಪ ಇವುಗಳನ್ನು ಸೇರಿಸಿ ದಿವಸಕ್ಕೆ ಎರಡು ವೇಳೆ ಕುಡಿಸುವುದರಿಂದ ಮಕ್ಕಳಲ್ಲಿ ಕಾಣಿಸಿಕೊಳ್ಳುವ ಕೆಮ್ಮಿನಿಂದ ಕೂಡಿದ ಜ್ವರ ವಾಸಿಯಾಗುತ್ತದೆ

3 ದೊಡ್ಡಪತ್ರೆ ಎಲೆಯುನ್ನು ಜೇನುಹುಳು, ಝರಿ, ಚೇಳು ಮುಂತಾದುವುಗಳು ಕಡಿದ ಜಾಗದ ಮೇಲೆ ಲೇಪಿಸುತ್ತಾರೆ.

4 ಎಲೆಯನ್ನು ಅರೆದು ಸಂಧಿವಾತದಿಂದಾಗಿ ಊತ ಬಂದಿರುವ ಕೀಲುಗಳ ಮೇಲೆ ಲೇಪಿಸುತ್ತಾರೆ

5 ಮೈಮೇಲೆ ಪಿತ್ತದ ಗಂಧೆ ಕಾಣಿಸಿಕೊಂಡಾಗ ಎಲೆಯ ಚಟ್ನಿ ಮಾಡಿ ತಿನ್ನಿಸಿ ಮತ್ತೆ ಕೆಲವು ಎಲೆಗಳನ್ನು ಅರೆದು ಮೈಗೆ ಲೇಪಿಸುತ್ತಾರೆ.

6 ಎಲೆಯನ್ನು ಅರೆದು ದಿವಸಕ್ಕೆ ಸುಮಾರು 12 ಗ್ರಾಂ ಸೇವಿಸುವುದರಿಂದ ಅರುಚಿ, ಅಜೀರ್ಣ, ಯಕೃತ್ ವಿಕಾರಗಳು, ಉದರಶೂಲೆ, ಬೇಧಿ ಮತ್ತು ಕಾಲರ ರೋಗಗಳು ವಾಸಿಯಾಗುತ್ತವೆ.

7 ಎಲೆಯನ್ನು ಪ್ರತಿ ದಿವಸ ಚಟ್ನಿ ಮಾಡಿ ಸೇವಿಸುವುದರಿಂದ ಮೂತ್ರಕೋಶದ ಕಲ್ಲು ಕರಗಿಹೋಗುತ್ತದೆ





ಚಿತ್ರ 62. ನಾಡು ಬಾದಾಮಿ - ಪುಷ್ಪಮಂಜರಿ ಮತ್ತು ಕಾಯಿಗಳಿರುವ ರೆಂಬೆ

# ನಾಡು ಬಾದಾಮಿ

| | |
|---|---|
| ವೈಜ್ಞಾನಿಕ ಹೆಸರು | ಟರ್ಮಿನಾಲಿಯ ಕಟಪ್ಪ<br>[Terminalia catappa L ] |
| ಸಸ್ಯದ ಕುಟುಂಬ | ಕಾಂಬ್ರಿಟೇಸಿ<br>[Combretaceae] |
| ಕನ್ನಡದ ಇತರ ಹೆಸರುಗಳು | ಊರುಬಾದಾಮಿ, ಕಾಡುಬಾದಾಮಿ |
| ಇತರ ಭಾಷೆಯ ಹೆಸರುಗಳು | ಸಂ - ಗ್ರಹದ್ರುಮ<br>ಹಿಂ - ದೇಶಿಬಾದಾಮ್, ಜಂಗ್ಲಿಬಾದಾಮ್<br>ತ - ನಟ್ಟುವಾದುಮ್ಮೈ, ಆಮಂಡಿಮರಂ<br>ತೆ - ನಾಟುಬಾದಾಮು, ಇಂಗುಡಿ, ತವಸತರುವು<br>ಇಂ - ಇಂಡಿಯನ್ ಆಲ್ಮಂಡ್ ಟ್ರೀ |

**ಪರಿಚಯ**

ಈ ಮರದ ತೌರೂರು ಮೆಲಕ್ಕಾಸ್ ಮತ್ತು ಅಂಡಮಾನ್ ದ್ವೀಪ ಸಮೂಹವಾಗಿದೆ ಒಣಹವೆಯುಳ್ಳ ಪ್ರದೇಶದಲ್ಲಿ ಈ ಮರವು ಚೆನ್ನಾಗಿ ಬೆಳೆಯುತ್ತದೆ ಉದ್ಯಾನವನಗಳಲ್ಲಿ ಅಲಂಕಾರಿಕ ಮರವಾಗಿ ಮತ್ತು ರಸ್ತೆ ಬದಿಯಲ್ಲಿ ಸಾಲು ಮರವಾಗಿ ಈ ಮರವನ್ನು ಬೆಳೆಸಲಾಗುತ್ತಿದೆ.

ಈ ಮರವು ಸುಮಾರು 10-80 ಅಡಿ ಎತ್ತರಕ್ಕೆ ಬೆಳೆಯುತ್ತದೆ ಡಿಸೆಂಬರ್-ಜನವರಿಗಳಲ್ಲಿ ಎಲೆಗಳು ಉದುರಿ ಹೋಗುತ್ತವೆ ರೆಂಬೆಗಳು ಮೂಲ ಕಾಂಡದ ಮೇಲೆ ವರ್ತುಲವಾಗಿರುತ್ತವೆ ದೊಡ್ಡದಾದ ಅಂಡಾಕಾರದ ಎಲೆಗಳು ಕಿರುರೆಂಬೆಗಳ ತುದಿಯಲ್ಲಿ ಒತ್ತಾಗಿ, ಪರ್ಯಾಯವಾಗಿ ಜೋಡಣೆಯಾಗಿರುತ್ತವೆ ನಕ್ಷತ್ರಾಕಾರದ, ಸಣ್ಣದಾದ, ಬಿಳುಪಾದ ಹೂಗಳು,

6 ರಿಂದ 8 ಅಂಗುಲ ಉದ್ದದ ಅಂತ್ಯಾರಂಭಿ ಪುಷ್ಪಮಂಜರಿಯಲ್ಲಿ ಜೋಡಣೆಯಾಗಿರುತ್ತವೆ. ಕಾಯಿಗಳು ಬಹುಮಟ್ಟಿಗೆ ಬಾದಾಮಿ ಕಾಯಿಯನ್ನು ಹೋಲುತ್ತವೆ

## ಉಪಯೋಗಗಳು

1 ಚಿಗುರೆಲೆಗಳನ್ನು ಅರೆದು ಹಚ್ಚುವುದರಿಂದ ಇಸಬು, ಕಜ್ಜಿ, ಕುಷ್ಠ ಮುಂತಾದ ಚರ್ಮರೋಗಗಳು ವಾಸಿಯಾಗುತ್ತವೆ

2 ಚಿಗುರೆಲೆಗಳನ್ನು ಅರೆದು ತಿನ್ನಿಸುವುದರಿಂದ ಹೊಟ್ಟೆನೋವು ಮತ್ತು ತಲೆನೋವು ವಾಸಿಯಾಗುತ್ತದೆ



# ನುಗ್ಗೆಮರ

| | |
|---|---|
| ವೈಜ್ಞಾನಿಕ ಹೆಸರು | ಮೊರಿಂಗ ಒಲಿಫೆರ<br>[Moringa oleifera Lamk]<br>=ಮೊ ಟೆರಿಗೊಸ್ಪರ್ಮ<br>[=M pterygosperma Gaertn ] |
| ಸಸ್ಯದ ಕುಟುಂಬ | ಮೊರಿಂಗೇಸಿ<br>[Moringaceae] |
| ಕನ್ನಡದ ಇತರ ಹೆಸರುಗಳು | ನುಗ್ಗೇಕಾಯಿ ಮರ, ಮೋಚಕ ಮರ |
| ಇತರ ಭಾಷೆಯ ಹೆಸರುಗಳು | ಸಂ - ಶಿಗ್ರು, ಶೋಭಾಂಜನ<br>ತೀಕ್ಷ್ಣಗಂಧ, ಅಕ್ಷೀಬ, ಮೋಚಕ<br>ಹಿಂ - ಸಹಿಂಜನ್, ಸೊಂಜನ್<br>ತ - ಮುರಂಗೈ<br>ತೆ - ಸಾಜನ, ಮುನಗ<br>ಇಂ - ಡ್ರಂ ಸ್ಟೀಕ್ ಟ್ರೀ,<br>ಹಾರ್ಸ್ - ರ್‍ಯಾಡಿಶ್ |

**ಪರಿಚಯ**

ಮೂಲತಃ ಭಾರತ ದೇಶಕ್ಕೆ ಸೇರಿದ ನುಗ್ಗೆ ಮರವನ್ನು ತೋಟದಲ್ಲಿ ಮನೆಯ ಹಿತ್ತಲಿನಲ್ಲಿ ಬೆಳೆಸುತ್ತಾರೆ ಈ ಮರದ ಎಲೆಗಳನ್ನು ಮತ್ತು ಕಾಯಿಗಳನ್ನು ತರಕಾರಿಯಂತೆ ಬಳಸುತ್ತಾರೆ ಸುಮಾರು 10-15 ಅಡಿ ಎತ್ತರ ಬೆಳೆಯುತ್ತದೆ. ಸಂಯುಕ್ತ ಎಲೆಗಳ ತೊಟ್ಟು ದಪ್ಪನಾಗಿರುತ್ತದೆ ಹೂ ಬಿಡುವ ಕಾಲಕ್ಕೆ ಮೊದಲು ಮರದ ಎಲೆಗಳೆಲ್ಲವೂ ಉದುರಿಹೋಗುತ್ತವೆ, ಫೆಬ್ರುವರಿ-ಏಪ್ರಿಲ್ ತಿಂಗಳಿನಲ್ಲಿ ಜೇನಿನ ವಾಸನೆಯಿಂದ ಕೂಡಿದ ಬೆಳ್ಳಗಿನ ಹೂಗಳನ್ನು ಬಿಡುತ್ತದೆ ಕಾಯಿ ಡೋಲು ಬಾರಿಸುವ ಕಡ್ಡಿಯಂತೆ ಉದ್ದವಾಗಿರುತ್ತದೆ ಈ ಕಾರಣದಿಂದ ಈ ಮರಕ್ಕೆ 'ಡ್ರಂ ಸ್ಟಿಕ್ ಟ್ರೀ" ಎಂಬ ಇಂಗ್ಲೀಷ್ ಹೆಸರು ಬಂದಿರುವಂತೆ ತೋರುತ್ತದೆ. ಕಾಯಿಯಲ್ಲಿ ಹಲವಾರು ರೆಕ್ಕೆಗಳಿರುವ ಬೀಜಗಳಿರುತ್ತವೆ



ಚಿತ್ರ 63 : ನುಗ್ಗೆಮರ - ಎಲೆ ಮತ್ತು ಹೂಗಳಿರುವ ರೆಂಬೆ

## ಉಪಯೋಗಗಳು

1 ನುಗ್ಗೆಹೂವನ್ನು ಚೆನ್ನಾಗಿ ಕಾದಿರುವ ಒಂದು ಲೋಟ ಹಾಲಿಗೆ ಹಾಕಿ ಆರಿದ ನಂತರ ಹೂ ಸಮೇತ ಹಾಲನ್ನು ಕುಡಿಯುವುದರಿಂದ ಪಿತ್ತ ಶಮನವಾಗಿ ಧಾತು ವೃದ್ಧಿಯಾಗುವುದು.

2 ನುಗ್ಗೆಸೊಪ್ಪನ್ನು ಒಂದು ಹಿಡಿ ಪ್ರಮಾಣ ತೆಗೆದುಕೊಂಡು ಜಜ್ಜಿ ರಸಮಾಡಿಕೊಂಡು ಅದಕ್ಕೆ ಸಕ್ಕರೆ ಅಥವಾ ಜೇನುತುಪ್ಪ ಸೇರಿಸಿ ಬೆಳಗ್ಗೆ ಸಂಜೆ 1/2 ಔನ್ಸ್ ಕುಡಿಯುವುದರಿಂದ ಹೊಟ್ಟೆನೋವು ಗುಣವಾಗುತ್ತದೆ

3 ನುಗ್ಗೆಸೊಪ್ಪನ್ನು ಎದೆಹಾಲಿನಲ್ಲಿ ಅರೆದು ಹಣೆಗೆ ಪಟ್ಟು ಹಾಕುವುದರಿಂದ ತಲೆಸುತ್ತುವಿಕೆ ವಾಸಿಯಾಗುತ್ತದೆ

4 ನುಗ್ಗೆಮರದ ಗೋಂದು ಮತ್ತು ನುಗ್ಗೆ ಬೀಜವನ್ನು ತಂದು ಒಣಗಿಸಿ ಪುಡಿ ಮಾಡಿಟ್ಟುಕೊಂಡು ಪ್ರತಿ ರಾತ್ರಿ 5 ಗ್ರಾಂನಷ್ಟು ಪುಡಿಯನ್ನು ಹಾಲಗೆ ಸೇರಿಸಿ ಕುಡಿಯುವುದರಿಂದ ಧಾತು ಕಟ್ಟುವುದು ಸಂಭೋಗ ಸುಖಕರವಾಗುವುದು

5 ನುಗ್ಗೆಸೊಪ್ಪಿನ ರಸ 2 ತೊಲ, ಕಾಯಿಸಿದ ಹಸುವಿನ ಹಾಲು 1/2 ಪಾವು ಈ ಎರಡನ್ನು ಬೆರೆಸಿ ಮದ್ದೀಡಾದವರಿಗೆ (ಕೈಮುಸಕು) ಕುಡಿಸಿದರೆ ವಾಂತಿಯಾಗಿ ಮದ್ದು ಬೀಳುತ್ತದೆ

6 ನುಗ್ಗೆಚಕ್ಕೆ 1/4 ತೊಲದಷ್ಟು ತೆಗೆದುಕೊಂಡು, ಕೆನೆತೆಗೆದ ಹಾಲಿನಲ್ಲಿ ತೇಯ್ದು ಮೂರು ದಿವಸ ಕುಡಿಸಲು ಮಕ್ಕಳನ್ನು ಕಾಡುವಕೆಮ್ಮು ಕಡಿಮೆಯಾಗುತ್ತದೆ

7 ನುಗ್ಗೆಕಾಯಿ ಬೀಜ ಮತ್ತು ಮೂಲಂಗಿ ಬೀಜ ಇವುಗಳನ್ನು ಎಮ್ಮೆಯ ಮಜ್ಜಿಗೆಯಲ್ಲಿ ಅರೆದು ಲೇಪಿಸುವುದರಿಂದ ಗಂಡಮಾಲೆ ಮುಂತಾದ ಇತರ ಗಡ್ಡೆಗಳು ಕರಗುತ್ತವೆ

8 ನುಗ್ಗೆಮರದ ಬೇರನ್ನು ನೀರಿನೊಡನೆ ಅರೆದು ಮೈಗೆ ಹಚ್ಚುವುದರಿಂದ ನವೆ ಮತ್ತು ಮೈಮೇಲಿನ ಹುಳುಕಡ್ಡಿ ವಾಸಿಯಾಗುತ್ತದೆ ಬೇರಿನ ಗಂಧಕ್ಕೆ ಮೂಲಂಗಿ ರಸ ಸೇರಿಸಿ ಬೇಕಾದರೂ ಲೇಪಿಸಬಹುದು

9 ನುಗ್ಗೆಯ ಎಲೆಯನ್ನು ನೀರಿನೊಡನೆ ಅರೆದು ಕೆಲವು ಹನಿಗಳನ್ನು ಮೂಗಿಗೆ ಹಿಂಡಿದರೆ ಶೀತದ ತಲೆನೋವು ವಾಸಿಯಾಗುತ್ತದೆ

10 ನುಗ್ಗೆಎಲೆ ಮತ್ತು ಎಕ್ಕದ ಎಲೆಗಳನ್ನು ಅರೆದು ಲೇಪಿಸುವುದರಿಂದ ಮೂಲವ್ಯಾಧಿಯಲ್ಲಿ ಬರುವ ಮೊಳಕೆಗಳು ವಾಸಿಯಾಗುತ್ತವೆ ಈ ಚಿಕಿತ್ಸೆಯನ್ನು ಅನೇಕ ಸಲ ಯಶಸ್ವಿಯಾಗಿ ಪರೀಕ್ಷಿಸಲ್ಪಟ್ಟಿರುವುದಾಗಿ ಉಲ್ಲೇಖಿತವಾಗಿದೆ

11 ನುಗ್ಗೆಸೊಪ್ಪಿನ ರಸಕ್ಕೆ ಜೇನುತುಪ್ಪ ಸೇರಿಸಿ ಕಣ್ಣಿಗೆ ಹಚ್ಚಲು (ವಾತ, ಪಿತ್ತ ಮತ್ತು ಕಫ) ತ್ರಿದೋಷಗಳಿಂದುಂಟಾದ ಸಕಲ ನೇತ್ರರೋಗಗಳು ವಾಸಿಯಾಗುತ್ತವೆ

12 ನುಗ್ಗೆ ಬೇರಿನ ರಸ 25 ಮಿ ಲೀ ನಷ್ಟು ತೆಗೆದುಕೊಂಡು 1-2 ಮಿ ಲೀ ನಷ್ಟು ಜೇನುತುಪ್ಪ ಸೇರಿಸಿ ಎರಡು ಭಾಗಮಾಡಿಕೊಂಡು ಬೆಳಗ್ಗೆ ಒಂದು ಭಾಗ ಸಂಜೆ ಒಂದು ಭಾಗ ಸೇವಿಸುವುದರಿಂದ ಬಾವು ಮತ್ತು ಕುರು ವಾಸಿಯಾಗುತ್ತದೆ

13 ಬೇರಿನ ಕಷಾಯ 14-28 ಮಿ ಲೀ ನಷ್ಟು ತೆಗೆದುಕೊಂಡು ಸ್ವಲ್ಪ ಇಂಗು ಮತ್ತು ಸೈಂಧಲವಣ ಸೇರಿಸಿ ಎರಡು ಬಾರಿ ಕುಡಿಯುವುದರಿಂದ ಬಾವು ಮತ್ತು ಕುರು ವಾಸಿಯಾಗುತ್ತದೆ

14 ಮರದ ತೊಗಟೆಯ ರಸ 4 ಭಾಗ ತೆಗೆದುಕೊಂಡು 1 ಭಾಗ ಸಾಸಿವೆ ಎಣ್ಣೆ ಸೇರಿಸಿ ಕಾಯಿಸಿ ತೈಲ ತಯಾರಿಸಿಕೊಂಡು ಕಿವಿನೋವು ಕಾಣಿಸಿಕೊಂಡಾಗ ದಿವಸಕ್ಕೆ ಎರಡು ಬಾರಿ ಕಿವಿಗೆ 2-4 ಹನಿ ಹಾಕುವುದರಿಂದ ಕಿವಿನೋವು ವಾಸಿಯಾಗುತ್ತದೆ

15 ತೊಗಟೆಯ ಕಷಾಯ 14-28 ಮಿ ಲೀ ನಷ್ಟು ತೆಗೆದುಕೊಂಡು, 1ಗ್ರಾಂ ಹುರಿದ ಇಂಗು ಮತ್ತು 1ಗ್ರಾಂ ಯವಕ್ಷಾರ ಸೇರಿಸಿ ದಿವಸಕ್ಕೆರಡು ಬಾರಿ ಸೇವಿಸುವುದರಿಂದ ಹೊಟ್ಟೆನೋವು ವಾಸಿಯಾಗುತ್ತದೆ

16 ನುಗ್ಗೆ ಮರದ ತೊಗಟೆ, ಹರುಳುಗಿಡದ ತೊಗಟೆ ಮತ್ತು ನೇರಳೆ ಮರದ ತೊಗಟೆ ಈ ಮೂರನ್ನು ಚೆನ್ನಾಗಿ ಅರೆದು ಬಿಸಿಮಾಡಿ ಲೇಪಿಸುವುದರಿಂದ ಮೈಮೇಲೆದ್ದಿರುವ ಎಲ್ಲಾ ವಿಧದ ಗುಳ್ಳೆಗಳು ವಾಸಿಯಾಗುತ್ತವೆ

17 ಮರದ ತೊಗಟೆಯನ್ನು ಅರೆದು ಅದಕ್ಕೆ ನಾಸಿವೆ ಎಣ್ಣೆ ಸೇರಿಸಿ ಊತ ಬಂದಿರುವ ವೃಷಣಗಳ (Scrotum) ಮೇಲೆ ಲೇಪಿಸುವುದರಿಂದ ಊತ ಕಡಿಮೆಯಾಗುತ್ತದೆ

18 ನುಗ್ಗೆ ಮರದ ತೊಗಟೆಯನ್ನು ಅರೆದು ಬಿಸಿಮಾಡಿ ಮೈಗೆ ಲೇಪಿಸುವುದರಿಂದ ಮೈಮೇಲೆದ್ದಿರುವ ಗಂಧೆ ವಾಸಿಯಾಗುತ್ತದೆ.

19 ನುಗ್ಗೆಯ ಎಲೆ ಮತ್ತು ಮೂಲಂಗಿಯ ಎಲೆಗಳನ್ನು ಅರೆದು ಮೂಲವ್ಯಾಧಿಯ ಮೊಳಕೆಯ ಮೇಲೆ ಲೇಪಿಸುವುದರಿಂದ ಮೊಳಕೆಗಳು ನಿವಾರಣೆಯಾಗುತ್ತವೆ

20 ಒಣಗಿರದ ಹಾಗೂ ಬಲಿತ ಕಾಯಿಯೊಳಗಿನ ಬೀಜಗಳನ್ನು ಬೇರ್ಪಡಿಸಿ ಜಜ್ಜಿ ರಸ ತೆಗೆದು ಬೆಚ್ಚಗೆ ಮಾಡಿ 2-4 ಹನಿಗಳನ್ನು ದಿವಸಕ್ಕೆರಡು ಬಾರಿ ಕಿವಿಗೆ ಹಾಕುವುದರಿಂದ ಕಿವಿ ನೋವು ಕಡಿಮೆಯಾಗುತ್ತದೆ

21 ಬೀಜದ ಚೂರ್ಣವನ್ನು ಬೆಳಗ್ಗೆ ಒಂದು ಗ್ರಾಂ ಮತ್ತು ಸಂಜೆ ಒಂದು ಗ್ರಾಂನಂತೆ ಕೆಲವು ದಿವಸ ಸೇವಿಸುವುದರಿಂದ ಜಂತುಹುಳುಗಳು ಬಿದ್ದು ಹೋಗುತ್ತವೆ

## ಪಶುರೋಗ ಚಿಕಿತ್ಸೆಯಲ್ಲಿ

ನುಗ್ಗೆ ಸೊಪ್ಪನ್ನು ಒಂದು ಸಾರಿಗೆ ಎರಡು ಹಿಡಿಯಂತೆ, ದಿವಸಕ್ಕೆ ಎರಡು ಹೊತ್ತು ಒಂದು ವಾರ ತಿನ್ನಿಸುವುದರಿಂದ ಗೂಬೆರೋಗ ವಾಸಿಯಾಗುತ್ತದೆ



# ನೆಲಬೇವು

| | |
|---|---|
| ವೈಜ್ಞಾನಿಕ ಹೆಸರು | ಆ್ಯಂಡ್ರೊಗ್ರಾಫಿಸ್ ಪ್ಯಾನಿಕುಲಾಟ (Andrographıs panıculata Nees ] |
| ಸಸ್ಯದ ಕುಟುಂಬ | ಅಕ್ಯಾಂಥೇಸಿ [Acanthaceae] |
| ಕನ್ನಡದ ಇತರ ಹೆಸರುಗಳು | ಊರಕಿರಿಯಾತು, ಕಾಲಮೇಘ |
| ಇತರ ಭಾಷೆಯ ಹೆಸರುಗಳು | ಸಂ - ಭೂನಿಂಬ, ಮಹಾತಿತ್ತ, ಕಾಲಮೇಘ, ಕ್ರಿತ<br>ಹಿಂ - ಕ್ರಿಯತ್, ಮಹಾತಿತ<br>ತ.- ನಿಲವೆಂಬು, ಶಿರತ್ ಕುಚ್ಚಿ<br>ತೆ - ನೆಲವೇಮು<br>ಇಂ -ದಿಕ್ರೆಟ್, ಕಿಂಗ್ ಆಫ್ ಬಿಟ್ಟರ್, ಚಿರೇಟ |

**ಪರಿಚಯ**

ಈ ಮೂಲಿಕೆಯು ಕಳ್ಳಿ ಕುರುಚಲು ಗಿಡಗಳನ್ನೊಳಗೊಂಡ ಸಸ್ಯಾವರಣದಲ್ಲಿ, ಬಿಳು ಭೂಮಿಯಲ್ಲಿ ಮತ್ತು ನುರುಜುಗಲ್ಲು ಗುಡ್ಡಗಳಲ್ಲಿ ಬೆಳೆಯುತ್ತದೆ ಕೆಲವು ಕಡೆ ಸಣ್ಣ ಮೂಲಿಕೆಯಂತೆ ಬೆಳೆದರೆ ಫಲವತ್ತಾದ ಮಣ್ಣಿರುವ ಕಡೆ ಸಣ್ಣ ಪೊದೆಯಂತೆ ಬೆಳೆಯುತ್ತದೆ ಗಿಡದ ಕಾಂಡವು ಬಹುವಾಗಿ ಕವಲೊಡೆದಿರುತ್ತದೆ ಕಾಂಡದಲ್ಲಿ ನಾಲ್ಕು ಏಣುಗಳಿರುತ್ತವೆ ಸರಳವಾದ ಎಲೆಗಳು ಅಭಿಮುಖವಾಗಿ ಜೋಡಣೆಯಾಗಿರುತ್ತವೆ ಕೆಲವು ಪ್ರದೇಶಗಳಲ್ಲಿ ಎಲೆಯ ಕುಡಿಗಳು ಕಂದು ಬಣ್ಣಕ್ಕಿರುತ್ತವೆ ಬಲಿತಾಗ ಹಸಿರು ಬಣ್ಣಕ್ಕೆ ತಿರುಗುತ್ತವೆ ಗುಲಾಬಿ ಮಿಶ್ರಿತ ನೇರಳೆ ಬಣ್ಣದ ಹೂಗಳು ಕವಲೊಡೆಯದ ಅಂತ್ಯಾರಂಭಿ ಪುಷ್ಪಮಂಜರಿಯಲ್ಲಿರುತ್ತವೆ ಹೂಗಳು ಎರಡು ತುಟಿಗಳೋಪಾದಿಯಾಗಿ ಸೀಳಿರುತ್ತವೆ ಕೆಳತುಟಿ ದಳದ ಮೇಲೆ ಬಿಳಿ ಅಥವಾ ಗುಲಾಬಿ ಬಣ್ಣದ ಚುಕ್ಕಿಗಳಿರುತ್ತವೆ ಗಿಡದ ಎಲ್ಲಾ ಭಾಗಗಳ ರುಚಿ ಕಹಿಯಾಗಿರುತ್ತದೆ.

## ಉಪಯೋಗಗಳು

1 ಸಮೂಲದ ಚೂರ್ಣ ಮತ್ತು ಕರಿಮೆಣಸಿನ ಪುಡಿ ಸೇರಿಸಿ ಸೇವಿಸುವುದರಿಂದ ಜ್ವರ, ಮಲೇರಿಯಾಜ್ವರ ಗುಣವಾಗುತ್ತದೆ

2 ಸಮೂಲದ ಚೂರ್ಣ ಸೇವನೆಯಿಂದ ಯಕೃತ್ತಿನ ವಿಕಾರಗಳು ಗುಣವಾಗುತ್ತದೆ

3 ನಮೂಲದ ಚೂರ್ಣ ಸೇವನೆಯಿಂದ ನರ ದೌರ್ಭಲ್ಯ ದೂರವಾಗುತ್ತದೆ

4 ನಮೂಲದ ಚೂರ್ಣ ನೇವನೆಯಿಂದ ರಕ್ತ ಶುದ್ಧಿಯಾಗುತ್ತದೆ ಮತ್ತು ಚರ್ಮರೋಗಗಳು ಗುಣವಾಗುತ್ತವೆ

5 ನೆಲಬೇವು ಮತ್ತು ಅಮೃತ ಬಳ್ಳಿಯನ್ನು ಸಮತೂಕದಷ್ಟು ತೆಗೆದುಕೊಂಡು ಅರೆದು ಮಡಿಕೆಯಲ್ಲಿ ಹಾಕಿ ಪುಟವಿಟ್ಟು ನಂತರ ದಿವಸಕ್ಕೆ 1 ಔನ್ಸನಂತೆ ಎರಡು ವೇಳೆ ಕುಡಿಯುವುದರಿಂದ ಬಿಕ್ಕಳಿಕೆ ಬರುವುದು ನಿಲ್ಲುತ್ತದೆ



# ಪಗಡೆಮರ

| | |
|---|---|
| ವೈಜ್ಞಾನಿಕ ಹೆಸರು | ಮೈಮುಸಾಪ್ಸ್ ಇಲೆಂಗಿ (Mimusops elengi L ) |
| ಸಸ್ಯದ ಕುಟುಂಬ | ಸಪೋಟೇಸಿ (Sapotaceae) |
| ಕನ್ನಡದ ಇತರ ಹೆಸರುಗಳು | ಕಂಜ, ಕಲ್ ಹಾಲೆ, ಕಲಾಲೆ, ಪೊಗಡ, ಬಕುಳ, ಮುಲಸರಿ, ಬೊಗಡ, ಹಾಲ್ಮಧು |
| ಇತರ ಭಾಷೆಯ ಹೆಸರುಗಳು | ಸಂ - ಬಕುಳ, ಸಿನ್ಧಕೇಸರ<br>ಹಿಂ - ಬಕುಲ್, ಮಲ್ಸಾರಿ<br>ತ - ಮಾಗಿಲಂ, ಮೋಗಿಡಂ<br>ತೆ - ವಕುಳಮು, ಪೊಗಡ<br>ಇಂ.- ಬುಲೆಟ್-ವುಡ್ ಟ್ರೀ, ಇಂಡಿಯನ್ಮೆಡ್ಲರ್ |

## ಪರಿಚಯ

ಕಳ್ಳಿ ಕುರುಚಲು ಗಿಡಗಳೊನ್ನೊಳಗೊಂಡ ಸಸ್ಯಾವರಣ ಮತ್ತು ಪಶ್ಚಿಮ ಘಟ್ಟಗಳಲ್ಲಿನ ಬೇಸಿಗೆಯಲ್ಲಿ ಎಲೆಯುದುರುವ ಸಸ್ಯಾವರಣದಲ್ಲಿ ಬೆಳೆಯುವ ಈ ಮರವು ಸದಾ ಎಲೆಯಿಂದ ತುಂಬಿ ನೋಡಲು ಆಕರ್ಷಕವಾಗಿರುತ್ತದೆ ಬೆಂಗಳೂರಿನ ಕೆಲವು ಬಡಾವಣೆಗಳಲ್ಲಿ ರಸ್ತೆಯ ಬದಿಯಲ್ಲಿ, ನಂದಿಗಿರಿಧಾಮ ಮತ್ತು ಲಾಲ್ ಬಾಗ್ ನಲ್ಲಿ ಕೆಲವು ಮರಗಳನ್ನು ಕಾಣಬಹುದು

ಸಾಧಾರಣ ಎತ್ತರಕ್ಕೆ ಬೆಳೆಯುವ ಈ ಮರದ ತೊಗಟೆ ಒರಟಾಗಿರುತ್ತದೆ ಹಾಗೂ ಕಂದು ಬಣ್ಣದಿಂದ ಕೂಡಿರುತ್ತದೆ ಎಳೆಯ ತುದಿ ಕಾಂಡವು ರೇಷ್ಮೆಯಂತೆ ನುಣುಪಾದ ಕೂದಲುಗಳಿಂದ ಆವೃತವಾಗಿರುತ್ತದೆ ಒರಟಾದ ಮತ್ತು ಉದ್ದ ಅಂಡಾಕಾರದ ಎಲೆಗಳು ಕಾಂಡದ ಮೇಲೆ ಪರ್ಯಾಯವಾಗಿ ಜೋಡಣೆಯಾಗಿರುತ್ತವೆ ಎಲೆಯ ಮುಂಭಾಗವು ದಟ್ಟ ಹಸಿರಾಗಿದ್ದು ಹೊಳಪಿನಿಂದ



ಚಿತ್ರ 65 ಪಗಡೆ ಮರ - ಹೂಗಳಿರುವ ರೆಂಬೆ

ಕೂಡಿದರೆ ಹಿಂಭಾಗವು ಹೊಳಪಿಲ್ಲದೆ ತಿಳಿ ಹಸಿರಾಗಿರುತ್ತದೆ ನಕ್ಷತ್ರದಾಕಾರದ ಸುವಾಸನಾಭರಿತ ಬೆಳ್ಳನೆಯ ಹೂಗಳು ಎಲೆಯ ಕಂಕುಕಳಲ್ಲಿರುತ್ತವೆ ಅಂಡಾಕಾರದ ಹಣ್ಣುಗಳು ಮಾಗಿದಾಗ ಕಿತ್ತಳೆ ಬಣ್ಣಕ್ಕೆ ತಿರುಗುತ್ತವೆ ಒಂದೊಂದು ಹಣ್ಣಿನಲ್ಲಿ ಒಂದೊಂದು ಬೀಜವಿರುತ್ತದೆ

## ಉಪಯೋಗಗಳು

1 ಮರದ ತೊಗಟೆಯ ಕಷಾಯ ಸೇವನೆಯಿಂದ ಪ್ರದರ ರೋಗ, ಶುಕ್ರಮೇಹ, ಭೇದಿ ಮತ್ತು ರಕ್ತಭೇದಿ ವಾಸಿಯಾಗುತ್ತದೆ

2 ಮರದ ತೊಗಟೆಯ ಚೂರ್ಣದಿಂದ ಹಲ್ಲುಜ್ಜುವುದರಿಂದ ಹಲ್ಲು ಹುಳುಕಾಗುವುದಿಲ್ಲ.

3 ಎಳೆಕಡ್ಡಿಗಳಿಂದ ಹಲ್ಲುಜ್ಜುವುದರಿಂದ ದಂತ ರೋಗಗಳು ವಾಸಿಯಾಗುತ್ತವೆ.

4 ಹೂವಿನ ಚೂರ್ಣದ ನಸ್ಯ ಹಾಕುವುದರಿಂದ ತಲೆನೋವು ವಾಸಿಯಾಗುತ್ತದೆ

5 ಹೂವಿನ ಚೂರ್ಣವನ್ನು ಸೇವಿಸುವುದರಿಂದ ಮೆದುಳಿನ ದೌರ್ಬಲ್ಯವು ಗುಣವಾಗುತ್ತದೆ

6 ಹೂವಿನಿಂದ ತಯಾರಿಸಿದ ಸ್ವರಸ ಸೇವನೆಯಿಂದ ಹೃದಯ ಸಂಭಂದದ ರೋಗಗಳು ವಾಸಿಯಾಗುತ್ತವೆ.

7 ವಗಡೆಮರದ ಫಲ ಸೇವನೆಯಿಂದ ವೀರ್ಯ ವೃದ್ಧಿಯಾಗುತ್ತದೆ



# ಪರಂಗಿಮರ

| | |
|---|---|
| ವೈಜ್ಞಾನಿಕ ಹೆಸರು | ಕ್ಯಾರಿಕಾ ಪಪಾಯ<br>[Carıca papaya L ] |
| ಸಸ್ಯದ ಕುಟುಂಬ | ಕ್ಯಾರಿಕೇಸಿ<br>[Carıcaceae] |
| ಕನ್ನಡದ ಇತರ ಹೆಸರುಗಳು | ಅಕ್ಕತಂಗಿ ಹಣ್ಣು, ಅಂಡಕರ್ಬೂಜ, ಪಪ್ಪಂಗಾಯಿ, ಪರಂಗಿಹಣ್ಣು, ಪೆಂಗ, ಬಪ್ಪಂಗಾಯಿ |
| ಇತರ ಭಾಷೆಯ ಹೆಸರುಗಳು | ಸಂ. - ಏರಂಡ ಕರ್ಕಟಿ<br>ಹಿಂ - ಅರಂದ್ ಖರಬೂಜ, ಪಪಾಯ್<br>ತ - ಪಪ್ಪಾಯಿಮರಂ, ಪರಂಗಿ<br>ತೆ - ಬೊಪ್ಪಾಯಿಮಾಣು<br>ಇಂ - ಪಪಾಯ |

**ಪರಿಚಯ**

ಈ ಮರದ ತೌರೂರು ದಕ್ಷಿಣ ಅಮೇರಿಕ ಮತ್ತು ವೆಸ್ಟ್‌ಇಂಡೀಸ್. ಈ ಹಣ್ಣಿನ ಮರವನ್ನು ಕ್ರಿ ಶ 1626ಕ್ಕೆ ಮೊದಲೆ ಭಾರತಕ್ಕೆ ಪೋರ್ಚುಗೀಸರು ತಂದರೆಂದು ತಿಳಿದು ಬರುತ್ತದೆ ಜನಪ್ರಿಯವಾದ ಫಲವೃಕ್ಷವನ್ನು ರಾಜ್ಯದಲ್ಲೆಲ್ಲಾ ಬೆಳೆಯಲಾಗುತ್ತಿದೆ

ಪಪ್ಪಾಯ ಸದಾ ಹಸಿರಾಗಿರುವ ಒಂದು ಸಣ್ಣಮರ, ಇದರ ಬಲಿತ ಕಾಂಡ ಟೊಳ್ಳಾಗಿರುತ್ತದೆ ಕಾಂಡದ ತುದಿಯಲ್ಲಿ ಎಲೆಗಳು ಒತ್ತಾಗಿ ಜೋಡಣೆಯಾಗಿರುತ್ತವೆ ಸರಳವಾದ ಎಲೆಗಳು ಹಸ್ತಾಕಾರವಾಗಿ ಸೀಳಿರುತ್ತವೆ ಪ್ರತಿ ಎಲೆಗೂ ಉದ್ದನೆಯ ಟೊಳ್ಳಾದ ತೊಟ್ಟಿರುತ್ತದೆ ಎಲೆಯುದುರಿದ ನಂತರ ಕಾಂಡದ ಮೇಲೆ ಎಲೆ ಇದ್ದ ಕುರುಹಾಗಿ ವಜ್ರದಾಕಾರದ ಗುರುತು

ಉಳಿಯುತ್ತದೆ ಮರವು ಹೆಣ್ಣು, ಗಂಡು ಮತ್ತು ದ್ವಿಲಿಂಗಿ ಎಂಬ ಮೂರು ಬಗೆಯ ಹೂಗಳನ್ನು ಬಿಡುತ್ತದೆ ಕೆಲವು ಬಾರಿ ಈ ಹೂಗಳು ಪ್ರತ್ಯೇಕವಾಗಿ ಬೇರೆ ಬೇರೆ ಮರಗಳಲ್ಲೂ ಬಿಡುವುದುಂಟು ಇದರಿಂದಾಗಿ ಹೂ ಬಿಡವವರೆಗೂ ಮರದ ಲಿಂಗ ತಿಳಿದು ಬರುವುದಿಲ್ಲ ವರಂಗಿಯಲ್ಲಿ ಹಲವಾರು ತಳಿಗಳಿವೆ ಅವುಗಳಲ್ಲಿ ವಾಷಿಂಗ್ ಟನ್, ಹನಿಡ್ಯೂ ಅಥವಾ ಕೂರ್ಗ್ ಹನಿಡ್ಯೂ ಮುಖ್ಯವಾದವುಗಳು ತಳಿಗಳ ಭೇದವೆಣಿಸಿದೆ ಔಷಧ ತಯಾರಿಕೆಯಲ್ಲಿ ಎಲ್ಲವನ್ನು ಬಳಸಬಹುದು

## ಉಪಯೋಗಗಳು

1 ವರಂಗಿಯ ಎಲೆಯನ್ನು ಅರೆದು ಕಟ್ಟುವುದರಿಂದ ಅಥವಾ ಲೇಪಿಸುವುದರಿಂದ ನರಗಳ ನೋವು ಕಡಿಮೆಯಾಗುತ್ತದೆ. ಬಿದ್ದು ನೋವಾಗಿರುವ ಕಡೆ ಲೇಪಿಸಿದರೂ ನೋವು ಕಡಿಮೆಯಾಗುತ್ತದೆ

2 ವರಂಗಿಯ ಎಲೆಯನ್ನು ಹೆಂಚಿನ ಮೇಲೆ ಅಥವಾ ಕೆಂಡದ ಮೇಲೆ ಬಾಡಿಸಿ ಬಾವು ಅಥವಾ ನೋವಿರುವ ಕಡೆ ಕಟ್ಟುವುದರಿಂದ ನೋವು ಕಡಿಮೆಯಾಗುತ್ತದೆ

3 ವರಂಗಿ ಹೂವುಗಳನ್ನು ಕೈಯಲ್ಲಿ ಹೊಸಕಿ, ಕಟ್ಟಿರುವೆ ಮತ್ತು ಇತರ ಹುಳುಗಳು ಕಡಿದಿರುವ ಸ್ಥಳಕ್ಕೆ ಹಚ್ಚಿದರೆ ಉರಿ ಕಡಿಮೆಯಾಗುತ್ತದೆ

4. ಎಳೆಯ ವರಂಗಿ ಕಾಯಿಯನ್ನು ತೆಗೆದುಕೊಂಡು ಅದರ ಹೊರಮೈ (ಸಿಪ್ಪೆಯ) ಮೇಲೆ ಹರಿತವಾತ ಚಾಕುವಿನಿಂದ ಗಾಯ ಮಾಡಿದರೆ ಬಿಳಿಯ ಹಾಲು ಹೊರಬರುತ್ತದೆ ಇದನ್ನು ಸ್ಟೀಲ್ ಬಟ್ಟಲಿನಲ್ಲಿ ಸಂಗ್ರಹಿಸಿಕೊಂಡು ಬೆಂಕಿಯ ಮೇಲಿಟ್ಟರೆ ಬಿಳಿಯ ಚೂರ್ಣವಾಗುತ್ತದೆ ಚೂರ್ಣವನ್ನು 24 ಗಂಟೆಗಳವರೆಗೆ ಅದರಲ್ಲಿಯೇ ಬಿಟ್ಟು ನಂತರ ಬಾಟಲ್ ನಲ್ಲಿ ಸಂಗ್ರಹಿಸಿಟ್ಟುಕೊಳ್ಳಬೇಕು ಈ ಚೂರ್ಣವನ್ನು ದೊಡ್ಡವರಿಗೆ ಒಂದು ಸಲಕ್ಕೆ ಎರಡು ಗೋಧಿ ಕಾಳಿನಷ್ಟನ್ನು ಸಕ್ಕರೆಯೊಡನೆ ಅಥವಾ ಹಾಲಿನೊಡನೆ ಊಟವಾದ ನಂತರ ಕೊಡುವುದರಿಂದ ಪ್ಲೀಹ (Spleen) ಮತ್ತು ಯಕೃತ್ತಿನ (Liver) ದೋಷವು ಪರಿಹಾರವಾಗಿ ಜೀರ್ಣಶಕ್ತಿ ವೃದ್ಧಿಯಾಗುತ್ತದೆ

5 ಎಳೆವರಂಗಿ ಕಾಯಿಯಿಂದ ಸುರಿವ ಹಾಲಿಗೆ ಪಟಿಕದ ಚೂರ್ಣ ಸೇರಿಸಿ ಹಚ್ಚುವುದರಿಂದ ಕಲ್ಲೊತ್ತು (Corns) ಮತ್ತು ನರೋಲಿ(Warts) ವಾಸಿಯಾಗುತ್ತವೆ

6 ಪರಂಗಿಮರದ ಎಳೆಕಾಯಿಯನ್ನು ಕಚ್ಚು ಮಾಡಿದಾಗ ಒಸರುವ ಹಾಲನ್ನು ಚೇಳು ಕಡಿದ ಜಾಗದ ಮೇಲೆ ಲೇಪಿಸುವುದರಿಂದ ವಿಷವು ಇಳಿಯುತ್ತದೆ

7 ಪರಂಗಿಕಾಯಿಯ ಹಾಲನ್ನು ಸಂಗ್ರಹಿಸಿ ತಕ್ಕಷ್ಟು ಜೇನುತುಪ್ಪ ಸೇರಿಸಿ ತಿನ್ನಿಸುವುದರಿಂದ ಜಂತುಹುಳುಗಳು ಬೀಳುತ್ತವೆ ವಯಸ್ಸಿಗೆ ತಕ್ಕಂತೆ ಪ್ರಮಾಣವನ್ನು ನಿಗದಿಪಡಿಸಿಕೊಳ್ಳಬೇಕು. ಒಣಗಿದ ಬೀಜದ ಚೂರ್ಣವನ್ನು ಬೆಲ್ಲದೊಡನೆ ತಿನ್ನಿಸುವುದರಿಂದಲೂ ಜಂತುಹುಳುಗಳು ಬೀಳುತ್ತವೆ

8 ಪರಂಗಿಕಾಯಿಯ ಹಾಲನ್ನು ಹಚ್ಚುವುದರಿಂದ ನವೆ, ಕಜ್ಜಿ, ಮತ್ತು ಹುಳುಕಡ್ಡಿ ಗುಣವಾಗುತ್ತವೆ.

9 ಪರಂಗಿಹಣ್ಣನ್ನು ಮಾತ್ರ ನಿತ್ಯ ಬೆಳಗ್ಗೆ ಸೇವಿಸಿ (ಉಪಹಾರಕ್ಕೆ ಬೇರೇನನ್ನೂ ತಿನ್ನದೆ) ಮೇಲೆ ಬಿಸಿ ನೀರು ಕುಡಿಯುವುದರಿಂದ ಅರುಚಿ, ಅಜೀರ್ಣ ನಿವಾರಣೆಯಾಗುತ್ತದೆ

10 ಪರಂಗಿ ಗಿಡದ ಅಥವಾ ಎಳೆ ಕಾಯಿಯ ಹಾಲನ್ನು ಒಂದು ಚಮಚ ಸಂಗ್ರಹಿಸಿ ಅದಕ್ಕೆ ಸಕ್ಕರೆ ಸೇರಿಸಿ ನಿತ್ಯ 2 ಹೊತ್ತಿನಂತೆ 2-3 ವಾರ ಸೇವಿಸುವುದರಿಂದ ಪಚನ ಶಕ್ತಿ ಹೆಚ್ಚಾಗುತ್ತದೆ. ಸ್ತ್ರೀಯರಲ್ಲಿ ಅನ್ಯ ಕಾರಣದಿಂದ ಮುಟ್ಟು ತಡೆಯಾಗಿದ್ದರೆ ಮುಟ್ಟು ಪ್ರಾರಂಭವಾಗುತ್ತದೆ.

11 ಪರಂಗಿಯ ಬಲಿತ ಕಾಯಿಯನ್ನು ಸಿಪ್ಪೆ ತೆಗೆದು ಹೋಳು ಮಾಡಿ ಸ್ವಲ್ಪ ಉಪ್ಪು ಸೇರಿಸಿ ನಿತ್ಯ ಬೆಳಗ್ಗೆ - ರಾತ್ರಿ ಚೆನ್ನಾಗಿ ಅಗಿದು ತಿನ್ನಬೇಕು ಒಂದು ಹೊತ್ತಿಗೆ 10-12 ತೊಲದಂತೆ 21-42 ದಿವಸ ಸೇವಿಸುವುದರಿಂದ ಗುಲ್ಮ ಪರಿಹಾರವಾಗುತ್ತದೆ

12 ವರಂಗಿಬೀಜ 6 ತೊಲ, ಹಿಪ್ಪಲಿ 6 ತೊಲ, ನವಾಸಾಗರ 6 ತೊಲ ಇವುಗಳಲ್ಲೆವನ್ನು ಅರೆದು ಬೆಲ್ಲ ಸೇರಿಸಿ ಕಲಸಿಟ್ಟುಕೊಂಡು ಪ್ರತಿನಿತ್ಯ ಬೆಳಗ್ಗೆ ಒಂದೊಂದು ತೊಲದಂತೆ 21-42 ದಿವಸ ತಿನ್ನುವುದರಿಂದ ಮಲೇರಿಯಾ ಗಡ್ಡೆ ಮತ್ತು ಜ್ವರ ವಾಸಿಯಾಗುತ್ತದೆ ವರಂಗಿ ಬೀಜದ ಬದಲಾಗಿ ದೋರೆಗಾಯಿಯನ್ನು ಉಪಯೋಗಿಸಬಹುದು

## ಪಶುರೋಗ ಚಿಕಿತ್ಸೆಯಲ್ಲಿ

ಎಳೆ ವರಂಗಿ ಕಾಯಿಯನ್ನು ತುರಿದು ರುಬ್ಬಿ 42 ದಿವಸ ತಿನ್ನಿಸುವುದರಿಂದ ಗೂಬೆರೋಗ ವಾಸಿಯಾಗುತ್ತದೆ.



# ಪಾರಿಜಾತ

| | |
|---|---|
| ವೈಜ್ಞಾನಿಕ ಹೆಸರು | ನಿಕ್ಟಾಂಥಸ್ ಆರ್ಬೋರ್‌ಟ್ರಿಸ್ಟಿಸ್<br>[Nyctanthes arbortristis L ] |
| ಸಸ್ಯದ ಕುಟುಂಬ | ಒಲಿಯೇಸಿ<br>[Oleaceae] |
| ಕನ್ನಡದ ಇತರ ಹೆಸರುಗಳು | ಸಂಜೆಪಾರಿಜಾತ, ಹರಸಿಂಗಾರ್, ಶೇಫಾಲಿಕಾ |
| ಇತರ ಭಾಷೆಯ ಹೆಸರುಗಳು | ಸಂ -ಶೇಫಾಲಿಕ, ಪಾರಿಜಾತ<br>ಹಿಂ - ಹರ್ ಸಿಂಗಾರ್<br>ತ - ಪಾವಲ ಮಲ್ಲಿಗೈ<br>ತೆ - ಕೃಷ್ಣವೇಣು, ಶೇಫಾಲಿ<br>ಇಂ - ಕೊರಲ್ ಜಾಸ್ಮಿನ್, ನೈಟ್ ಜಾಸ್ಮಿನ್ |

**ಪರಿಚಯ**

ಪುರಾಣ ಕಥೆ ಕಾವ್ಯಗಳಲ್ಲಿ ಪಾರಿಜಾತದ ಉಲ್ಲೇಖವಿದೆ. ಪ್ರಸ್ತುತ ಪಾರಿಜಾತವೇ ಪುರಾಣಗಳಲ್ಲಿ ಉಲ್ಲೇಖವಾಗಿರುವ ಪಾರಿಜಾತವೆಂಬುದಕ್ಕೆ ಸ್ಪಷ್ಟ ಉತ್ತರ ದೊರಕುವುದಿಲ್ಲ ಏನೇ ಆದರೂ ಪ್ರಸ್ತುತ ಪಾರಿಜಾತವೂ ಪರಿಮಳಯುಕ್ತವಾದ ಹೂಗಳನ್ನು ಬಿಡುತ್ತದೆಂಬುದರಲ್ಲಿ ಸಂದೇಹವಿಲ್ಲ.

ಪಾರಿಜಾತವು ದೊಡ್ಡ ಪೊದೆಯಂತೆ ಇಲ್ಲವೆ ಸಣ್ಣ ಗಾತ್ರದ ಮರದಂತೆ ಬೆಳೆಯುತ್ತದೆ ಸಣ್ಣ ಕವಲುಗಳಿಗೆ ನಾಲ್ಕು ಮೂಲೆಗಳಿರುತ್ತವೆ ಅಂಡಾಕಾರದ ಒರಟಾದ ಎಲೆಗಳು ಅಭಿಮುಖವಾಗಿ ಜೋಡಣೆಯಾಗಿರುತ್ತವೆ ಎಲೆಗಳು ಅಂಚು ಹಲ್ಲಿನಂತೆ ಚೂಪಾಗಿರುತ್ತವೆ ಕಾಂಡದ ತುದಿಯಲ್ಲಿ ಎಲೆಯ ಕಂಕುಳಲ್ಲಿ 3-5 ಹೂಗಳು ಇರುತ್ತವೆ ಬಿಳಿ ಹೂಗಳ ತೊಟ್ಟು ಕೆಂಪಾಗಿರುತ್ತದೆ ಹೂಗಳು ರಾತ್ರಿಯಲ್ಲಿ ಅರಳಿ ಸುತ್ತಲಿನ ವಾತಾವರಣವನ್ನು ಸುವಾಸನೆಗೊಳಿಸುತ್ತದೆ



ಚಿತ್ರ 67 ಪಾರಿಜಾತ - ಹೂಗಳಿರುವ ರೆಂಬೆ

## ಉಪಯೋಗಗಳು

1 ಎಲೆ ಮತ್ತು ತೊಗಟೆಯ ಚೂರ್ಣವನ್ನು ಒಂದೊಂದು ಗುಂಜಿ ಪ್ರಮಾಣದಲ್ಲಿ ವೀಳ್ಯದೆಲೆ ರಸದಲ್ಲಿ ಕೊಡುವುದರಿಂದ ಕೆಮ್ಮು, ದಮ್ಮು ನಿವಾರಣೆಯಾಗುತ್ತದೆ

2 ಎಲೆಯ ಮತ್ತು ತೊಗಟೆಯನ್ನು ಅರೆದು ಹಚ್ಚುವುದರಿಂದ ಚರ್ಮವ್ಯಾಧಿಗಳು ಗುಣವಾಗುತ್ತವೆ

3 ಎಲೆಯ ರಸವನ್ನು ಹಾವು ಕಡಿದವರಿಗೆ ಕುಡಿಸುತ್ತಾರೆ

4 ಎಲೆಯ ರಸ ಸೇವನೆಯಿಂದ ಅಜೀರ್ಣ, ಪಿತ್ತಕೋಶದ ವಿಕಾರಗಳು ಮತ್ತು ಮೂಲವ್ಯಾಧಿ ಗುಣವಾಗುತ್ತದೆ

5 ಎಲೆಯ ರಸ ಅಥವಾ ಕಷಾಯ ಸೇವನೆಯಿಂದ ಮೂತ್ರ ತಡೆ ಮತ್ತು ಜ್ವರ ವಾಸಿಯಾಗುತ್ತದೆ

6 ಪಾರಿಜಾತ ಗಿಡದ ಬೀಜದ ಚೂರ್ಣವನ್ನು ತಲೆಗೆ ಹಚ್ಚುವುದರಿಂದ ತಲೆಯಲ್ಲಾದ ಹುಳುಕಡ್ಡಿ ವಾಸಿಯಾಗುತ್ತದೆ

7 ಬೀಜವನ್ನು ಅರೆದು ತಲೆಗೆ ಲೇಪಿಸುವುದರಿಂದ ಕೂದಲು ಉದುರುವುದು ನಿಲ್ಲುತ್ತದೆ





ಚಿತ್ರ 68 ಪುರುಷರತ್ನ - ಹೂ ಮತ್ತು ಎಲೆಗಳ ಹತ್ತಿರದ ನೋಟ

# ಪುರುಷರತ್ನ

| | |
|---|---|
| ವೈಜ್ಞಾನಿಕ ಹೆಸರು | ಹೈಬಾಂಥಸ್ ಇನ್ನೆಸ್ಪರ್ಮಸ್ (Hybanthus ennespermus (L ) F V Muell<br>= ವಯೋಲ ಇನ್ನೆಸ್ಪರ್ಮಸ್ (=Viola ennespermus L )<br>=ಐಯೊನಿಡಂ ಸಫ್ರೂಟಿಕೋಸಂ (=Ionidium suffruticosum (L ) Ging ex DC ) |
| ಸಸ್ಯದ ಕುಟುಂಬ | ವಯೋಲೇಸಿ (Violaceae) |
| ಕನ್ನಡದ ಇತರ ಹೆಸರುಗಳು | ಚರಾಟ, ರತ್ನಪುರುಷ, ಸಿರಂಟಿಗಿಡ |
| ಇತರ ಭಾಷೆಯ ಹೆಸರುಗಳು | ಸಂ - ಚರಾಟಿ, ಸೂರ್ಯಕಾಂತಿ<br>ಹಿಂ - ರತನ್ ಪುರುಷ್<br>ತ - ಒರಿಲೈತಾಮರೈ, ಒರಿದಳ್ ತಾಮರೈ<br>ತೆ - ನೀಲಕೊಬರಿ, ಪುರುಷರತ್ನಮು, ಸೂರ್ಯಕಂಟಿ |

**ಪರಿಚಯ**

ಪುರುಷರತ್ನವು ಖುಷ್ಕಿ ಜಮೀನಿನಲ್ಲಿ ಮತ್ತು ಕಳ್ಳಿ ಕುರುಚಲು ಗಿಡಗಳನ್ನೊಳಗೊಂಡ ಸಸ್ಯಾವರಣದಲ್ಲಿ ಕಾಡುಗಳಲ್ಲಿ ವಿರಳವಾಗಿ ಇಲ್ಲವೆ ಹುಲ್ಲಿನ ಜೊತೆ ಬೆಳೆಯುತ್ತದೆ ಈ ಗಿಡವು ಸಾಧಾರಣವಾಗಿ 10 ರಿಂದ 30 ಸೆ ಮೀ ಎತ್ತರ ಬೆಳೆಯುತ್ತದೆ ತೊಟ್ಟಿಲ್ಲದ ಸರಳವಾದ ಹಾಗೂ ಉದ್ದನೆಯ ಎಲೆಗಳು ಕಾಂಡದ ಮೇಲೆ ಪರ್ಯಾಯವಾಗಿ ಜೋಡಣೆಯಾಗಿರುತ್ತವೆ ಎಲೆಯ

ಕಂಕುಳಲ್ಲಿ ಚಿಕ್ಕ ತೊಟ್ಟುಳ್ಳ ಒಂಟಿ ಹೂಗಳಿರುತ್ತವೆ ಹೂವಿನಲ್ಲಿನ ಒಂದು ದಳವು ಇತರ ದಳಗಳಿಗಿಂತ ದೊಡ್ಡದಾಗಿರುತ್ತದೆ. ಹೂದಳದ ಬಣ್ಣ ಸಾಮಾನ್ಯವಾಗಿ ತಿಳಿಗೆಂಪು ಅಥವಾ ನೀಲಿ ಮಿಶ್ರಿತ ಕೆಂಪಾಗಿರುತ್ತದೆ.

## ಉಪಯೋಗಗಳು

1 ಮಕ್ಕಳ ಉದರ ಶೂಲೆಗಳಿಗೆ ಬೇರನ್ನು ಅರೆದು ತಿನ್ನಿಸುತ್ತಾರೆ

2 ಪುರುಷರತ್ನದ ಸಮೂಲವನ್ನು ಹಸುವಿನ ತುಪ್ಪ, ಗೋರೋಜನ ಮತ್ತು ಪಚ್ಚಕರ್ಪೂರ ಸೇರಿಸಿ ಅರೆದು ಮೈಗೆ ಲೇಪ ಮಾಡಿದರೆ ಮೈಮೇಲೇಳುವ ಹುಣ್ಣುಗಳು ವಾಸಿಯಾಗುತ್ತವೆ ಹಣೆಗೆ ಪಟ್ಟು ಹಾಕಿದರೆ ತಲೆನೋವು ಕಡಿಮೆಯಾಗುತ್ತದೆ.

3 ಸಮೂಲದ ಚೂರ್ಣ ಅಥವಾ ಸಮೂಲವನ್ನು ಅರೆದು ಹಾಲಿನೊಡನೆ ಸೇವಿಸಿದರೆ ದೇಹ ಕಾಂತಿಯುಕ್ತವಾಗುತ್ತದೆ, ದಾತು ವೃದ್ಧಿಯಾಗುತ್ತದೆ ಮತ್ತು ದೇಹ ಬಲಗೊಳ್ಳುತ್ತದೆ

4 ಸಮೂಲವನ್ನು ಹಸುವಿನ ಮೊಸರಿನಲ್ಲಿ ಅರೆದು ನಿಂಬೆಕಾಯಿ ಗಾತ್ರ ಪ್ರಮಾಣದಷ್ಟನ್ನು ದಿವಸಕ್ಕೆ ಎರಡು ವೇಳೆ 41 ದಿವಸ ಸೇವಿಸುವುದರಿಂದ ತಾಯಂದಿರಲ್ಲಿ ಎದೆ ಹಾಲು ಹೆಚ್ಚಾಗಿ ಉತ್ಪತ್ತಿಯಾಗುತ್ತದೆ.

5 ಬೇರನ್ನು ಅರೆದು ಸೇವಿಸುವುದರಿಂದ ಮೂತ್ರಕೋಶದ ರೋಗ ಮತ್ತು ಗೊನ್ನೊರಿಯ ರೋಗಗಳು ವಾಸಿಯಾಗುತ್ತವೆ

6 ಸಮೂಲವನ್ನು ಹಲವು ದಿವಸ ಸೇವಿಸುವುದರಿಂದ ಸ್ತ್ರೀಯರ ಸ್ಥನಗಳು ಘನವಾಗುತ್ತವೆ.

7 ಪಿತ್ತದಿಂದುಂಟಾದ ಭ್ರಮೆಗೆ ಪುರುಷರತ್ನದ ಸಮೂಲವನ್ನು ನುಣ್ಣಗೆ ಅರೆದು ಹಸುವಿನ ನೊರೆಹಾಲಿನಲ್ಲಿ ಕದಡಿ ಕುಡಿಸುತ್ತಾರೆ

8 ಆನೆಕಾಲು ರೋಗಕ್ಕೆ ಗಿಡದ ಸಮೂಲವನ್ನು ಅರೆದು ಲೇಪಿಸುತ್ತಾರೆ.



# ಪೆಟ್ಟಿಗೆಗಿಡ (ಶ್ರೀ ಮುದ್ರೆಗಿಡ)

| | |
|---|---|
| ವೈಜ್ಞಾನಿಕ ಹೆಸರು | . ಅಬುಟಿಲಾನ್ ಇಂಡಿಕಂ [Abutılon ındıcum(L ) Sweet] |
| ಸಸ್ಯದ ಕುಟುಂಬ | ಮಾಲ್ವೇಸಿ [Malvaceae] |
| ಕನ್ನಡದ ಇತರ ಹೆಸರುಗಳು | ಕಿರಂಗಿ, ಗಿಡುತಿಂಗಿ, ತುರುಬಿಗಿಡ, ತುತ್ತಿ, ನೆಲದುರುವೆ, ಹಾಗಡೆ, ಹೆತ್ತುಕಿಸು, ಹೆತ್ತುತ್ತಿ |
| ಇತರ ಭಾಷೆಯ ಹೆಸರುಗಳು | ಸಂ. - ಕಂಕತಿಕ, ಅತಿಬಲ, ಮಹಾಬಲ |
| | ಹಿಂ - ಕಂಗಿ, ಕಂಘನಿ, ಝುಂಪಿ, ಪೊತರಿ, ತೇವರಿ |
| | ತ - ಪಣಿಯಾರ ತುತ್ತಿ, ವೆರುನ್ ತುತ್ತಿ |
| | ತೆ - ತುತ್ತೂರು ಬೆಂಡ, ಬೋಟ್ಲ ಬೆಂಡ, ತುತ್ತಿರಿ ಚೆಟ್ಟು |
| | ಇಂ - ಕಂಟ್ರಿ ಮ್ಯಾಲೊ, ಡೆಮನ್ಸ್ ಕೊಂ |

**ಪರಿಚಯ**

ಈ ಗಿಡವು ಬೀಳು ಭೂಮಿಯಲ್ಲಿ, ಕಳ್ಳಿ ಕುರುಚಲು ಗಿಡಗಳನ್ನೊಳಗೊಂಡ ಸಸ್ಯಾವರಣದಲ್ಲಿ ಬೇಲಿಯಂಚಿನಲ್ಲಿ ಪೊದೆಯಂತೆ ಬೆಳೆಯುತ್ತದೆ ಕಾಂಡದ ಮೇಲೆ ಹೃದಯಾಕಾರದ ಬೂದು ಬಣ್ಣದ ಎಲೆಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ ಎಲೆಗಳನ್ನು ಮುಟ್ಟಿದರೆ ಮೃದುವಾದ ವೆಲ್ ವೆಟ್ಟನ್ನು ಮುಟ್ಟಿದ ಅನುಭವವಾಗುತ್ತದೆ. ಎಲೆಯ ಅಂಚು ಗರಗಸದ ಹಲ್ಲಿನಂತಿರುತ್ತದೆ. ಹಳದಿ ಬಣ್ಣದ ಒಂಟಿ ಹೂಗಳು ಎಲೆಯ ಕಂಕುಳಲ್ಲಿರುತ್ತವೆ ಒಣಗಿದ ಕಾಯಿಗಳು ನೋಡಲು ಮುದ್ರೆಯಂತಿರುವುದರಿಂದ ಶ್ರೀಮುದ್ರೆ ಎಂಬ ಹೆಸರು ಬಳಕೆಯಲ್ಲಿದೆ



ಚಿತ್ರ 69 : ಪೆಟ್ಟಿಗೆ ಗಿಡ

## ಉಪಯೋಗಗಳು

1 ಬೇರನ್ನು ಅರೆದು ಕಣ್ಣಿಗೆ ಅಂಜನದಂತೆ ಇಟ್ಟರೆ ಕಣ್ಣಿನ ರೋಗಗಳು ವಾಸಿಯಾಗುತ್ತವೆ

2 ಬೇರಿನ ಚೂರ್ಣ ಸೇವನೆಯಿಂದ ಪ್ರದರ ರೋಗ, ಹೃದಯ ದೌರ್ಬಲ್ಯ, ಗರ್ಭಾಶಯು ದೌರ್ಬಲ್ಯ, ಕ್ಷಯುರೋಗ, ಮತ್ತು ಬಲಹೀನತೆ ದೂರವಾಗುತ್ತವೆ

3 ಬೇರು ಮತ್ತು ಎಲೆಯ ಕಷಾಯ ಸೇವನೆಯಿಂದ ಜ್ವರ ಮತ್ತು ಮೂತ್ರತಡೆ ವಾಸಿಯಾಗುತ್ತದೆ

4 ಬೇರು ಮತ್ತು ಎಲೆಯು ಚೂರ್ಣ ಸೇವನೆಯಿಂದ ಬಲವೀರ್ಯವೃದ್ಧಿಯಾಗುತ್ತದೆ.

5 ವೆಟ್ಟಿಗೆ ಗಿಡದ ಎಲೆಗಳನ್ನು ಬೇಯಿಸಿ ವಲ್ಯ ಮಾಡಿ ಸೇವಿಸುವುದರಿಂದ ಹಲ್ಲುನೋವು ಕಡಿಮೆಯಾಗುತ್ತದೆ

6 ವೆಟ್ಟಿಗೆ ಗಿಡದ ಸಮೂಲವನ್ನು 1 ಪಾವು ಎಳ್ಳೆಣ್ಣೆಗೆ ಹಾಕಿ ಕಾಯಿಸಿ ತಯಾರಿಸಿದ ತೈಲವನ್ನು 1 ಚಮಚ ಪ್ರಮಾಣದಷ್ಟನ್ನು ಪ್ರತಿದಿವಸ ಸೇವಿಸುವುದರಿಂದ ಲಕ್ವ ಮತ್ತು ಸಂಧಿವಾತ ಗುಣವಾಗುತ್ತವೆ ಇದೇ ತೈಲವನ್ನು ಹೊರಗೆ ಲೇಪಿಸಲು ಉಪಯೋಗಿಸಬಹುದು.



# ಪೌದೆಮುಳ್ಳು

| | |
|---|---|
| ವೈಜ್ಞಾನಿಕ ಹೆಸರು | ಪಾಲಿಕಾರ್ಪಿಯ ಕೊರಿಂಬೋಸ<br>[Polycarpea corymbosa (L ) Lam ] |
| ಸಸ್ಯದ ಕುಟುಂಬ | ಕ್ಯಾರಿಯೊಫಿಲ್ಲೇಸಿ<br>[Caryophyllaceae] |
| ಕನ್ನಡದ ಇತರ ಹೆಸರುಗಳು | ಅರಿಶಿನಸಾಸಿವೆ |
| ಇತರ ಭಾಷೆಯ ಹೆಸರುಗಳು | ಸಂ. - ಭಿಸಾಟ್ಟ<br>ತ. - ನಿಲ್ಲೈಸೇಡಚಿ<br>ತೆ. - ಬೊಮ್ಮಸರಿ, ರಜುಮ |

**ಪರಿಚಯ**

ಈ ಮೂಲಿಕೆಯು ನದಿಯ ದಂಡೆಯಲ್ಲಿ, ಕೆಂಪು ಭೂಮಿಯಲ್ಲಿ ಮತ್ತು ಬೀಳು ಭೂಮಿಯಲ್ಲಿ ಬೆಳೆಯುತ್ತದೆ ಇದು ರಾಗಿ ಹೊಲದಲ್ಲಿ ಕುಯ್ಲಿನ ಕಾಲದಲ್ಲಿ ಕಳೆಯಾಗಿ ಬೆಳೆದು ತೊಂದರೆ ಕೊಡುತ್ತದೆ. ಈ ಗಿಡವು ಸಾಮಾನ್ಯವಾಗಿ ೧೫-೨೫ ಸೆ ಮೀ ಎತ್ತರ ಬೆಳೆಯುತ್ತದೆ ಗಿಡದ ಎಲ್ಲಾ ಭಾಗಗಳ ಮೇಲೆ ರೋಮಗಳಿರುತ್ತವೆ ಸರಳವಾದ ನೀಳಎಲೆಗಳು ಗೆಣ್ಣುಗಳ ಸುತ್ತ ವೃತ್ತಾಕಾರವಾಗಿ ಜೋಡಿಸಲ್ಪಟ್ಟಿರುತ್ತವೆ. ಕಾಂಡದ ತುದಿಯಲ್ಲಿ ಬಹು ಮಧ್ಯಾರಂಬಿ ಹೂಗೊಂಚಲುಗಳಲ್ಲಿ ಚಿಕ್ಕ ಚಿಕ್ಕ ಹೂಗಳಿರುತ್ತವೆ ಕಂದು ಬಣ್ಣದ ಬೀಜಗಳು ಚಪ್ಪಟೆಯಾಗಿರುತ್ತವೆ

## ಉಪಯೋಗಗಳು

1 ವಿಷ ಜಂತುಗಳು ಕಡಿದ ಜಾಗದ ಮೇಲೆ ಗಿಡದ ಎಲೆಗಳನ್ನು ಅರೆದು ಲೇಪಿಸುತ್ತಾರೆ. ಎಲೆಯ ಚೂರ್ಣವನ್ನು ಹೊಟ್ಟೆಗೆ ತಿನ್ನಿಸುತ್ತಾರೆ

2 ಎಲೆಯ ಚೂರ್ಣ ಸೇವನೆಯಿಂದ ಕಾಮಾಲೆ ವಾಸಿಯಾಗುತ್ತದೆ

3 ಬೊಕ್ಕೆ (ಗುಳ್ಳೆ), ಊತ ಮುಂತಾದವುಗಳ ಮೇಲೆ ಎಲೆಗಳನ್ನು ಅರೆದು ಪಟ್ಟು ಹಾಕುತ್ತಾರೆ.



ಚಿತ್ರ 71. ಬಜೆ - ಕಂದು ಮತ್ತು ಎಲೆಗಳು

# ಬಜೆ

| | |
|---|---|
| ವೈಜ್ಞಾನಿಕ ಹೆಸರು | ಅಕೊರಸ್ ಕ್ಯಾಲಮಸ್ [Acorus calamus L ] |
| ಸಸ್ಯದ ಕುಟುಂಬ | ಎರೇಸಿ [Araceae] |
| ಕನ್ನಡದ ಇತರ ಹೆಸರುಗಳು | ಅತಿಬಜೆ, ಕವಣ, ದಗಡೆ, ನಾರುಬೇರು, ಬಾಜೆಗಿಡ, |
| ಇತರ ಭಾಷೆಯ ಹೆಸರುಗಳು | ಸಂ - ವಚಾ, ಉಗ್ರಗಂಧಾ, ಷಡ್ಗಂಧಾ, ಗೋಲೋಮಿ, ಶತಪರ್ವಿಕಾ |
| | ಹಿಂ - ಬಜ್, ಗುಡ್ ಬಜ್ |
| | ತ - ವಶಂಬು, ಕೊಶುಂಬು |
| | ತೆ - ವಾಸ, ಬಡಜೆ |
| | ಇಂ - ಸ್ವೀಟ್ ಫ್ಲಾಗ್ |

**ಪರಿಚಯ**

ಈ ಮೂಲಿಕೆಯು ಸಾಮಾನ್ಯವಾಗಿ ಜೌಗು ಪ್ರದೇಶದಲ್ಲಿ ಬೆಳೆಯುತ್ತದೆ. ನಮ್ಮ ರಾಜ್ಯದ ಅನೇಕ ಭಾಗಗಳಲ್ಲಿ ಇದನ್ನು ಸಾಗುವಳಿ ಮಾಡಲಾಗುತ್ತಿದೆ ಬಜೆಗಿಡದಲ್ಲಿ ನೆಲದೊಳಗಿರುವ ಸುವಾಸನೆಯಿಂದ ಕೂಡಿದ ಶಿಫಾವೃಂತ ಅಥವಾ ಕಂದು ಇರುತ್ತದೆ. ಈ ಕಂದು ಸಾಮಾನ್ಯವಾಗಿ 1-2 ಮೀಟರ್ ಉದ್ದವಿರುತ್ತದೆ ಕಂದಿನ ಮೇಲೆ 2-3 ಸೆ ಮೀ ಅಗಲವಿರುವ ಹಲವಾರು ಎಲೆಗಳಿರುತ್ತವೆ 2-5 ಸೆ ಮೀ ಉದ್ದದ ಪುಷ್ಪಮಂಜರಿಯು ತಾಳೆಗುಚ್ಚವನ್ನು ಹೋಲುತ್ತದೆ

ಬಜೆಗಿಡದ ಕಂದನ್ನು ಅಗೆದು ಒಣಗಿಸಿ ತುಂಡುಗಳಾಗಿ ಕತ್ತರಿಸಿ ಮಾರಾಟ ಮಾಡುತ್ತಾರೆ ಈ ತುಂಡುಗಳೇ ಔಷಧ ತಯಾರಿಕೆಯಲ್ಲಿ ಉಪಯೋಗಿಸಲ್ಪಡುವ

ಗಿಡದ ಮುಖ್ಯ ಭಾಗ ಬಜೆ ಗಿಡದ ಅವಶ್ಯಕತೆಯಿರುವಾಗ ಬಜೆಗಿಡವನ್ನು ಹುಡುಕಿಕೊಂಡು ಹೋಗುವುದರ ಬದಲು ಅಂಗಡಿಯಲ್ಲಿ ದೊರೆಯುವ ಒಣಗಿದ ಬಜೆ ತುಂಡುಗಳನ್ನು ಬಳಸಬಹುದು

## ಉಪಯೋಗಗಳು

**ಸೂಚನೆ** : ಉಷ್ಣ ಮತ್ತು ಪಿತ್ತ ಅಧಿಕವಾಗಿರುವವರಿಗೆ ಈ ಮೂಲಿಕೆಯ ಸೇವನೆ ಕೊಂಚ ಅಹಿತ ಪರಿಣಾಮ ಉಂಟು ಮಾಡುತ್ತದೆ ನಿವಾರಣೆಗೆ ಸೊಂಪು ಮತ್ತು ನಿಂಬೆಹಣ್ಣಿನ ರಸ ಸೇವಿಸಬೇಕು.

1 ಬಜೆಯನ್ನು ಸುಟ್ಟು ಭಸ್ಮವನ್ನು ಮಾಡಿಕೊಂಡು $^1/_2$ ಚಮಚ ಭಸ್ಮಕ್ಕೆ ಸ್ವಲ್ಪ ಜೇನುತುಪ್ಪ ಸೇರಿಸಿ ನೆಕ್ಕಿಸಬೇಕು. ಈ ಚಿಕಿತ್ಸೆಯನ್ನು ದಿವಸಕ್ಕೆ 2-3 ವೇಳೆ ಮಾಡುವುದರಿಂದ ನೆಗಡಿ, ಕೆಮ್ಮು ಕಡಿಮೆಯಾಗುತ್ತದೆ

2 ಬಜೆಯನ್ನು ಕೆಂಡದ ಮೇಲೆ ಹಾಕಿ ಹೊಗೆಯುಂಟು ಮಾಡಿದರೆ ಆ ಜಾಗದಲ್ಲಿ ಸೊಳ್ಳೆಗಳು ಸೇರುವುದಿಲ್ಲ

3 ಬಜೆಯನ್ನು ತೇಯ್ದು ತುಪ್ಪದೊಡನೆ ಕಲಸಿ ಕೆಲವು ದಿವಸ ಮಕ್ಕಳಿಗೆ ತಿನ್ನಿಸುವುದರಿಂದ ವಾಕ್ ಶಕ್ತಿ, ಬುದ್ಧಿಶಕ್ತಿ ಮತ್ತು ಜ್ಞಾಪಕ ಶಕ್ತಿ ಹೆಚ್ಚಾಗುತ್ತದೆ

4 ಬಟ್ಟೆಯಲಿ ಶೋಧಿಸಿದ ಬಜೆಯ ಚೂರ್ಣ 10 ಗ್ರಾಂನಷ್ಟನ್ನು ದಿವಸಕ್ಕೊಮ್ಮೆ ಬೆಳಗ್ಗೆ ಬಿಸಿ ನೀರಿನಲ್ಲಾಗಲಿ ಅಥವಾ ಜೇನುತುಪ್ಪದಲ್ಲಾಗಲಿ 40 ದಿವಸ ಸೇವಿಸುವುದರಿಂದ ಅಪಸ್ಮಾರ (ಮೂರ್ಛೆ) ಗುಣವಾಗುತ್ತದೆ.

5 ಬಜೆಯನ್ನು ಅರೆದು ಲೇಪಿಸುವುದರಿಂದ, ಸಂಧಿವಾತ ಮತ್ತು ಲಕ್ವ (Paralysis) ಗುಣವಾಗುತ್ತದೆ.

6 ಹಸಿ ಬಜೆಯ ರಸವನ್ನು ಕಿವಿಗೆ ಹಿಂಡುವುದರಿಂದ ಕಿವಿನೋವು ವಾಸಿಯಾಗುತ್ತದೆ. ಬಜೆಯ ಗಂಧ ತಯಾರಿಸಿಕೊಂಡು ಸೇವಿಸುವುದರಿಂದ, ಅರುಚಿ, ಅಜೀರ್ಣ, ಹೊಟ್ಟೆನೋವು ಮತ್ತು ಮೂಲವ್ಯಾಧಿ ಗುಣವಾಗುತ್ತವೆ

7 ಬಜೆಯ ಸೇವನೆಯಿಂದ ಜಂತುಹುಳುಗಳು ನಾಶವಾಗುತ್ತವೆ.

8 ಬಜೆಯ ಚೂರ್ಣ ಸುಮಾರು 300 ಮಿ ಗ್ರಾಂ. ಮತ್ತು 5-10ಗ್ರಾಂ ಸೈಂಧಲವಣ ಇವೆರಡನ್ನು ನೀರಿನೊಡನೆ ಕುಡಿಯುವುದರಿಂದ ಕಫ ವಾಂತಿಯಾಗಿ ಕೆಮ್ಮು ಶಮನವಾಗುತ್ತದೆ

9 ಬಜೆ, ನಾಗಕೇಸರಿ, ಹಿಪ್ಪಲಿ ಬೇರಿನ ಚೂರ್ಣ ಇವುಗಳನ್ನು ಸೇರಿಸಿ ಸೇವಿಸುವುದರಿಂದ ಸುಖ ಪ್ರಸವವಾಗುತ್ತದೆ

10 ಬಜೆಯ ಚೂರ್ಣ ಅಥವಾ ಕಷಾಯ ಸೇವನೆಯಿಂದ ಮೂತ್ರಕೋಶದ ಕಲ್ಲು ಕರಗಿ ಹೋಗುತ್ತದೆ. ಮೂತ್ರ ಬಂಧನವೂ ನಿವಾರಣೆಯಾಗುತ್ತದೆ

11 ಮಕ್ಕಳಲ್ಲಿ ಹಲ್ಲು ಹುಟ್ಟುವಾಗ ಜ್ವರ ಕಾಣಿಸಿಕೊಂಡಲ್ಲಿ ಬಜೆಯನ್ನು ಅರೆದು ತಿನ್ನಿಸುವುದರಿಂದ ಜ್ವರ ವಾಸಿಯಾಗುತ್ತದೆ





ಚಿತ್ರ 72 · ಬ್ರಹ್ಮದಂಡೆ - ಸಂಯುಕ್ತ ಹೂ ಚೆಂಡು ಇರುವ ರೆಂಬೆ

# ಬ್ರಹ್ಮದಂಡೆ

| | |
|---|---|
| ವೈಜ್ಞಾನಿಕ ಹೆಸರು | ಎಕಿನಾಪ್ಸ್ ಎಕಿನೇಟಸ್<br>[Echinops echinatus Roxb ] |
| ಸಸ್ಯದ ಕುಟುಂಬ | ಆಸ್ಟಿರೇಸಿ [Asteraceae] |
| ಕನ್ನಡದ ಇತರ ಹೆಸರುಗಳು | ಉತ್ಕಂಠ, ಕಂಟಾಲು, ನರಿಮುಳ್ಳು,<br>ನಾಯಿಮುಳ್ಳು |
| ಇತರ ಭಾಷೆಯ ಹೆಸರುಗಳು | ಸಂ - ಕಂಟಲು, ಉತ್ತತ್ತಿ, ಉತ ಕಂಟಕ<br>ಹಿಂ - ಉತಕಂಟ, ಗೊಕ್ರು<br>ತೆ - ಮುಳ್ಳುಬಂತಿ<br>ಇಂ - ಹೆಡ್ ಅವಾನ್ ಹೆಡ್,<br>ಕ್ಯಾಮೆಲ್ಸ್ ತಿಸಲ್ |

**ಪರಿಚಯ**

ಈ ಮೂಲಿಕೆಯು ಬೀಳು ಭೂಮಿಯಲ್ಲಿ ಕಳ್ಳಿ ಕುರುಚಲು ಸಸ್ಯಾವರಣದಲ್ಲಿ ಮತ್ತು ಹೊಲದ ಬದುಗಳಲ್ಲಿ ಬೆಳೆಯುತ್ತದೆ ಗಿಡದ ಕಾಂಡವು ಬಹುವಾಗಿ ಕವಲೊಡೆದು ಬೆಳೆಯುವುದರಿಂದ ಸಣ್ಣ ಪೊದೆಯಂತೆ ಕಾಣುತ್ತದೆ ಗಿಡವು 1-2 ಅಡಿ ಎತ್ತರ ಬೆಳೆಯುತ್ತದೆ ಗಿಡದ ಮೇಲೆಲ್ಲಾ ಬಿಳಿ ಬಣ್ಣದ ದೂಳಿನಂತಹ ರೋಮಗಳಿರುತ್ತವೆ. ಸರಳವಾದ ಎಲೆಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ ಎಲೆಗಳ ಅಂಚು ಸೀಳಿರುತ್ತದೆ, ಸೀಳುಗಳ ತುದಿ ಮುಳ್ಳಿನಂತೆ ಚೂಪಾಗಿರುತ್ತದೆ ಎಲೆಯ ಕಂಕುಳಿನಿಂದ ಮತ್ತು ಕಾಂಡದ ತುದಿಯಿಂದ ಮುಳ್ಳುಗಳಿರುವ ಸಂಯುಕ್ತ ಹೂ ಚೆಂಡು ಬೆಳೆಯುತ್ತದೆ ಹೂ ಚಂಡಿನಲ್ಲಿ ಬಿಳುಪಾದ ಹೂಗಳಿರುತ್ತವೆ

## ಉಪಯೋಗಗಳು

1 ಬ್ರಹ್ಮದಂಡೆ ಸಮೂಲವನ್ನು ಗುಗ್ಗುಲದೊಡನೆ ಮಿಶ್ರಮಾಡಿ ಲೇಪ ಮಾಡಿದರೆ ಎಲ್ಲಾ ಬಗೆಯ ಚರ್ಮವ್ಯಾಧಿಗಳು ಗುಣವಾಗುತ್ತವೆ

2 ಬ್ರಹ್ಮದಂಡೆ ಬೇರಿನ ತೊಗಟೆಯನ್ನು ಚೂರ್ಣ ಮಾಡಿಕೊಂಡು ಮುತ್ತುಗದ ಪಂಚಾಂಗದ ರಸದೊಡನೆ ಸೇವನೆ ಮಾಡಿದರೆ ಸ್ತ್ರೀಯರ ಮುಟ್ಟಿಗೆ ಸಂಬಂಧಿಸಿದ ದೋಷಗಳು ಗುಣವಾಗುತ್ತವೆ.

3 ಬ್ರಹ್ಮದಂಡೆ, ಗುಳ್ಳಿಕಾಯಿ ಮತ್ತು ಅಶ್ವಗಂಧ ಇವುಗಳ ಸಮೂಲದ ಚೂರ್ಣವನ್ನು ಬೆಣ್ಣೆಯೊಡನೆ ಸೇವಿಸಿದರೆ ವೀರ್ಯವೃದ್ಧಿಯುಂಟಾಗುತ್ತದೆ

4 ಬೇರಿನ ಕಷಾಯ ಕುಡಿಯುವುದರಿಂದ, ಹಸಿವಾಗದಿರುವಿಕೆ, ಗಂಡಾಮಾಲೆ, ಮೇಹವ್ಯಾಧಿ ಮತ್ತು ಜ್ವರ ವಾಸಿಯಾಗುತ್ತದೆ

5 ಬ್ರಹ್ಮದಂಡೆಯ ಬೇರನ್ನು ಅಕ್ಕಿಗಚ್ಚಿನೊಡನೆ ಅರೆದು ಗಂಡಾಮಾಲೆಗೆ ಲೇಪಿಸುವುದರಿಂದ ಬೇಗ ಒಡೆದು ಶ್ರೀಘ್ರವಾಗಿ ಗುಣವಾಗುತ್ತದೆ

6 ಬ್ರಹ್ಮದಂಡೆ ಗಿಡದ ಬೇರಿನ ರಸ 4 ಚಮಚ ತೆಗೆದುಕೊಂಡು ಅದಕ್ಕೆ 2 ಚಮಚ ಜೇನುತುಪ್ಪ ಸೇರಿಸಿ ನಿತ್ಯ ಬೆಳಗ್ಗೆ 7 ದಿವಸ ಸೇವಿಸಿ 8ನೆಯ ದಿವಸ ವಿರೇಚನ ತೆಗೆದುಕೊಳ್ಳುವುದರಿಂದ ಜಂತುಹುಳುಗಳು ಬಿದ್ದು ಹೋಗುತ್ತವೆ

7 ಬ್ರಹ್ಮದಂಡೆ ಗಿಡದ ಪೂರ್ವ ದಿಕ್ಕಿಗೆ ಹರಿದ ಬೇರನ್ನು ತಂದು ನೆಗ್ಗಿಲು ಗಿಡದ ಸಮೂಲದೊಡನೆ ಅರೆದು ಬಾವಿನ ಮೇಲೆ ಲೇಪಿಸುತ್ತಾರೆ.

8 ಬ್ರಹ್ಮದಂಡೆಯ ಬೇರನ್ನು ಎಳ್ಳೆಣ್ಣೆಯಲ್ಲಿ ಅರೆದು ನರೋಲಿ ಮೇಲೆ ಲೇಪಿಸುತ್ತಾರೆ



# ಬಿಲ್ವಪತ್ರೆ ಮರ (ಬಿಲ್ಪತ್ರೆ ಮರ)

| | |
|---|---|
| ವೈಜ್ಞಾನಿಕ ಹೆಸರು | ಎಗಿಲ್ ಮಾರ್ಮಿಲೋಸ್<br>[Aegle marmelos(L )Corr ] |
| ಸಸ್ಯದ ಕುಟುಂಬ | ರೂಟೇಸಿ [Rutaceae] |
| ಕನ್ನಡದ ಇತರ ಹೆಸರುಗಳು | ಬಿಲ್ವ, ಬಿಲ್ಲಡು, ಬಿಲ್ಲಪತ್ರೆ, ಬೆಳವಿನ ಮರ, ಬೇಲಿಪತ್ರೆ, ಮಲಾರ |
| ಇತರ ಭಾಷೆಯ ಹೆಸರುಗಳು | ಸಂ. - ಬಿಲ್ವ, ಶ್ರೀಫಲ, ಶಾಂಡಿಲ್ಯ, ಶೈಲೂಷ, ಮಾಲೂರ<br>ಹಿಂ - ಬೇಲ್<br>ತ - ಬಿಲ್ವ, ವಿಲ್ವಂ<br>ತೆ. - ಮಾರೇಡು, ವಂಡು ಬಿಲ್ವ<br>ಇಂ. - ಬೇಲ್ ಫ್ರೂಟ್, ಸ್ಟೋನ್ ಆ್ಯವಲ್, ಹೋಲಿಫ್ರೂಟ್, ಬೆಂಗಾಲ್ ಕ್ವಿನ್ಸ್ |

**ಪರಿಚಯ**

ಮಹಾ ಶಿವರಾತ್ರಿಯ ದಿವಸ ಬಿಲ್ವಪತ್ರೆಯಿಂದ ಶಿವನನ್ನು ಪೂಜಿಸಿದರೆ ಶಿವನು ಒಲಿಯುವನೆಂಬ ನಂಬಿಕೆಯಿದೆ ಆದುದರಿಂದಲೇ ಶಿವನ ದೇವಾಲಯವಿರುವ ಕಡೆಗಳಲ್ಲಿ ನಮ್ಮ ಪೂರ್ವಿಕರು ಈ ಮರುವನ್ನು ಬೆಳೆಸುತ್ತಿದ್ದರೆಂದು ಕಂಡುಬರುತ್ತದೆ ಪ್ರಾಕೃತಿಕವಾಗಿ ಈ ಮರಗಳು ಕಾಣುವುದು ಅಪರೂಪ.

ಈ ಮರವು ಸಾಧಾರಣ ಎತ್ತರಕ್ಕೆ ಬೆಳೆಯುತ್ತದೆ ಬೇಸಿಗೆಯಲ್ಲಿ ಎಲೆಗಳು ಉದುರಿ ಹೋಗುವುದರಿಂದ ಬೋಳು ಬೋಳಾಗಿ ಕಾಣುತ್ತದೆ. ಮರದಲ್ಲಿ 1 ಅಂಗುಲ ಉದ್ದದ ಮುಳ್ಳುಗಳಿರುತ್ತವೆ ಸಂಯುಕ್ತ ಎಲೆಯಲ್ಲಿ 3 ಕಿರು



ಚಿತ್ರ 73 · ಬಿಲ್ವಪತ್ರೆ ಮರ – ಹೂ ಮತ್ತು ಕಾಯಿ ಇರುವ ರೆ

7 14-28 ಮಿ ಲೀ. ಬಿಲ್ಪತ್ರೆ ಎಲೆಯ ರಸಕ್ಕೆ ಜೇನುತುಪ್ಪ ಸೇರಿಸಿ ದಿವಸಕ್ಕೆ ಎರಡು ಬಾರಿ ಕುಡಿಯುವುದರಿಂದ ಪ್ರಮೇಹ ವಾಸಿಯಾಗುತ್ತದೆ

8 ಬಿಲ್ವಪತ್ರೆ ಮರದ ಬಂಕೆ, ದೊಡ್ಡ ಏಲಕ್ಕಿ ಇವೆರಡನ್ನೂ $^1/_4$ - $^1/_4$ ತೊಲದಂತೆ ತೆಗೆದುಕೊಂಡು ಮೊಸರಿನ ತಿಳಿನೀರಿನಲ್ಲಿ ಅರೆದು ದಿವಸಕ್ಕೆ 2-3 ಬಾರಿಯಂತೆ 2-3 ದಿವಸ ಸೇವಿಸುವುದರಿಂದ ಅತಿಸಾರ ನಿಲ್ಲುತ್ತದೆ

9 ಬಿಲ್ಪತ್ರೆಯ ಎಳೆಕಾಯಿಯ ತಿರುಳನ್ನು ಒಣಗಿಸಿ ಚೂರ್ಣ ಮಾಡಿಟ್ಟುಕೊಂಡು ಬೇಕೆಂದಾಗ 3-6 ಗ್ರಾಂ ಪುಡಿಯನ್ನು ಮಜ್ಜಿಗೆಗೆ ಸೇರಿಸಿ ಮಿಶ್ರಣವನ್ನು ಮೂರು ಭಾಗ ಮಾಡಿಕೊಂಡು ಒಂದು ಹೊತ್ತಿಗೆ ಒಂದು ಭಾಗದಂತೆ ದಿವಸಕ್ಕೆ 3 ಸಾರಿ ಕುಡಿಯುವುದರಿಂದ ಅತಿಸಾರ (Diarrhoea) ಮತ್ತು ರಕ್ತಾತಿಸಾರ (Dysentery) ಗುಣವಾಗುತ್ತದೆ

10 ಬಿಲ್ವಪತ್ರೆ ಕಾಯಿಯ ಚಿಪ್ಪನ್ನು ಎದೆ ಹಾಲಿನೊಡನೆ ತೇಯ್ದು ಗಂಧ ಮಾಡಿಕೊಂಡು ತುಟಿಯಲ್ಲಿ ಕಂಡು ಬರುವ ಬಿಳಿ ಮಚ್ಚೆಗೆ ಕೆಲ ದಿವಸ ಲೇಪಿಸಲು ವಾಸಿಯಾಗುತ್ತದೆ.

11 ಬಿಲ್ಪತ್ರೆಕಾಯಿಯಯೊಳಗಿನ ತಿರುಳು, ಕುರಿಹಾಲು ಮತ್ತು ಎಳ್ಳೆಣ್ಣೆ ಸೇರಿಸಿ ಕಾಯಿಸಿ ತೈಲ ಮಾಡಿಕೊಂಡು ಹುಟ್ಟಿನಿಂದಲ್ಲದೆ ಮಧ್ಯ ಕಾಲದಲ್ಲಿ ಬೇರೆ ಕಾರಣದಿಂದ ಕಿವಿ ಕಿವುಡಾಗಿದ್ದರೆ ಮೇಲಿನ ತೈಲವನ್ನು 5-6 ದಿವಸ ಕಿವಿಗೆ ಹಾಕಬೇಕು

12 ಬಿಲ್ಪತ್ರೆ ಹಣ್ಣಿನ ತಿರುಳು 1ಗ್ರಾಂ ಮತ್ತು 1 ಗ್ರಾಂ ಶುಂಠಿ ಸೇರಿಸಿ ಅರೆದು ದಿವಸಕ್ಕೆ ಎರಡು ಬಾರಿ ಸೇವಿಸುವುದರಿಂದ ಮೂಲವ್ಯಾಧಿ ಗುಣವಾಗುತ್ತದೆ

13 ಬಿಲ್ವದ ಹಣ್ಣನ್ನು ಬೆಂಬೂದಿಯಲ್ಲಿ ಬೇಯಿಸಿ ಅದರ ತಿರುಳನ್ನು ಹೊತ್ತಿಗೆ 1 ರಿಂದ 2 ತೊಲದಂತೆ ಬೆಲ್ಲದೊಡನೆ ಸೇರಿಸಿ ದಿವಸಕ್ಕೆ ಎರಡು ಬಾರಿ ಸೇವಿಸುವುದರಿಂದ ಆಮಾತಿಸಾರ ಗುಣವಾಗುತ್ತದೆ

14 ಬಿಲ್ವದ ಹಣ್ಣಿನ ತಿರುಳನ್ನು ಸ್ವಲ್ಪ ನೀರಿನಲ್ಲಿ ಕದಡಿ ನಂತರ ಬಟ್ಟೆಯಲ್ಲಿ

ಶೋಧಿಸಿಕೊಂಡು ತಕ್ಕಷ್ಟು ಹಾಲು, ಸಕ್ಕರೆ ಸೇರಿಸಿ ಕುಡಿಯುವುದರಿಂದ ಮೂತ್ರ ಬಂಧನವಾಗುವುದಿಲ್ಲ.

15 ಬಿಲ್ವಪತ್ರೆ ಬೀಜವನ್ನು ಜಜ್ಜಿ, ತ್ರಿಫಲ ಕಷಾಯದಲ್ಲಿ ಏಳು ಸಲ ಭಾವನೆ ಮಾಡಿ ನಂತರ ಜಜ್ಜಿದ ಬೀಜಗಳಿಂದ ತೈಲ ತೆಗೆದು ಒಂದು ಮಡಿಕೆಯಲ್ಲಿ ಹಾಕಿ ಬಾಯಿ ಸೀಲುಮಾಡಿ ಭೂಮಿಯೊಳಗೆ ಒಂದು ತಿಂಗಳು ಮುಚ್ಚಿಟ್ಟು ನಂತರ ಆ ತೈಲವನ್ನು ಶುಭ್ರವಾದ ಬಾಟಲ್‌ನಲ್ಲಿ ಸಂಗ್ರಹಿಸಿಟ್ಟುಕೊಳ್ಳಬೇಕು ರೋಗಿಗೆ ವಾಂತಿ ಮತ್ತು ಭೇದಿಯಿಂದ ದೇಹ ಶುದ್ಧಿ ಮಾಡಿ ಈ ತೈಲ ಕುಡಿಸುವುದರಿಂದ ಸಕಲ ವ್ಯಾಧಿಗಳು ಗುಣವಾಗುತ್ತವೆ (ಈ ಔಷಧವನ್ನು ದಿವಸಕ್ಕೆ 5 ಮಿ.ಲೀ ಗಿಂತ ಹೆಚ್ಚು ಸೇವಿಸಬಾರದು, ಹೆಚ್ಚಾಗಿ ಸೇವಿಸುವುದರಿಂದ ದಾಹ ಮತ್ತು ಮೂರ್ಛೆಯುಂಟಾಗುತ್ತದೆ.)





ಚಿತ್ರ 74 ಬಿಳಿ ಎಕ್ಕ - ಹೂಗಳಿರುವ ರೆಂಬೆ

# ಬಿಳಿಎಕ್ಕ

| | |
|---|---|
| ವೈಜ್ಞಾನಿಕ ಹೆಸರು | ಕ್ಯಾಲೊಟ್ರೊಪಿಸ್ ಪ್ರೊಸೀರ (Calotropis procera (Ait ) R Br ) |
| ಸಸ್ಯದ ಕುಟುಂಬ | ಅಸ್ಕ್ಲಿಪಿಯಡೇಸಿ (Asclepiadaceae) |
| ಕನ್ನಡದ ಇತರ ಹೆಸರುಗಳು | ಅರ್ಕ, ಎಕ್ಕ, ದೇವರ ಎಕ್ಕ |
| ಇತರ ಭಾಷೆಯ ಹೆಸರುಗಳು | ಸಂ - ಅಲರ್ಕ, ಶ್ವೇತಾರ್ಕ<br>ಹಿಂ - ಅಕ್ಕಡ, ಮೊದರ್, ಸಫೀದ್ ಆರ್ಕ<br>ತ. - ವೆಳೇರುಕ್ಕು, ಎರುಕ್ಕುಂ<br>ತೆ. - ಜಿಲ್ಲೇಡು<br>ಇಂ - ಸ್ವಾಲೊವಾರ್ಟ |

## ಪರಿಚಯ

ಬಿಳಿ ಎಕ್ಕದ ಗಿಡವನ್ನು ಪೂಜಿಸಿದರೆ ಸೂರ್ಯನನ್ನು ಪೂಜಿಸಿದ ಫಲ ದೊರೆಯುತ್ತದೆ ಎಂಬ ನಂಬಿಕೆ ನಮ್ಮಲ್ಲಿ ಅನಾದಿಕಾಲದಿಂದಲೂ ಬೇರುಬಿಟ್ಟಿದೆ. ಆದುದರಿಂದ ಈ ಗಿಡವನ್ನು ನವಗ್ರಹಗಳನ್ನು ಪೂಜಿಸುವ ದೇವಾಲಯಗಳ ಸಮೀಪ ಬೆಳೆಸಿರುವುದನ್ನು ಕಾಣಬಹುದು ಬಿಳಿಎಕ್ಕ ಬಯಲಿನಲ್ಲಿ ಎಲ್ಲಂದರಲ್ಲಿ ಬೆಳೆಯುವುದನ್ನು ಕಾಣುವುದು ಅಪರೂಪ ಆದರೆ ದೇವಾಲಯಗಳ ಸಮೀಪ ಮತ್ತು ಪಾಳು ಬಿದ್ದ ಕೋಟೆ ಕೊತ್ತಲಗಳ ಬಯಲಿನಲ್ಲಿ ಬೆಳೆದಿರುವುದನ್ನು ಕಾಣಬಹುದು.

ಈ ಗಿಡವು ಬುಡದಲ್ಲಿ ಕವಲೊಡೆದು ಪೊದೆಯಂತೆ ಬೆಳೆಯುತ್ತದೆ. ಕೆಲವೊಮ್ಮೆ ಚಿಕ್ಕ ಮರವಾಗಿ ಬೆಳೆಯುವುದೂ ಉಂಟು ಗಿಡದ ಎಲ್ಲಾ ಭಾಗದ ಮೇಲೆ ಚಿಕ್ಕ ಚಿಕ್ಕ ಬಿಳಿಯ ರೋಮಗಳಿರುತ್ತವೆ. ಕಾಂಡ, ಎಲೆ ಮತ್ತು ಹೂವಿನ ತೊಟ್ಟಿನೊಳಗೆ ಬಿಳುಪಾದ ಸಸ್ಯಕ್ಷೀರವಿರುತ್ತದೆ ಚಿಕ್ಕ ತೊಟ್ಟಿನ ದಪ್ಪನಾದ ಎಲೆಗಳು ಕಾಂಡದ ಮೇಲೆ ಅಭಿಮುಖವಾಗಿ ಜೋಡಣೆಯಾಗಿರುತ್ತವೆ ಕಾಂಡದ

ತುದಿಯಲ್ಲಿ ಮತ್ತು ಎಲೆಯ ಕಂಕುಳಿನಿಂದ ಬಿಳಿ ಹೂಗಳು ಗೊಂಚಲಾಗಿ ಬಿಡುತ್ತವೆ. ಒಂದೇ ಹೂವಿನ ತೊಟ್ಟಿನ ಮೇಲೆ ಜೋಡಿ ಕಾಯಿಗಳಿರುತ್ತವೆ ಬೀಜದ ತುದಿಯಲ್ಲಿ ರೇಷ್ಮೆಯಂತಹ ಕೂದಲುಗಳಿರುತ್ತವೆ ಇದರಿಂದಾಗಿ ಬೀಜಗಳು ಗಾಳಿಯ ಸಹಾಯದಿಂದ ದೂರದೂರಕೆ ಪ್ರಸಾರವಾಗುತ್ತವೆ

ಎಕ್ಕದ ಗಿಡದಲ್ಲಿ ಎರಡು ಪ್ರಭೇದಗಳನ್ನು ಗುರುತಿಸುತ್ತಾರೆ ಬಿಳಿ ಹೂ ಬಿಡುವ ಬಿಳಿ ಎಕ್ಕ (ಸಂ -ಅರ್ಕ) ಮತ್ತು ತಿಳಿ ನೇರಳೆ ಹೂ ಬಿಡುವ ಕರಿ ಎಕ್ಕ (ಸಂ.-ಅಲಾರ್ಕ) ಎಂದು. ಕರಿಎಕ್ಕದ ಗಿಡವನ್ನು ವೈಜ್ಞಾನಿಕವಾಗಿ ಕ್ಯಾಲೊಟ್ರೊಪಿಸ್ ಜೈಗ್ಯಾಂಟಿಯ (Calotropis gigatea R Br ) ಎಂದು ಕರೆಯುತ್ತಾರೆ ಕೆಲವು ಕಡೆ ಬಿಳಿಎಕ್ಕ ಔಷಧಕ್ಕೆ ಶ್ರೇಷ್ಠವೆಂದು ತಿಳಿಯುತ್ತಾರೆ ಕೇರಳ ಮತ್ತಿತ್ತರ ಕಡೆಗಳಲ್ಲಿ ಕರಿಎಕ್ಕ ಶ್ರೇಷ್ಠವೆಂಬ ಅಭಿಪ್ರಾಯವಿದೆ ಔಷಧಿಯ ಗುಣವು ಸಾಮಾನ್ಯವಾಗಿ ಎರಡೂ ಬಗೆಯ ಗಿಡಗಳಲ್ಲಿ ಒಂದೇ ಆಗಿರುತ್ತದೆ ಉಪಯೋಗಿಸುವಾಗ ಎರಡನ್ನೂ ಬಳಸಬಹುದು. ಯಾವ ಚಿಕಿತ್ಸಾ ಕ್ರಮದಲ್ಲಿ ಬಿಳಿಎಕ್ಕ ಎಂದು ಹೆಸರಿಸಲಾಗಿರುತ್ತದೊ ಅಲ್ಲಿ ಅದೇ ಮೂಲಿಕೆಯನ್ನು ಬಳಸಬೇಕಾಗುತ್ತದೆ ಉಳಿದಂತೆ ಎರಡರಲ್ಲಿ ದೊರೆಯುವ ಯಾವುದೊಂದನ್ನು ಬಳಸಬಹುದು

## ಉಪಯೋಗಗಳು

**ಸೂಚನೆ :** ಈ ಮೂಲಿಕೆಯ ಭಾಗಗಳನ್ನು ಔಷಧ ರೂಪದಲ್ಲಿ ಹೊಟ್ಟೆಗೆ ತಿನ್ನಿಸ ಬೇಕಾದಲ್ಲಿ ಅಂತಹ ಭಾಗವನ್ನು ನೆರಳಿನಲ್ಲಿ ಒಣಗಿಸಿ ಚೂರ್ಣ ಮಾಡಿಕೊಂಡು ಏಳು ಸಾರಿ ಹಸುವಿನ ಹಾಲಿನಲ್ಲಿ ಬಾವನೆ ಕೊಟ್ಟು ಅನಂತರ ಮತ್ತೇ ಏಳು ಸಲ ಎಮ್ಮೆ ಹಾಲಿನಲ್ಲಿ ಬಾವನೆ ಕೊಟ್ಟು ಉಪಯೋಗಿಸಬೇಕು. ಇದರಿಂದ ಉತ್ತಮ ಫಲಿತಾಂಶ ದೊರೆಯುತ್ತದೆ

1 ಎಕ್ಕದ ಬೇರನ್ನು ನಿಂಬೆಹಣ್ಣಿನ ರಸದಲ್ಲಿ ಅರೆದು 2 ಆಣೆ ತೂಕದಷ್ಟು ತಿನ್ನಿಸುವುದರಿಂದ ಸರ್ವವಿಧದ ಜ್ವರ ವಾಸಿಯಾಗುತ್ತದೆ

2 ಎಕ್ಕದ ಬೇರನ್ನು ನಿಂಬೆಹಣ್ಣಿನ ರಸದಲ್ಲಿ ತೇಯ್ದು ಗಂಧ ಮಾಡಿಕೊಂಡು ಸನ್ನಿಯಾದವರ ಅಂಗಾಲು, ನೆತ್ತಿಗೆ ಹಾಕಿ ತಿಕ್ಕಬೇಕು ಮತ್ತು ಸ್ವಲ್ಪ ಗಂಧವನ್ನು ತಿನ್ನಿಸಬೇಕು

3 ಎಕ್ಕದ ಬೇರು $^1/_2$ತೊಲದಷ್ಟನ್ನು 1 ತೊಲೆ ಹಸಿಶುಂಠಿ ರಸದೊಡನೆ ಅರೆದು ಕುಡಿಸುವುದರಿಂದ ಬೆನ್ನುಹುರಿ ನೆಳೆತದಿಂದ ಬಂದ ಚಳಿಜ್ವರ ವಾಸಿಯಾಗುತ್ತದೆ.

4 ಎಕ್ಕದ ಬೇರನ್ನು ತಣ್ಣೀರಿನಲ್ಲಿ ಅರೆದು ಚೇಳು ಕಡಿದವರಿಗೆ ಕುಡಿಸುವುದರಿಂದ ಚೇಳಿನ ವಿಷ ಪರಿಹಾರವಾಗುತ್ತದೆ.

5 ಎಕ್ಕದ ಬೇರಿನ ತೊಗಟೆಯುನ್ನು ನೆರಳಿನಲ್ಲಿ ಒಣಗಿಸಿ ಚೂರ್ಣ ಮಾಡಿಟ್ಟುಕೊಂಡು ಹೊತ್ತಿಗೆ 2-5 ಗುಂಜಿ ತೂಕದಷ್ಟು ಚೂರ್ಣವನ್ನು ಜೇನುತುಪ್ಪದೊಡನೆ ದಿನಕ್ಕೆರಡು ಬಾರಿಯಂತೆ 2-3 ವಾರ ಸೇವಿಸುವುದರಿಂದ ಕಫಜನ್ಯ ಕೆಮ್ಮು ಕಡಿಮೆಯಾಗುತ್ತದೆ

6 ಎಕ್ಕದ ಬೇರಿನ ತೊಗಟೆ 2ಭಾಗ, ಬಿಳಿ ಮೆಣಸು 1ಭಾಗ, ಇವೆರಡನ್ನೂ ನುಣ್ಣಗೆ ಚೂರ್ಣಮಾಡಿಕೊಂಡು ಕುರಿಯ ಹಾಲಿನಲ್ಲಿ ಅರೆದು ಕಡಲೆಕಾಳು ಗಾತ್ರದ ಮಾತ್ರೆ ಮಾಡಿಕೊಂಡು ಹೊತ್ತಿಗೆ ಒಂದು ಮಾತ್ರೆಯಂತೆ ದಿವಸಕ್ಕೆ ಎರಡು ಹೊತ್ತು ಬಿಸಿನೀರಿನೊಡನೆ ನಾಲ್ಕಾರು ದಿವಸ ಸೇವಿಸುವುದರಿಂದ ಮಲೇರಿಯಾ ಜ್ವರ ವಾಸಿಯಾಗುತ್ತದೆ

7 ಎಕ್ಕದ ಬೇರನ್ನು ನಿಂಬೆಯ ರಸದಲ್ಲಿ ತೇಯ್ದು ಅದಕ್ಕೆ ಸ್ವಲ್ಪ ವುನುಗನ್ನು ನೇರಿಸಿ ತಿಕ್ಕಿ ವುುಖಕ್ಕೆ ಹಚ್ಚುವುದರಿಂದ ವುುಖದ ಬಂಗು ನಿವಾರಣೆಯಾಗುತ್ತದೆ

8 ಎಕ್ಕದ ಹಾಲಿಗೆ ಅರಿಸಿನ ವುಡಿ ಸೇರಿಸಿ ಪ್ರತಿದಿನ ಬೆಳಗ್ಗೆ ರಾತ್ರಿ ಹಚ್ಚುವುದರಿಂದ ಮುಖದ ಬಂಗು ನಿವಾರಣೆಯಾಗುತ್ತದೆ

9 ಕಾಲಿನಲ್ಲಿ ಸೇರಿದ ಮುಳ್ಳನ್ನು ತೆಗೆದ ನಂತರ ಎಕ್ಕದ ಹಾಲನ್ನು ಆ ಜಾಗದ ಮೇಲೆ ಹಾಕುವುದರಿಂದ ಮುಳ್ಳಿನ ವಿಷ ಪರಿಹಾರವಾಗುತ್ತದೆ.

10 ಎಕ್ಕದ ಹಾಲನ್ನು ಶುಚಿಮಾಡಿದ ವೂಲವ್ಯಾಧಿಯು ವೊಳಕೆಗೆ ಲೇಪಿಸುವುದರಿಂದ ಬೇಗ ವಾಸಿಯಾಗುತ್ತದೆ ಎಕ್ಕದ ಹಾಲಿಗೆ ಅರಿಸಿನ ಸೇರಿಸಿ ಬೇಕಾದರೂ ಮೂಲವ್ಯಾಧಿಯ ಮೊಳಕೆಯಮೇಲೆ ಲೇಪಿಸಬಹುದು

11 ಎಕ್ಕದ ಕಾಂಡದಿಂದ ಹಲ್ಲುಜ್ಜುವುದರಿಂದ ಹಲ್ಲುನೋವು ಕಡಿಮೆಯಾಗುತ್ತದೆ

12 ಶುದ್ಧಿಮಾಡಿದ ಎಕ್ಕದ ಪಂಚಾಂಗದ ಚೂರ್ಣವನ್ನು ಹಸುವಿನ ಹಾಲಿನೊಡನೆ ಸೇವಿಸುವುದರಿಂದ ದೇಹದ ಎಲ್ಲಾ ಧಾತುಗಳೂ ವೃದ್ಧಿಯಾಗುತ್ತವೆ. ಎಣ್ಣೆ ಪದಾರ್ಥ ವ್ಯರ್ಜ ಹಾಲು ಅನ್ನ ಪಥ್ಯ

13. ಎಕ್ಕದ ಗಿಡದ ತೊಪ್ಪಲನ್ನು ಒಣಗಿಸಿ ಚೂರ್ಣಮಾಡಿ, ವಸ್ತ್ರಗಾಳಿತ ಮಾಡಿಟ್ಟುಕೊಳ್ಳಬೇಕು. ಈ ಚೂರ್ಣವನ್ನು 1 ತೊಲದಷ್ಟು ತೆಗೆದುಕೊಂಡು ಬಿಸಿನೀರಿನಲ್ಲಿ ಕದಡಿ ಕುಡಿಸುವುದರಿಂದ ಅಕಸ್ಮಾತ್ತಾಗಿ ಮೂತ್ರ ಬಂದಾಗಿದ್ದರೆ ಮೂತ್ರ ಸಲೀಸಾಗಿ ಹೊರಬರುತ್ತದೆ (ಒಂದು ಹೊತ್ತಿನಂತೆ ಮೂರು ದಿವಸ ಕುಡಿಸಬೇಕು).

14 ಬಿಳಿಎಕ್ಕದ ಪಂಚಾಂಗವನ್ನು ನೆರಳಿನಲ್ಲಿ ಒಣಗಿಸಿ ಚೂರ್ಣಮಾಡಿ ಹಸುವಿನ ಹಾಲಿನಲ್ಲಿ ಏಳು ಸಾರಿ ಭಾವನೆ ಕೊಟ್ಟು ಹಲವಾರು ದಿವಸ ಸೇವಿಸುವುದರಿಂದ ಕ್ಷಯರೋಗ ಗುಣವಾಗುತ್ತದೆ

15 ಪದೇಪದೇ ಅಜೀರ್ಣವಾಗುತ್ತಿದ್ದರೆ ಎಕ್ಕದ ಸಮೂಲದ ಭಸ್ಮವನ್ನು ನಿತ್ಯ ಬೆಳಿಗ್ಗೆ, ರಾತ್ರಿ 4 ಗುಂಜಿಯಷ್ಟನ್ನು ಜೇನುತುಪ್ಪದೊಡನೆ 1-2 ವಾರ ಸೇವಿಸುವುದು

16 ಎಕ್ಕದ ಎಲೆ 6 ಅಥವಾ 7 ತೆಗೆದುಕೊಂಡು ಎಲೆಗಳ ಮಧ್ಯೆ ಬೆಳ್ಳುಳ್ಳಿ ಇಟ್ಟು ಕೆಂಡದ ಮೇಲೆ ಬೇಯಿಸಿ ಹಿಂಡಿ ರಸ ತೆಗೆದುಕೊಂಡು ಬಿಸಿ ಆರುವುದಕ್ಕೆ ಮುನ್ನ ಕಿವಿಗೆ ಹನಿಸಿದರೆ ಕಿವಿನೋವು ಕಡಿಮೆಯಾಗುತ್ತದೆ

17 ಒಣಗಿದ ಎಲೆಗಳನ್ನು ಚೂರ್ಣ ಮಾಡಿಕೊಂಡು ಗಾಯಗಳ ಮೇಲೆ ಸಿಂಪಡಿಸುವುದರಿಂದ ಅವು ಬೇಗ ವಾಸಿಯಾಗುತ್ತವೆ.

18 ಸಮ ಪ್ರಮಾಣದಷ್ಟು ಚೆನ್ನಾಗಿ ಬಲಿತ ಎಕ್ಕದ ಬೇರಿನ ತೊಗಟೆ ಮತ್ತು ಹಸಿಶುಂಠಿ ತೆಗೆದುಕೊಳ್ಳಬೇಕು ಈ ಎರಡನ್ನು ಈರುಳ್ಳಿಯ ರಸದಲ್ಲಿ ಅರೆದು ಕಡಲೆಕಾಳು ಗಾತ್ರದ ಮಾತ್ರೆ ಮಾಡಿಟ್ಟುಕೊಂಡು ಪ್ರತಿ ಅರ್ಧ

ಗಂಟೆಗೊಮ್ಮೆ ಈ ಮಾತ್ರೆಯನ್ನು ಬಿಸಿ ನೀರಿನಲ್ಲಿ ಅಥವಾ ಜೇನುತುಪ್ಪದೊಡನೆ ಸೇವಿಸಿದರೆ ಕಾಲರಾ ವಾಸಿಯಾಗುತ್ತದೆ

19 ಎಕ್ಕದ ಎಲೆ ಮತ್ತು ನುಗ್ಗೆಯ ಎಲೆಗಳನ್ನು ಅರೆದು ಮೂಲವ್ಯಾಧಿಯ ಮೊಳಕೆಗಳ ಮೇಲೆ ಲೇಪಿಸಿದರೆ ಮೂಲವ್ಯಾಧಿ ಪರಿಹಾರವಾಗುತ್ತವೆ

20 ಹಣ್ಣಾಗಿ ಬಿದ್ದ ಎಕ್ಕದ ಎಲೆಗಳನ್ನು ಸಂಗ್ರಹಿಸಿ ನೆರಳಿನಲ್ಲಿ ಒಣಗಿಸಿಟ್ಟು ಭಸ್ಮ ಮಾಡಿ ಪ್ರತಿದಿನ ವಯೋಮಾನಕ್ಕೆ ತಕ್ಕಂತೆ 2 ರಿಂದ 6 ಗುಂಜಿಯವರೆಗೆ ದಿನಕ್ಕೆರಡು ಬಾರಿ ಜೇನುತುಪ್ಪದೊಡನೆ ತಿನ್ನುವುದರಿಂದ ಅಪಸ್ಮಾರ ಪರಿಹಾರವಾಗುತ್ತದೆ

21 ಎಕ್ಕದ ಎಲೆಗೆ ಸ್ವಲ್ಪ ಹರಳೆಣ್ಣೆಯನ್ನು ಹಚ್ಚಿ ಹೆಂಚಿನ ಮೇಲಿಟ್ಟು ಬಿಸಿಮಾಡಿ ಪಟ್ಟುಕಟ್ಟುವುದರಿಂದ ನಾರುಹುಣ್ಣು ವಾಸಿಯಾಗುತ್ತದೆ.

22 7 ಬಿಳಿಎಕ್ಕದ ಎಲೆ, 3 ಮೆಣಸಿನಕಾಳು, 3 ಈರುಳ್ಳಿ, ಇವುಗಳನ್ನು ಕಲ್ವದಲ್ಲಿ ಹಾಕಿ ಅರೆದು ಪ್ರತಿದಿನ ಬೆಳಗ್ಗೆ ನೆಲ್ಲಿಕಾಯಿ ಗಾತ್ರ ಉಂಡೆ ಮಾಡಿ 2-3 ವಾರ ಸೇವಿಸುವುದರಿಂದ ಕಾಮಾಲೆ ರೋಗ (ಪಾಂಡುರೋಗ) ವಾಸಿಯಾಗುತ್ತದೆ

23 ಹಣ್ಣಾದ 2 ಎಕ್ಕದ ಎಲೆಗೆ, ಅವರೆಕಾಳು ಗಾತ್ರದಷ್ಟು ಹಿಂಗನ್ನು ನೀರಿನಲ್ಲಿ ತೇಯ್ದು ಲೇಪಿಸಿ, ಸ್ವಲ್ಪ ತುಪ್ಪ ಸವರಿ ಕೆಂಡದ ಮೇಲೆ ಬಿಸಿಮಾಡಿ ಹಿಂಡಿ ರಸ ತೆಗೆದುಕೊಂಡು ನೋವಿರುವ ಕಿವಿಗೆ ದಿವಸಕ್ಕೆ ಎರಡು ಹೊತ್ತು 3-4 ತೊಟ್ಟು ಹಾಕುವುದರಿಂದ ಕಿವಿನೋವು ಕಡಿಮೆಯಾಗುತ್ತದೆ. ಈ ಔಷಧಿಯನ್ನು ಆಗಾಗ ಹೊಸದಾಗಿ ಮಾಡಿಕೊಳ್ಳಬೇಕು

24 ಎಕ್ಕದ ಹೂವು 2-3, ಬೆಲ್ಲ $^1/_2$ ತೊಲ ಇವನ್ನು ಅರೆದು ಮೂರು ಉಂಡೆ ಮಾಡಿಕೊಂಡು, ಮುಟ್ಟಾಗುತ್ತಾ ಇದ್ದು ಬೇರೆ ಕಾರಣಗಳಿಂದ ಮುಟ್ಟು ನಿಂತು ಹೋದವರಿಗೆ ಘಂಟೆಗೆ ಒಂದು ಉಂಡೆಯಂತೆ ನುಂಗಿಸಿ ನೀರು ಕುಡಿಸಿದರೆ ಮುಟ್ಟಾಗುತ್ತದೆ ಚಿಕಿತ್ಸೆ ಒಂದೇ ದಿವಸಕ್ಕೆ ಸಾಕಾಗಬಹುದು

25 ಹೂವನ್ನು ಒಣಗಿಸಿ ಪುಡಿಮಾಡಿಟ್ಟುಕೊಂಡು ಒಂದು ಗುಲಗಂಜಿ ಪ್ರಮಾಣದ ಪುಡಿಯನ್ನು ಒಂದು ಚಮಚ ಜೇನುತುಪ್ಪಕ್ಕೆ ಸೇರಿಸಿ ಹಲವು ದಿವಸ ಸೇವಿಸುವುದರಿಂದ ಪ್ರಾಥಮಿಕ ಹಂತದ ಕುಷ್ಠರೋಗವು ಹತೋಟಿಗೆ ಬರುತ್ತದೆ ಈ ಸಂದರ್ಭದಲ್ಲಿ ಸಂಭೋಗವನ್ನು ತ್ಯಜಿಸಬೇಕು ಇದೇ ಚಿಕಿತ್ಸೆಯನ್ನು ಮೇಹರೋಗ, ಬಿಳಿಸೆರಗು ರೋಗವಿರುವವರು ಕೈಗೊಂಡಲ್ಲಿ ಅವರಿಗೂ ಉತ್ತಮ ಫಲಿತಾಂಶ ಕಂಡುಬರುತ್ತದೆ.

26 ಎಕ್ಕದ ಹೂ 1 ಹಿಡಿ ಮತ್ತು 1 ತೊಲ ನವಾಸಾಗರವನ್ನು ಸೇರಿಸಿ ಚೆನ್ನಾಗಿ ಅರೆದು ಬಿಲ್ಲೆ ಮಾಡಿ 3-4 ದಿವಸ ಕಟ್ಟುವುದರಿಂದ ತೊಡವಾಳೆಯ ಗಡ್ಡೆ ಒಡೆದು ಬೇಗ ವಾಸಿಯಾಗುತ್ತದೆ

27 ಎಕ್ಕದ 5 ಅಥವಾ 10 ಹೂಗಳನ್ನು ತೆಗೆದುಕೊಂಡು ಅದಕ್ಕೆ ಒಂದೆರಡು ಚಿಟಿಕೆ ಉಪ್ಪು ಸೇರಿಸಿ ಅರೆದು ತಿನ್ನುವುದು ದಿವಸಕ್ಕೆರಡು ಬಾರಿಯಂತೆ 1-2 ವಾರ ಸೇವಿಸುವುದರಿಂದ ಅಜೀರ್ಣ ನಿವಾರಣೆಯಾಗುತ್ತವೆ

28 ನೆಲಗಿರುಬ ಕಡಿದ ಜಾಗದಮೇಲೆ ಎಕ್ಕದ ಹಾಲನ್ನು ಸವರುವುದರಿಂದ ಉರಿ ಮತ್ತು ಊತ ಕಡಿಮೆಯಾಗುತ್ತದೆ

## ಪಶುರೋಗ ಚಿಕಿತ್ಸೆಯಲ್ಲಿ

1 ದೊಡ್ಡರೋಗದ ಪ್ರಾರಂಭಿಕ ಹಂತದಲ್ಲಿ ಬಿಳಿ ಎಕ್ಕದ ಬೇರಿನ ತೊಗಟೆ 100ಗ್ರಾಂ ನಷ್ಟು ತೆಗೆದುಕೊಂಡು ಕುಟ್ಟಿ ನೀರಿನೊಡನೆ ದಿವಸಕ್ಕೆ ಎರಡು ಬಾರಿಯಂತೆ ಕೆಲವು ದಿವಸ ಕೊಡುವುದರಿಂದ ದೊಡ್ಡರೋಗ ಹತೋಟಿಗೆ ಬರುತ್ತದೆ

2 ಎಕ್ಕದ ಹಾಲನ್ನು ಹಸುವಿನ ಬೆಣ್ಣೆಯೊಡನೆ ಕಲಸಿ ಬಾವಿನ ಮೇಲೆ ಲೇಪಿಸುತ್ತಾರೆ.

3 ಒಂದು ಹೊಸ ಮಡಿಕೆಯಲ್ಲಿ 100 ಹಣ್ಣಾದ ಎಕ್ಕದ ಎಲೆಗಳನ್ನು ಹಾಕಿ ಅದರ ಮೇಲೆ ಒಂದು ಸೇರು ಪುಡಿ ಸೈಂಧಲವಣ ಹಾಕಿ ಅದರ ಮೇಲೆ

ವುನಃ 100 ಹಣ್ಣಾದ ಎಕ್ಕದ ಎಲೆಗಳನ್ನು ಹಾಕಿ ಮಡಿಕೆಯ ಬಾಯಿಯನ್ನು ಸೀಲು ಮಾಡಿ ಬೆರಣಿಯಿಂದ ಪುಟಹಾಕಿ ಭಸ್ಮಮಾಡಿಕೊಂಡು ಬಾಟಲ್‌ನಲ್ಲಿ ಸಂಗ್ರಹಿಸಿಟ್ಟುಕೊಂಡಿರಬೇಕು ಪಶುಗಳಲ್ಲಿ ಯಾವುದೇ ಬಗೆಯ ಹೊಟ್ಟೆಯುಬ್ಬರ ಕಾಣಿಸಿಕೊಂಡಾಗ ಒಂದು ತೊಲ ಸದರಿ ಚೂರ್ಣ ತೆಗೆದುಕೊಂಡು ಒಂದು ಸೇರು ಮಜ್ಜಿಗೆಗೆ ಬೆರಸಿ ದಿವಸಕ್ಕೆ 2-3 ಸಾರಿ ಎರಡೆರಡು ಗೊಟ್ಟದಷ್ಟು ಕುಡಿಸಬೇಕು.

4 ಎಕ್ಕದ ಹೂಗಳ ಚೂರ್ಣವನ್ನು ನಸ್ಯ ಮಾಡಿಸಿ, ಗಾಯದ ಮೇಲೆ ಸಿಂಪಡಿಸಿದರೆ ಎಲುಬು ಮುರಿತದಿಂದಾದ ಗಾಯ ಬೇಗ ವಾಸಿಯಾಗುತ್ತದೆ





ಚಿತ್ರ 75 ಬಿಳಿ ಚಿತ್ರಮೂಲ - ಹೂಗಳಿರುವ ರಂಬೆ,
ಒಳಚಿತ್ರ ಪುಷ್ಪಮಂಜರಿಯ ಹತ್ತಿರದ ನೋಟ

# ಬಿಳಿಚಿತ್ರಮೂಲ

| | |
|---|---|
| ವೈಜ್ಞಾನಿಕ ಹೆಸರು | ಪ್ಲಂಬ್ಯಾಗೊ ಜೈಲಾನಿಕ<br>[Plumbago zeylanica L ] |
| ಸಸ್ಯದ ಕುಟುಂಬ | ಪ್ಲಂಬ್ಯಾಜಿನೇಸಿ [Plumbaginaceae] |
| ಕನ್ನಡದ ಇತರ ಹೆಸರುಗಳು | ಅಗ್ನಿಪಾವಕ, ಚಿತ್ರಮೂಲಿಕೆ |
| ಇತರ ಭಾಷೆಯ ಹೆಸರುಗಳು | ಸಂ -ಚಿತ್ರಕ, ಅಗ್ನಿಶಿಖ, ಅಗ್ನಿ<br>ಹಿಂ. - ಚಿತ್ರ, ಚಿತ್ರಕ, ಚಿತ<br>ತ - ಚಿತ್ರಮೂಲಂ, ಕರಿಮ್ಸೈ, ಕೋಡಿವೇಳಿ<br>ತೆ. - ಅಗ್ನೀಮಂಥ, ಚಿತ್ರಮೂಲಮು<br>ಇಂ. - ಸಿಲೋನ್ ಲೆಡ್ ವರ್ಟ್,<br>ವೈಟ್‌ಲೆಡ್ ವರ್ಟ |

**ಪರಿಚಯ**

ಈ ಮೂಲಿಕೆಯು ಕಳ್ಳಿ ಕುರುಚಲು ಗಿಡಗಳನ್ನೊಳಗೊಂಡ ಸಸ್ಯಾವರಣದಲ್ಲಿ, ಬೀಳುಭೂಮಿಯಲ್ಲಿ, ಹಾದಿಬದಿಯಲ್ಲಿ ಮತ್ತು ತೋಟದ ಬೇಲಿಯಲ್ಲಿ ಬೆಳೆಯುತ್ತದೆ ಕಾಂಡದಲ್ಲಿ ಗೆಣ್ಣುಗಳು ಪ್ರಮುಖವಾಗಿ ಕಾಣುತ್ತವೆ ಅಂತರಗೆಣ್ಣಿನ ಮೇಲೆ ಗೆರೆಗಳಿರುತ್ತವೆ ಸರಳವಾದ, ಅಂಡಾಕಾರದ, ಅಲೆಯಂತಹ ಅಂಚುಳ್ಳ ಎಲೆಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ ಬಿಳುಪಾದ ಹೂಗಳು ಅಂತ್ಯಾರಂಭಿ ಪುಷ್ಪಮಂಜರಿಯಲ್ಲಿರುತ್ತವೆ ಪುಷ್ಪಮಂಜರಿಯು ದೇಟಿನ ಮೇಲೆ ಸಣ್ಣಸಣ್ಣ ಗ್ರಂಥಿ ರೋಮಗಳಿರುತ್ತವೆ ಪುಷ್ಪಪಾತ್ರಾಪತ್ರಕಗಳು ಸಂಯೋಗ ಹೊಂದಿ ನಳಿಕೆಯಂತಾಗಿರುತ್ತದೆ ಅದರ ಮೇಲೆ ಅಂಟು ಅಂಟಾದ ಗ್ರಂಥಿ ರೋಮಗಳಿರುತ್ತವೆ ಈ ಪುಷ್ಪಪಾತ್ರೆಯು ಕಾಯಿಯ ಮೇಲೂ ಉಳಿದು ಪ್ರಸಾರಣಕ್ಕೆ ಸಹಕರಿಸುತ್ತದೆ ಹೂವಿನಲ್ಲಿ ಬಿಳುಪಾದ 5 ದಳಗಳಿರುತ್ತವೆ.

ಚಿತ್ರಮೂಲದಲ್ಲಿ 3 ಬಗೆಯ ಚಿತ್ರಮೂಲವನ್ನು ಗುರುತಿಸುತ್ತಾರೆ ಅವುಗಳೆಂದರೆ ಬಿಳಿ ಹೂ ಬಿಡುವ ಬಿಳಿಚಿತ್ರಮೂಲ (Plumbago zeylanica L ) ಕೆಂಪು ಹೂ ಬಿಡುವ ಕೆಂಪುಚಿತ್ರಮೂಲ (Plumbago rosea L ) ಮತ್ತು ನೀಲಿ ಹೂ ಬಿಡುವ ನೀಲಿಚಿತ್ರಮೂಲ (Plumbago capensis Thunb ) ಮೂಲಿಕಾಧಾರಿತ ಔಷಧ ತಯಾರಿಕೆಗೆ ಬಿಳಿ ಚಿತ್ರಮೂಲ (ಸಂಸ್ಕೃತ - ಶ್ವೇತ ಚಿತ್ರಕ) ಶ್ರೇಷ್ಠವೆಂದು ಲೋಹಾಧಾರಿತ ಔಷಧಿ ತಾಯರಿಕೆಗೆ ಕೆಂಪು ಚಿತ್ರಮೂಲ (ಸಂಸ್ಕೃತ - ರಕ್ತಚಿತ್ರಕ) ಶ್ರೇಷ್ಠವೆಂದು ಮತ್ತು ಯಂತ್ರ, ಮಂತ್ರ ಪ್ರಯೋಗದಲ್ಲ ನೀಲಿ ಚಿತ್ರಮೂಲ ಶ್ರೇಷ್ಠವೆಂಬ ಒಂದು ಅಭಿಪ್ರಾಯವಿದೆ ಉತ್ತರ ಭಾರತದಲ್ಲಿ ಬಿಳಿ ಚಿತ್ರಮೂಲವನ್ನು ಹೆಚ್ಚಾಗಿ ಬಳಸಿದರೆ ದಕ್ಷಿಣದಲ್ಲಿ ಬಿಳಿ ಮತ್ತು ಕೆಂಪು ಚಿತ್ರಮೂಲಗಳೆರಡನ್ನು ಔಷಧ ತಯಾರಿಕೆಯಲ್ಲಿ ಬಳಸುತ್ತಾರೆ. ಎರಡೂ ಪ್ರಭೇಧಗಳಲ್ಲಿ ಒಂದೇ ಬಗೆಯ ಔಷಧಿಯ ಗುಣಗಳಿವೆ ಕೆಲವು ಆಯುರ್ವೇಧ ಗ್ರಂಥಗಳಲ್ಲಿ ಹೆಸರಿನಲ್ಲಾಗಿರುವ ಕಪ್ಪು ಮತ್ತು ಹಳದಿ ಚಿತ್ರಮೂಲಗಳು ಯಾವುದೆಂಬುದು ಇನ್ನೂ ಖಚಿತವಾಗಿ ತಿಳಿದು ಬಂದಿಲ್ಲ ಹೆಚ್ಚಿನ ಸಂಶೋಧನೆ ಅಗತ್ಯವಿದೆ.

## ಉಪಯೋಗಗಳು

**ಸೂಚನೆ** . ಈ ಮೂಲಿಕೆಯನ್ನು 24 ಗಂಟೆಗಳ ಕಾಲ ಸುಣ್ಣದ ತಿಳಿಯಲ್ಲಿ ನೆನೆಸಿ ಹೊರತೆಗೆದು ತೊಳೆದು ಒಣಗಿಸಿ ನಂತರವೇ ಉಪಯೋಗಿಸಬೇಕು

1 ಚಿತ್ರಮೂಲದ ಎಲೆ ಮತ್ತು ಅರಿಶಿನಗೆಂಟೆಯ (Barleria prionitis)ಎಲೆಯನ್ನು ತೆಗೆದುಕೊಂಡು ಚೆನ್ನಾಗಿ ಅರೆದು ಮಕ್ಕಳ ಇಸುಬಿನ ಮೇಲೆ ದಿವಸಕ್ಕೆ ಎರಡು ಸಾರಿ ಲೇಪಿಸಬೇಕು ಊಟದಲ್ಲಿ ತೊಗರಿಬೇಳೆ ಮತ್ತು ಅಮಟೆಕಾಯಿಯನ್ನು ಕೊಡಬಾರದು

2 ಬಿಳಿಚಿತ್ರಮೂಲದ ಬೇರನ್ನು ಆಕಳ ತುಪ್ಪದಲ್ಲಿ ಹುರಿದು, ಬೇರನ್ನು ತೆಗದುಹಾಕಿ ತುಪ್ಪವನ್ನು ಮಕ್ಕಳ ಇಸುಬಿನ ಗಾಯದ ಮೇಲೆ ಲೇಪಿಸಬೇಕು

3 ಚಿತ್ರಮೂಲದ ಗಿಡದ ತೊಪ್ಪಲನ್ನು ಚೆನ್ನಾಗಿ ಅರೆದು, ಕೀವು ಆಗಿ ಒಡೆಯದೆ ಇದ್ದ ಬಾವಿನ ಮೇಲೆ ಹಚ್ಚಿ, ಅದರ ಮೇಲೆ ಒಂದು ಬಟ್ಟೆ ಇಟ್ಟು ನೀರು ಹಾಕುತ್ತಿರಬೇಕು ಸ್ವಲ್ಪ ಹೊತ್ತಿನಲ್ಲಿ ಬಾವು ಒಡೆದು ಕೀವು ಸೋರಿ ಹೋಗುತ್ತದೆ ಮತ್ತು ನೋವು ಕಡಿಮೆಯಾಗುತ್ತದೆ

4 ಚಿತ್ರಮೂಲದ ಬೇರು ಮತ್ತು ಬೆಳ್ಳುಳ್ಳಿಯನ್ನು ಅರೆದು ತೊಡೆವಾಳೆಯ ಮೇಲೆ ಲೇಪಿಸಬೇಕು

5 ಚಿತ್ರಮೂಲದ ಪಂಚಾಂಗ ಚೂರ್ಣವನ್ನು ಬೆಣ್ಣೆ ಅಥವಾ ಹಾಲಿನೊಡನೆ ಒಂದು ತಿಂಗಳು ಸೇವಿಸುವುದರಿಂದ ಎಲ್ಲಾ ಬಗೆಯ ವ್ಯಾಧಿಗಳು ಗುಣವಾಗುತ್ತವೆ, ಕೃತ್ರಿಮವಿಷಕ್ಕೀಡಾಗಿದ್ದರೆ ವಿಷ ಪರಿಹಾರವಾಗುತ್ತದೆ ಇದಕ್ಕೆ ಕೆಲವು ದಿವಸ ಸೇವಿಸಿದರೆ ಸಾಕು.

6 ಚಿತ್ರಮೂಲದ ಚೂರ್ಣವನ್ನು ಹಾಲಿನೊಡನೆ 6 ತಿಂಗಳು ಸೇವಿಸಿದರೆ ಜಲೋಧರ ಮತ್ತು ಕುಷ್ಠರೋಗಗಳು ವಾಸಿಯಾಗುತ್ತವೆ.

7 ಚಿತ್ರಮೂಲದ ಚೂರ್ಣವನ್ನು ಗೋಮೂತ್ರದೊಡನೆ ಸೇವಿಸುವುದರಿಂದ ಮುಖ ಮತ್ತು ಮೈ ಕಾಂತಿಯುಕ್ತವಾಗುತ್ತದೆ

8 ಚಿತ್ರಮೂಲದ ಬೇರನ್ನು ಗೋಮುತ್ರದಲ್ಲಿ ಅಥವಾ ಮಜ್ಜಿಗೆಯಲ್ಲಿ ನುಣ್ಣಗೆ ಅರೆದು ಕಡಲೆಕಾಳು ಗಾತ್ರದ ಮಾತ್ರೆ ಮಾಡಿಕೊಂಡು ಕೆಲವು ದಿವಸಗಳವರೆಗೆ ನಿತ್ಯ ಬೆಳಗ್ಗೆ ಸೂರ್ಯೋದಯಕ್ಕೆ ಮೊದಲು ಒಂದು ಮಾತ್ರೆಯನ್ನು ಸೇವಿಸುವುದರಿಂದ ಮೂಲವ್ಯಾಧಿ ಗುಣವಾಗುತ್ತದೆ

9 ಚಿತ್ರಮೂಲದ ಎಲೆಗಳನ್ನು ಅರೆದು ಮೈಗೆ ಲೇಪಿಸುವುದರಿಂದ ಮೈಯಲ್ಲಿ ರೋಮಗಳೊಡನೆ ಕಂಡುಬರುವ ಅಷ್ಟಪದ ಕ್ರಿಮಿ ನಾಶವಾಗುತ್ತವೆ

10 ಚಿತ್ರಮೂಲದ ಬೇರಿನ ಚೂರ್ಣ ಸೇವನೆಯಿಂದ ಜೀರ್ಣಶಕ್ತಿ ಉತ್ತಮವಾಗುತ್ತದೆ





ಚಿತ್ರ 76 . ಬುಗುಡಿ ಹಂಬು

# ಬುಗುಡಿಹಂಬು

| | |
|---|---|
| ವೈಜ್ಞಾನಿಕ ಹೆಸರು | ವಲ್ಲಾರಿಸ್ ಸೋಲನೇಸಿಯ [Vallarıs solanacea (Roth) O Kuntze =ವ ಹೈನಿ [=V heyneı Spreng ] |
| ಸಸ್ಯದ ಕುಟುಂಬ | ಅಪೊಸೈನೇಸಿ (Apocynaceae) |
| ಸಸ್ಯದ ಇತರ ಹೆಸರುಗಳು | ಇಸಮಲ್ಲಿಗೆ, ರಾಮರಸ |
| ಇತರ ಭಾಷೆಯ ಹೆಸರುಗಳು | ಸಂ - ಭದ್ರವಲ್ಲಿ, ಭದ್ರಮುಂಜ, ವಿಶಲ್ಯಕ್ರಿತ್<br>ಹಿಂ.-ರಾಮ್ ಸರ್, ಚಮಾರಿ-ಕಿ-ವೆಳ್<br>ತ. - ಪುಟ್ಟಿ-ಪೊದರ-ಇಜರಲ<br>ತೆ - ಜೊಕ್ಕಮಲ್ಲೆ, ಚಟ್ಟು, ಗಿಣ್ಣೆಮಾಲತಿ, ಅರಬಿಮಲ್ಲಿಕ<br>ಇಂ - ವಲ್ಲಾರಿಸ್, ಮಿಲ್ಕ್ ಕ್ಲೆಂಬರ್ |

**ಪರಿಚಯ**

ಈ ಬಳ್ಳಿಗಿಡವನ್ನು ಹೂಗಳಿಗಾಗಿ ತೋಟಗಳಲ್ಲಿ ಬೆಳೆಸುತ್ತಾರೆ ಕೆಲವೊಮ್ಮೆ ಊರ ಹೊರವಲಯದಲ್ಲಿ ಪ್ರಾಕೃತಿಕವಾಗಿ ಬೆಳೆದಿರುವುದು ಕಂಡು ಬರುತ್ತದೆ. ಈ ಬಳ್ಳಿಗಿಡವು ಪೊದೆಗಳ ಮೇಲೆ, ಚಿಕ್ಕ ಮರಗಳ ಮೇಲೆ ಹಬ್ಬಿ ಬೆಳೆಯುತ್ತದೆ ಉದ್ದ ಅಂಡಾಕಾರದ ಎಲೆಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ ಬಿಳಿ ಬಣ್ಣದ ಹೂಗಳು ಎಲೆಯ ಕಂಕುಳಲ್ಲಿ ಇಲ್ಲವೆ ಎಲೆಯ ಕಂಕುಳ ಹೊರಗಿರುತ್ತವೆ

**ಉಪಯೋಗಗಳು**

1 ಬೇರಿನ ಗಂಧವನ್ನು ಹಾವು ಮತ್ತು ನೆಲಗಿರುಬ ಕಡಿದವರಿಗೆ ತಿನ್ನಿಸುತ್ತಾರೆ ಕಡಿದ ಜಾಗದಲ್ಲಿ ಊತವಿದ್ದರೆ ಸೊಪ್ಪನ್ನು ಅರೆದು ಲೇಪಿಸುತ್ತಾರೆ

2 ಬಳ್ಳಿಕಾಂಡದ ತೊಗಟೆಯುನ್ನು ಬಾಯಲ್ಲಿ ಜಗಿದು ರಸ ಹಿಡಿದಿಟ್ಟು ಕೊಳ್ಳುವುದರಿಂದ ಅಲುಗಾಡುತ್ತಿರುವ ಹಲ್ಲುಗಳು ಒಸಡಿನಲ್ಲಿ ಗಟ್ಟಿಯಾಗಿ ನಿಲ್ಲುತ್ತವೆ

3 ಬಳ್ಳಿ ಕಾಂಡದಿಂದ ಬರುವ ಸಸ್ಯಕ್ಷೀರವನ್ನು ಹಳೆಯ ಗಾಯಗಳ ಮೇಲೆ ಲೇಪಿಸುತ್ತಾರೆ

4 ಈ ಬಳ್ಳಿಯ ಸಸ್ಯ ಕ್ಷೀರವನ್ನು ಹಚ್ಚುವುದರಿಂದ ಹಲ್ಲುನೋವು ಮತ್ತು ಒಸಡಿನ ರೋಗಗಳು ನಿವಾರಣೆಯಾಗುತ್ತವೆ

## ಪಶುರೋಗ ಚಿಕಿತ್ಸೆಯಲ್ಲಿ

1 ತಲಾ ಒಂದು ಪಾವು ಬುಗುಡಿ ಹಂಬಿನರಸ, ವಿಷಮಧಾರಿ ಸೊಪ್ಪಿನರಸ, ದಾಳಿಂಬೆಸೊಪ್ಪಿನರಸ, ಕತ್ತಾಳೆಎಲೆರಸ,ನಾಗದಾಳಿ ಸೊಪ್ಪಿನರಸ, ನರಿಬಾಲದ ಗೆಡ್ಡೆರಸ ಮತ್ತು ತಲಾ 20 ಗ್ರಾಂ ನಷ್ಟು ಪಚ್ಚಕರ್ಪೂರ, ಲವಂಗ, ಬಾಲಮೆಣಸು, ಬೆಳ್ಳುಳ್ಳಿಗಳನ್ನು ಅರೆದು ಮೇಲಿನ ರಸಕ್ಕೆ ಸೇರಿಸಿ ಎರಡು ಪಾವಿನಷ್ಟು ರಸವನ್ನು ಹೊಟ್ಟೆಗೆ ಕುಡಿಸಿ ಉಳಿದ ರಸವನ್ನು ಮೈಗೆ ಲೇಪಿಸಬೇಕು ಇದೇ ರೀತಿ ಚಿಕಿತ್ಸೆಯನ್ನು 5-6 ದಿವಸ ಮಾಡುವುದರಿಂದ ದನುರ್ವಾಯು ಹತೋಟಿಗೆ ಬರುತ್ತದೆ

2 ಒಂದು ಹಿಡಿ ಬುಗುಡಿ ಹಂಬಿನ ಗೆಡ್ಡೆ (ಬೇರು) ಮತ್ತು ಆಯುರ್ವೇದ ಪದ್ಧತಿಯಂತೆ ಶುದ್ಧಿಮಾಡಿದ ಕರಡಿ ಕಣ್ಣಿನ ಗಿಡದ ಗೆಡ್ಡೆ ಒಂದು ಹಿಡಿ ತೆಗೆದುಕೊಂಡು ನೀರಿನಲ್ಲಿ ಅರೆದು ಮೈಗೆ ಹಚ್ಚಿ ಸ್ವಲ್ಪ ಹೊಟ್ಟೆಗೆ ಕುಡಿಸುವುದರಿಂದ ನೆಲಗಿರುಬ ಕಡಿದ ವಿಷ ಪರಿಹಾರವಾಗುತ್ತದೆ.

3 ಎರಡು ಹಿಡಿ ಬುಗುಡಿ ಹಂಬಿನ ಸೊಪ್ಪನ್ನು ಅರೆದು $1/_2$ ಸೇರು ಮಜ್ಜಿಗೆಯೊಡನೆ ಕುಡಿಸುವುದ್ಧರಿಂದ ಹಾವು ಕಡಿತದ ನಂಜು ಪರಿಹಾರವಾಗುತ್ತದೆ



# ಬೆಕ್ಕಿನಬುಡ್ಡೆ ಗಿಡ (ಎರುಂಬಳ್ಳಿ)

| | |
|---|---|
| ವೈಜ್ಞಾನಿಕ ಹೆಸರು | ಕಾರ್ಡಿಯೊಸ್ಪರ್ಮಂ ಹೆಲಿಕಕಾಬಂ [Cardiospermum halicacabum L] |
| ಸಸ್ಯದ ಕುಟುಂಬ | : ಸ್ಯಾಪಿಂಡೇಸಿ [Sapindaceae] |
| ಕನ್ನಡದ ಇತರ ಹೆಸರುಗಳು | ಅಗ್ನಿಬಳ್ಳಿ, ಎರುವನಬಳ್ಳಿ, ಉರುಂಡೆಬುರು ಚಿಟಕಿಹಂಬು, ಬಟ್ಟಿಕಾಯಿಬಳ್ಳಿ, ಬೆಕ್ಕಿನ ತೊರಡಿನಬಳ್ಳಿ, ಮಿನಿಜುಬಳ್ಳಿ, ಮಿಂಚುಬಳ್ಳಿ |
| ಇತರ ಭಾಷೆಯ ಹೆಸರುಗಳು | : ಸಂ. - ಕರವಿ, ಕರ್ಣಸ್ಫೋಟ, ಕಾಕತಿಕ್ತ, ಜ್ಯೋತಿಶ್ಮತಿ, ಪರವಟವಾಡಿ<br>ಹಿಂ - ಕಣ್ ಫುಟ<br>ತ. - ಮುದುಕೊಟ್ಟನ್<br>ತೆ. - ಬುಡ್ಡಿಕಾಕರ, ನೆಲಗುಲಿಸ್ತೆಂಡ, ವೆಕುಡಿತಿಗೆ<br>ಇಂ. - ಬಲೂನ್ ವೈನ್, ವಿಂಟರ್ ಚೆರಿ, ಹಾರ್ಟ್ಸ್-ಪೀ |

**ಪರಿಚಯ**

ಈ ಗಿಡವು ಸಾಮಾನ್ಯವಾಗಿ ಊರ ಹೊರವಲಯದಲ್ಲಿ, ಕಳ್ಳಿ ಕುರುಚಲು ಗಿಡಗಳನ್ನೊಳಗೊಂಡ ಸಸ್ಯಾವರಣದಲ್ಲಿ ಗಿಡಗಳ ಮೇಲೆ ಹಬ್ಬಿ ಬೆಳೆಯುತ್ತದೆ ಹಬ್ಬುವ ಕಾಂಡದ ಮೇಲೆ ಎಲೆಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ ಸಂಯುಕ್ತ ಎಲೆಯ ಕಿರುಪತ್ರಗಳ ಅಂಚು ಹಲ್ಲಿನಂತಿರುತ್ತದೆ. ಒಂದೇ ಗಿಡದಲ್ಲಿ ಎಲೆಯ ಕಂಕುಳಲ್ಲಿರುವ ಉದ್ದನೆಯ ದೇಟಿನ ಮೇಲೆ ಬಿಳಿಯ ಬಣ್ಣದ ದ್ವಿಲಿಂಗಿ ಮತ್ತು ಏಕಲಿಂಗಿ ಹೂಗಳು ಅಂತ್ಯಾರಂಭಿ ಅಥವಾ ಕೊರಿಂಬ್ ರೀತಿಯ ಪುಷ್ಪಮಂಜರಿಯಲ್ಲಿರುತ್ತವೆ. ಹೂಗೊಂಚಲಿನ ಕೆಳಭಾಗದ ಕೆಲವು ಹೂಗಳು ಸುರುಳಿ



ಚಿತ್ರ 77 · ಬೆಕ್ಕಿನಬುಡ್ಡೆ ಗಿಡ – ಬಳ್ಳಿಯ ಒಂದು ಭಾಗ

ಬಳ್ಳಿಯಾಗಿ ಮಾರ್ಪಾಟು ಹೊಂದಿ ಬಳ್ಳಿಕಾಂಡವು ಹಬ್ಬಿ ಬೆಳೆಯಲು ಸಹಕರಿಸುತ್ತವೆ ಹಣ್ಣುಗಳು ಬಲೂನ್ ನಂತಿದ್ದು ಮೂರು ಏಣುಗಳನ್ನು ಹೊಂದಿರುತ್ತವೆ

## ಉಪಯೋಗಗಳು

1 ಬೆಕ್ಕಿನ ಬುಡ್ಡೆ ಗಿಡದ ಬೇರಿನ ಚೂರ್ಣವನ್ನು ಚೇಳುಕಡಿದವರಿಗೆ ತಿನ್ನಿಸುತ್ತಾರೆ

2 ಬೇರು ಮತ್ತು ಎಲೆಯ ಚೂರ್ಣ ಸೇವನೆಯಿಂದ ರಕ್ತಮೂಲವ್ಯಾಧಿ, ಪ್ರದರ, ಗೊನ್ನಾರಿಯಂ ರೋಗಗಳು ವಾಸಿಯಾಗುತ್ತವೆ. ಹೊಟ್ಟೆಯಲ್ಲಿ ಜಂತುಹುಳುಗಳಿದ್ದರೆ ಬಿದ್ದುಹೋಗುತ್ತವೆ

3 ಎಲೆಯನ್ನು ಅರೆದು ಸಂಧಿವಾತದ ನೋವಿರುವ ಕಡೆ ಪಟ್ಟುಹಾಕುವುದರಿಂದ ನೋವು ಕಡಿಮೆಯಾಗುತ್ತದೆ

4 ಎಲೆ ಅಥವಾ ಸಮೂಲದ ರಸವನ್ನು ಕಿವಿಗೆ ಹಾಕುವುದರಿಂದ ಕಿವಿನೋವು, ಕಿವಿಸೋರುವುದು ಕಡಿಮೆಯಾಗುತ್ತದೆ

5 ಸಮೂಲದ ಕಷಾಯ ಸೇವಿಸುವುದರಿಂದ ಸರಿಯಾಗಿ ಮುಟ್ಟಾಗದಿರುವವರಿಗೆ ಮುಟ್ಟಿನ ಸ್ರಾವ ಸರಿಯಾಗಿ ಆಗುತ್ತದೆ

6 ಎಲೆಯ ಚೂರ್ಣವನ್ನು ನಸ್ಯದಂತೆ ಮೂಗಿಗೆ ಹಾಕಿಕೊಂಡರೆ ತಲೆನೋವು ವಾಸಿಯಾಗುತ್ತದೆ

7 ಎಲೆಯ ರಸವನ್ನು ಗುದದ್ವಾರಕ್ಕೆ ಪಿಚಕಾರಿ ಮಾಡುವುದರಿಂದ ಭೇದಿ ಮತ್ತು ರಕ್ತಭೇದಿ ಕಡಿಮೆಯಾಗುತ್ತದೆ

8 ಎಲೆಯನ್ನು ಅರೆದು ಸಿಫಿಲಿಸ್ (ಒಂದು ಬಗೆಯ ಲೈಂಗಿಕ ರೋಗ-ವರಂಗಿ ಹುಣ್ಣಿನ ರೋಗ) ರೋಗದಿಂದುಟಾಂದ ವ್ರಣಗಳ ಮೇಲೆ ಪಟ್ಟು ಹಾಕುತ್ತಾರೆ

9 ಹಾವು ಕಡಿದವರಿಗೆ ಬೆಕ್ಕಿನಬುಡ್ಡೆ ಗಿಡದ ಸಮೂಲದ ಕಷಾಯ ಅಥವಾ ಚೂರ್ಣ ತಿನ್ನಿಸುವುದರಿಂದ ಹಾವಿನ ವಿಷ ಪರಿಹಾರವಾಗುತ್ತದೆ

10 ಬೆಕ್ಕಿನಬುಡ್ಡೆ ಗಿಡದ ಸಮೂಲವನ್ನು ಹಾಲಿನಲ್ಲಿ ಬೇಯಿಸಿ ಬೇರೆ ಕಾರಣಗಳಿಂದ ಉಂಟಾದ ಊತ ಮತ್ತು ಗಡ್ಡೆಯ ಮೇಲೆ ಪಟ್ಟು ಹಾಕುವುದರಿಂದ ಊತ ಮತ್ತು ಗಡ್ಡೆ ಕರಗುತ್ತದೆ

11 ಎಲೆಯನ್ನು ಬೆಲ್ಲದೊಡನೆ ಅರೆದು ಎಳ್ಳೆಣ್ಣೆ ಸೇರಿಸಿ ತೈಲಪಾಕ ಮಾಡಿಕೊಂಡು ಆ ತೈಲವನ್ನು ಕಣ್ಣಿಗೆ ಅಂಜನದಂತೆ ಹಚ್ಚುವುದರಿಂದ ಕಣ್ಣಿನ ಊತ ಮತ್ತು ಉರಿ ಕಡಿಮೆಯಾಗುತ್ತದೆ



# ಬೇಲದ ಮರ

| | |
|---|---|
| ವೈಜ್ಞಾನಿಕ ಹೆಸರು | ಲೈಮೊನಿಯ ಆಸಿಡಿಸ್ಸಿಮ<br>[Limonia acidissima<br>=ಫೆರೋನಿಯ ಎಲಿಫೆಂಟಮ್<br>[=Feronia elephantum Corr ] |
| ಸಸ್ಯದ ಕುಟುಂಬ | ರೂಟೇಸಿ (Rutaceae) |
| ಕನ್ನಡದ ಇತರ ಹೆಸರುಗಳು | ಕಪಿತ್ಥ, ಗ್ರಾಹ, ದಧಿಫಲ, ದಂತಶರ, ಪುಷ್ಪಫಲ, ಬಳೂಲಕಾಯಿ, ಬೆಳವಲ |
| ಇತರ ಭಾಷೆಯ ಹೆಸರುಗಳು | ಸಂ - ಕಪಿಥ್ಥ, ದಧಿತ್ಥ, ದಧಿಫಲ<br>ಹಿಂ - ಬಿಳಿನ್, ಕೈತ್, ಕವಿಧ<br>ತ - ವಿಳ, ವಿಳಾಮರಂ, ವಿಳಾಂಗ್ಕಾ<br>ತೆ - ವೇಲಗ, ಕಪಿತ್ಥಮು<br>ಇ. - ಎಲಿಫೆಂಟ್ ಆಪಲ್, ವುಡ್ಆಪಲ್, ಮಂಕಿಫ್ರೂಟ್ |

**ಪರಿಚಯ**

ಈ ಮರವು ಸಾಮಾನ್ಯವಾಗಿ ಕಳ್ಳಿ ಕುರುಚಲು ಗಿಡಗಳನ್ನೊಳಗೊಂಡ ನಸ್ಯಾವರಣದಲ್ಲಿ ಪ್ರಾಕೃತಿಕವಾಗಿ ಬೆಳೆಯುತ್ತದೆ ಹಣ್ಣಿಗಾಗಿ ಕೆಲವು ಕಡೆ ಬೆಳೆಸಲಾಗುತ್ತಿದೆ ಹಣ್ಣಿನ ತಿರುಳು ರುಚಿಯಾಗಿರುತ್ತದೆ ಬೇಸಿಗೆಯಲ್ಲಿ ತಿರುಳಿನಿಂದ ಪಾನಕ ತಯಾರಿಸಿ ಕುಡಿಯುತ್ತಾರೆ ವಿಘ್ನೇಶ್ವರನಿಗೆ ಪ್ರಿಯವಾದ ಒಂದು ಹಣ್ಣು ಈ ಮರದ ಮತ್ತೊಂದು ವೈಜ್ಞಾನಿಕ ಹೆಸರಾದ 'ಫೆರೋನಿಯ' ಎಂಬುದು ರೋಮನ್ ಅರಣ್ಯ ದೇವತೆ ಫೆರೋಳಿಂದ ಬಂದಿದೆ.

ಬೇಲದ ಮರವು 30-40 ಅಡಿ ಎತ್ತರ ಬೆಳೆಯುವ ಒಂದು ಪರ್ಣಪಾತಿ ಮರ ಮರದಲ್ಲಿ ಮುಳ್ಳುಗಳಿರುತ್ತವೆ. ಸಂಯುಕ್ತ ಎಲೆಯ ತೊಟ್ಟಿಗೆ ರೆಕ್ಕೆಯಿರುತ್ತದೆ



ಚಿತ್ರ 78 · ಬೇಲದ ಮರ – ಹೂಗಳು ಮತ್ತು ಕಾಯಿ ಇರುವ ರೆಂಬೆ

ಒಂದು ಸಂಯುಕ್ತ ಎಲೆಯಲ್ಲಿ 6-7 ಕಿರುಪತ್ರಗಳಿರುತ್ತವೆ. ಕಿರುಪತ್ರಗಳು ಅಂಡಾಕಾರವಾಗಿರುತ್ತವೆ ಕಿರುಪತ್ರದ ಅಂಚು ನಯವಾಗಿದ್ದು ತುದಿ ಮೊಂಡಾಗಿರುತ್ತದೆ. ಚಿಗುರೆಲೆಗಳು ಕಂದು ಬಣ್ಣಕ್ಕಿರುತ್ತವೆ ಬಲಿತಂತೆ ಹಸಿರು ಬಣ್ಣ ಿರುಗುತ್ತವೆ ಹೂವಿನ ಗೊಂಚಲು ಸಂಯುಕ್ತ ಎಲೆಯ ಕಂಕುಳಲ್ಲಿರುತ್ತದೆ. ದುಂಡಾದ ಅಥವಾ ಅಂಡಾಕಾರದ ದಪ್ಪನೆ ಕಾಯಿಯ ಹೊರ ಚಿಪ್ಪು ಬಲುಗಟ್ಟಿಯಾಗಿರುತ್ತದೆ ರುಚಿಕರವಾದ ತಿರುಳಿನಲ್ಲಿ ಬೀಜಗಳು ಹುದುಗಿರುತ್ತವೆ.

## ಉಪಯೋಗಗಳು

1 ಬೇಲದ ಬೇರು, ತಂಗಡಿ ಬೇರು (Cassia occidentalis) ಮತ್ತು ಲವಂಗ ಇವುಗಳ ಕಷಾಯವನ್ನು ಮೊಸರಿನೊಡನೆ ಸೇವನೆ ಮಾಡುವುದರಿಂದ ಉಷ್ಣದಿಂದುಂಟಾದ ಬಹುಮೂತ್ರ ಶಮನವಾಗುತ್ತದೆ

2 ಬೇಲದ ಮರದ ಚಕ್ಕೆಯ ರಸ 1-2 ತೊಲದಷ್ಟು ತೆಗೆದುಕೊಂಡು ಸ್ವಲ್ಪ ಅಕ್ಕಿ ತೊಳೆದ ನೀರು ಮತ್ತು ಜೇನುತುಪ್ಪ ಸೇರಿಸಿ, ದಿವಸಕ್ಕೆ ಎರಡು ಬಾರಿಯಂತೆ 3-5 ದಿವಸ ಕುಡಿಸುವುದರಿಂದ ಎಲ್ಲಾ ಬಗೆಯ ಪ್ರದರರೋಗಗಳು ಗುಣವಾಗುತ್ತವೆ.

3 ಬೇಲದ ಚಕ್ಕೆಯ ರಸಕ್ಕೆ ಜೇನುತುಪ್ಪ ಮತ್ತು ಹಿಪ್ಪಲಿ ಪುಡಿ ಸೇರಿಸಿ ಕುಡಿಯುವುದರಿಂದ ಉಬ್ಬಸದ ವೇಗ ತಗ್ಗುತ್ತದೆ

4 ಬೇಲದ ಮರದ ಪಂಚಾಂಗ ಸೇವನೆಯಿಂದ ದೇಹ ಬಲಗೊಳ್ಳುವುದರ ಜೊತೆಗೆ ದೀರ್ಘಾಯಸ್ಸು ಉಂಟಾಗುತ್ತದೆ

5 ಶುದ್ಧಿಮಾಡಿದ ಬೇಲದ ಮರದ ಗೋಂದನ್ನು (ಬಂಕೆ) ಪುಡಿಮಾಡಿ ಇಲ್ಲವೆ ಮಾತ್ರೆ ರೂಪದಲ್ಲಿ ಉಪಯೋಗಿಸಿದರೆ ಬಹುದಿನದಿಂದ ಕಾಡುವ ಭೇದಿ, ಶ್ವೇತಪ್ರದರ, ರಕ್ತಪ್ರದರ ಮತ್ತು ಪ್ರಮೇಹ ಗುಣವಾಗುತ್ತವೆ.

6 ಬೇಲದ ಚಿಗುರೆಲೆಗಳನ್ನು ಅರೆದು ಮೈಗೆ ಲೇಪಿಸಿದರೆ ಅತಿಯಾಗಿ ಬೆವರುವುದು ಕಡಿಮೆಯಾಗುತ್ತದೆ ಮತ್ತು ಸೆಖೆ ಗುಳ್ಳೆಗಳು ವಾಸಿಯಾಗುತ್ತವೆ.

7 ಬೇಲದ ಎಲೆಯನ್ನು ಹಿಸುಕಿ ಮೂಸಿ ನೋಡುವುದರಿಂದ ಬಿಕ್ಕಳಿಕೆ ನಿವಾರಣೆಯಾಗುತ್ತದೆ

8 ಬೇಲದ ಚಿಗುರೆಲೆಗಳನ್ನು ಹಸುವಿನ ಮಜ್ಜಿಗೆಯಲ್ಲಿ ಅರೆದು ಕುಡಿಯುವುದರಿಂದ ರಕ್ತಾತಿಸಾರ ವಾಸಿಯಾಗುತ್ತದೆ

9 ಬೇಲದ ಸೊಪ್ಪಿನ ಅಷ್ಟಮಾಂಶ ಕಷಾಯಮಾಡಿ ಎಳ್ಳೆಣ್ಣೆ ಸೇರಿಸಿ ಇಲಿ ಕಡಿದವರಿಗೆ ಮೂರುದಿವಸ ಕುಡಿಸಿದರೆ ಇಲಿ ವಿಷ ಪರಿಹಾರವಾಗುತ್ತದೆ

10 ಇಲಿ ಕಡಿದವರಿಗೆ ಬೇಲದ ಎಲೆಗಳನ್ನು ತಂದು ನೆರಳಲ್ಲಿ ಒಣಗಿಸಿ ಚೆನ್ನಾಗಿ ಕುಟ್ಟಿ ಪುಡಿಮಾಡಿ ಬಟ್ಟೆಯಲ್ಲಿ ಶೋಧಿಸಿಕೊಂಡು ಸಂಗ್ರಹಿಸಿಟ್ಟುಕೊಳ್ಳಬೇಕು ½ ತೊಲ ಚೂರ್ಣ ಸೇವಿಸಿ ನಕ್ಕರೆ ಹಾಕಿದ ಹಾಲನ್ನು ಕೆಲದಿವಸ ಕುಡಿಯುವುದರಿಂದ ಶರೀರದೊಳಗಿನ ಹೆಚ್ಚಿನ ಉಷ್ಣತೆಯು ಕಡಿಮೆಯಾಗುತ್ತದೆ ಮತ್ತು ವೀರ್ಯ ವೃದ್ಧಿಯಾಗುತ್ತದೆ. ಈ ಚಿಕಿತ್ಸೆಯನ್ನು ಪರೀಕ್ಷಿಸಲಾಗಿರುವುದಾಗಿ ಉಲ್ಲೇಖಿತವಾಗಿದೆ

11 ಬೇಲದ ಎಲೆಗಳನ್ನು ಕಲ್ಲಿನಮೇಲೆ ಚನ್ನಾಗಿ ಅರೆದು ರಸಹಿಂಡಿಕೊಂಡು ಹಸುವಿನ ಹಾಲು ಸೇರಿಸಿ ಕುಡಿಯುವುದರಿಂದ ಪಿತ್ತಶಮನವಾಗುತ್ತದೆ

12 ಎಳೆಕಾಯಿಯ ತಿರುಳನ್ನು ಸೇವಿಸುವುದರಿಂದ ವಸಡು ಮತ್ತು ಬಾಯಿಹುಣ್ಣು ವಾಸಿಯಾಗುತ್ತದೆ

13 ಬೇಲದ ಹಣ್ಣಿನ ತಿರುಳಿನೊಡನೆ ಜೇನುತುಪ್ಪ ಸೇರಿಸಿ ತಿನ್ನುವುದರಿಂದ ಬಿಕ್ಕಳಿಕೆ ಕಡಿಮೆಯಾಗುತ್ತದೆ

14 ಬೇಲದ ಹಣ್ಣಿನ ಬೀಜವನ್ನು $^{1}/_{4}$ ತೊಲ ಪ್ರಮಾಣ ತೆಗೆದುಕೊಂಡು ಸ್ವಲ್ಪ ಹುರಿದು ತಿನ್ನುವುದರಿಂದ ಅತಿಸಾರ ನಿಲ್ಲುತ್ತದೆ.

15 ಬೇಲದ ಹಣ್ಣಿನ ತಿರುಳನ್ನು ತೆಗೆದುಕೊಂಡು ತಕ್ಕಷ್ಟು ಸಕ್ಕರೆ ಸೇರಿಸಿ ತಿನ್ನುವುದರಿಂದ ಪ್ರಬಲವಾದ ಪಿತ್ತವು ಶಾಂತವಾಗುತ್ತದೆ. ಕೆಮ್ಮು ಕಫ, ಉಷ್ಣ ಕಡಿಮೆಯಾಗುತ್ತದೆ ಮತ್ತು ಹಸಿವೂ ಉಂಟಾಗುತ್ತದೆ

### ಪಶುರೋಗ ಚಿಕಿತ್ಸೆಯಲ್ಲಿ

ಸಿಪ್ಪೆ ಸಹಿತ ಬೇಲದಹಣ್ಣು ಮತ್ತು ಸೊಪ್ಪು ಈ ಎರಡನ್ನೂ ಕುಟ್ಟಿ ಎಳನೀರಿನಲ್ಲಿ ಕುಡಿಸುವುದರಿಂದ ಪಿಂಜರಿ ವಾಸಿಯಾಗುತ್ತದೆ



# ಬೇವಿನ ಮರ

| | |
|---|---|
| ವೈಜ್ಞಾನಿಕ ಹೆಸರು | ಅಝಾದಿರಕ್ತ ಇಂಡಿಕ (Azadırachta ındıca A Juss ) |
| ಸಸ್ಯದ ಕುಟುಂಬ | ಮೆಲಿಯೇಸಿ (Melıaceae) |
| ಕನ್ನಡದ ಇತರ ಹೆಸರುಗಳು | ಒಳ್ಳೆಬೇವು, ಕಹಿಬೇವು, ಕಹಿನಿಂಬೆಮರ |
| ಇತರ ಭಾಷೆಯ ಹೆಸರುಗಳು | ಸಂ. - ನಿಂಬ, ವೆಂಬಕ, ಬ್ರಹ್ಮಮೇಡಿ, ಅರಿಷ್ಟ, ಸರ್ವತೋಭದ್ರ, ಹಿಂಗುನಿರ್ಯಾಸ ಮಾಲಕ, ಪಿಚುಮರ್ದ<br>ಹಿಂ. - ನೀಮ್<br>ತ - ವೆಂಬು, ವೇಪಂ<br>ತೆ - ವೇಪ<br>ಇಂ - ಮಾರ್ಗೋಸ ಟ್ರೀ, ನೀಮ್ ಟ್ರೀ, ಇಂಡಿಯನ್ ಲಿಲಾಕ್ |

**ಪರಿಚಯ**

ಬರ್ಮಾ ಮೂಲದ ಬೇವಿನ ಮರವು ರಾಜ್ಯದ ಎಲ್ಲಾ ಬಗೆಯ ಸಸ್ಯಾವರಣದಲ್ಲಿ ಬೆಳೆಯುತ್ತದೆ ಸಾಲು ಮರವಾಗಿಯೂ ಸಹ ಇದನ್ನು ಅಲ್ಲಲ್ಲಿ ಬೆಳೆಸಲಾಗುತ್ತಿದೆ. ಬೇವಿನ ಸೊಪ್ಪು ಪೂಜಾವಸ್ತುವಾಗಿ ಮತ್ತು ಔಷಧಿಯಾಗಿ ನಮ್ಮ ಜೀವನದಲ್ಲಿ ಹಾಸುಹೊಕ್ಕಾಗಿದೆ ಯುಗಾದಿಯಂದು ಬೆಲ್ಲದೊಡನೆ ಬೇವನ್ನು ತಿನ್ನುವುದು, ಜೀವನದಲ್ಲಿ ಸಿಹಿ ಕಹಿಯನ್ನು ಸಮಾನವಾಗಿ ಪರಿಗಣಿಸಬೇಕೆಂಬುದನ್ನು ಸಾಂಕೇತಿಕವಾಗಿ ಬಿಂಬಿಸುತ್ತದೆ.

ಈ ಮರವು ಸುಮಾರು 30 ಅಡಿ ಎತ್ತರ ಬೆಳೆಯುತ್ತದೆ ಸಂಯುಕ್ತ ಎಲೆಯಲ್ಲಿ 7-8 ಜೊತೆ ಕಿರುಪತ್ರಗಳು ಅಭಿಮುಖವಾಗಿ ಜೋಡಣೆಯಾಗಿರುತ್ತವೆ ಕಿರುಪತ್ರಗಳು ಕುಡುಗೋಲಿನಂತೆ ಬಾಗಿರುತ್ತವೆ. ಮಾರ್ಚ್-ಏಪ್ರಿಲ್ ತಿಂಗಳಿನಲ್ಲಿ



ಚಿತ್ರ 79. ಬೇವಿನ ಮರ - ಹೂಗಳಿರುವ ರೆಂಬೆ

ಮರವು ಗೊಂಚಲು ರೂಪದಲ್ಲಿ ಸಣ್ಣಗಿರುವ ಬೆಳ್ಳಗಿನ ಹೂಗಳನ್ನು ಬಿಡುತ್ತದೆ. ಹೂಗಳಿಗೆ ಜೇನಿನಂತಹ ಸುವಾಸನೆಯಿರುತ್ತದೆ

## ಉಪಯೋಗಗಳು

1 ಬೇವಿನ ಚಕ್ಕೆಯ ಕಷಾಯಕ್ಕೆ ಶುದ್ಧಿಮಾಡಿದ ಪುಡಿ ಇಂಗನ್ನು ಹಾಕಿ ದಿವಸಕ್ಕೊಮ್ಮೆಯಂತೆ 1-2 ದಿವಸ ಕುಡಿಸಿ ಆನಂತರ ಹರಳೆಣ್ಣೆಯನ್ನು ಭೇದಿಗೆ ಕೊಡುವುದರಿಂದ ಜಂತುಹುಳುಗಳು ಬೀಳುತ್ತವೆ.

2 ಬೇವಿನ ತೊಗಟೆಯ ಕಷಾಯ $^1/_4$ ಲೋಟ ತೆಗೆದುಕೊಂಡು ಅದಕ್ಕೆ 5 ಗುಂಜಿ ತೂಕ ಕಾಡುಜೀರಿಗೆ ಚೂರ್ಣ ಸೇರಿಸಿ ಕುಡಿಯುವುದರಿಂದ ಮಲೇರಿಯ ಜ್ವರ ವಾಸಿಯಾಗುತ್ತದೆ

3 ಒಂದು ತೊಲ ಬೇವಿನ ತೊಗಟೆಯ ಚೂರ್ಣವನ್ನು ಮೇಕೆಯ ಹಾಲಿನಲ್ಲಿ ಕದಡಿ ನಿತ್ಯ ಬೆಳಗೆ 1-2 ವಾರ ಕುಡಿಯುವುದರಿಂದ ಮೂಲವ್ಯಾಧಿ ಪರಿಹಾರವಾಗುತ್ತದೆ

4 ಬೇವಿನ ಪಂಚಾಂಗವನ್ನು (ಬೇರು, ತೊಗಟೆ, ಎಲೆ, ಹೂ, ಕಾಯಿ) ಸಮಪ್ರಮಾಣದಲ್ಲಿ ಕೂಡಿಸಿ ಬಾಣಲಿಯುಲ್ಲಿ ಹಾಕಿ ಹುರಿದು ಕರಕುಮಾಡಿಕೊಂಡು ನಿತ್ಯ ಬೆಳಗ್ಗೆ ರಾತ್ರಿ $^1/_2$ ರಿಂದ $^3/_4$ ತೊಲ ಚೂರ್ಣವನ್ನು ತಣ್ಣೀರಿನಲ್ಲಿ ಕಲಸಿ ತಿನ್ನುತ್ತಾ ಇದೇ ಚೂರ್ಣವನ್ನು ಬೇವಿನ ಎಣ್ಣೆಯಲ್ಲಿ ಕಲಸಿ ಮುಲಾಮು ಮಾಡಿ ತೊನ್ನಿರುವ ಜಾಗದಮೇಲೆ ಲೇಪಿಸಬೇಕು ಈ ಚಿಕಿತ್ಸೆಯನ್ನು 3-4 ತಿಂಗಳು ಮಾಡುವುದರಿಂದ ತೊನ್ನು ನಿವಾರಣೆಯಾಗುತ್ತದೆ

5 ಬೇವಿನ ಪಂಚಾಂಗವನ್ನು ಚೂರ್ಣಮಾಡಿಕೊಂಡು ಬೇವಿನ ಎಣ್ಣೆಯಲ್ಲಿ ಕಲಸಿ ಹಾಲಿನೊಡನೆ ಸೇವಿಸುವುದರಿಂದ ಚರ್ಮವ್ಯಾಧಿಗಳು, ವಾತವ್ಯಾಧಿಗಳು, ಮೂತ್ರವ್ಯಾಧಿಗಳು ಮತ್ತು ನೇತ್ರರೋಗಗಳು ಗುಣವಾಗುತ್ತವೆ.

6 ಬೇವಿನ ಎಲೆಗೆ ಅರಿಸಿನ ಸೇರಿಸಿ ಅರೆದು ಮೈಗೆ ಹಚ್ಚಿಕೊಂಡು ಮಲಗಿದರೆ ಸೊಳ್ಳೆಗಳು ಕಡಿಯುವುದಿಲ್ಲ

7 ಬೇವಿನಸೊಪ್ಪು 3 ಭಾಗ, ಅರಿಸಿನ 3 ಭಾಗ ಮತ್ತು ಒಂದು ಭಾಗ ಎಳ್ಳನ್ನು ಸೇರಿಸಿ ಜೇನುತುಪ್ಪದೊಡನೆ ಅರೆದು ವ್ರಣಗಳ ಮೇಲೆ ಲೇಪಿಸಿದರೆ ಅವು ಬೇಗ ವಾಸಿಯಾಗುತ್ತವೆ

8 ಬೇವಿನ ಎಲೆಯ ರಸ ಸುಮಾರು 12-24 ಮಿ ಲೀ ನಷ್ಟು ತೆಗೆದುಕೊಂಡು ಸ್ವಲ್ಪ ಜೇನುತುಪ್ಪ ಸೇರಿಸಿ ಈ ಮಿಶ್ರಣವನ್ನು ಎರಡು ಭಾಗಮಾಡಿ ಬೆಳಗ್ಗೆ ಒಂದು ಭಾಗ ಮತ್ತು ಸಂಜೆ ಒಂದು ಭಾಗ ಹೀಗೆ ಕೆಲವು ದಿವಸ ಸೇವಿಸುವುದರಿಂದ ಕಾಮಾಲೆ ವಾಸಿಯಾಗುತ್ತದೆ

9 ಎಲೆಯ ರಸ ಸುಮಾರು 7-14 ಮಿ.ಲೀ ತೆಗೆದುಕೊಂಡು ದಿವಸಕ್ಕೆರಡು ಬಾರಿ ಸೇವಿಸುವುದರಿಂದ ಪಿತ್ತಜನ್ಯ ಹೊಟ್ಟೆನೋವು ಗುಣವಾಗುತ್ತದೆ

10 ಬೇವಿನಸೊಪ್ಪು ಕಡ್ಡಿ ಸಹಿತ ತಂದು ಒರಳಲ್ಲಿ ಕುಟ್ಟಿ ರಸ ಹಿಂಡಿಕೊಂಡು ಈ ರಸಕ್ಕೆ ಸಮಭಾಗ ಎಳ್ಳೆಣ್ಣೆಯನ್ನು ಸೇರಿಸಿ ಒಲೆಯ ಮೇಲಿಟ್ಟು ಬೇವಿನ ಕಟ್ಟಿಗೆಯ ಬೆಂಕಿಯಿಂದಲೇ ಕಾಯಿಸುತ್ತ ಬೇವಿನ ಕಡ್ಡಿಯಿಂದ ತಿರುವುತ್ತ ತೈಲಪಾಕ ಮಾಡಿಕೊಂಡು ಸೋಸಿ ಆರಿಸಿ ಸೀಸೆಯಲ್ಲಿ ತುಂಬಿಟ್ಟು ಕೊಳ್ಳಬೇಕು ಈ ತೈಲಪಾಕವನ್ನು ಹೊತ್ತಿಗೆ ಒಂದು ತೊಲದಂತೆ ಎರಡು ಹೊತ್ತು ಪ್ಲೇಗಿನ ರೋಗಿಗೆ ಕುಡಿಸಬೇಕು ಮತ್ತು ಇದನ್ನೇ ಪ್ಲೇಗಿನ ಗಡ್ಡೆಗಳ ಮೇಲೆ ಲೇಪಿಸಬೇಕು

11 ಬೇವಿನ ಚಿಗುರನ್ನು ನೀರಿನಲ್ಲಿ ನಯವಾಗಿ ಅರೆದು ತಣ್ಣೀರಿನಲ್ಲಿ ಕದಡಿ ಮಂತಿನಿಂದ ಕಡೆದು ಬಂದ ನೊರೆಯನ್ನು ಮೈಗೆ ಸವರುವುದರಿಂದ ಜ್ವರದಿಂದ ಬಂದ ಮೈಯುರಿ ಕಡಿಮೆಯಾಗುತ್ತದೆ ಮತ್ತು ಜ್ವರದ ತಾಪವೂ ಕಡಿಮೆಯಾಗುತ್ತದೆ

12 ಹೂವಿನ ಕಷಾಯವನ್ನು ಮಕ್ಕಳಿಗೆ ಕುಡಿಸುವುದರಿಂದ ಮಕ್ಕಳ ಹೊಟ್ಟೆ ಶುದ್ಧಿಯಾಗುತ್ತದೆ

13 ಬೇವಿನ ಹೂಗಳನ್ನು ಒಣಗಿಸಿ ತಯಾರಿಸಿಕೊಂಡ ಚೂರ್ಣವನ್ನು ಪ್ರತಿದಿವಸ ಬೆಳಗ್ಗೆ ಜೇನುತುಪ್ಪದಲ್ಲಿ ನೆನೆಹಾಕಿ ರಾತ್ರಿ ಜೇನುತುಪ್ಪ ಸಹಿತ ತಿನ್ನುವುದರಿಂದ ದೇಹವು ಆರೋಗ್ಯ ಪೂರ್ಣವಾಗುವುದು

14 ಬೇವಿನ ಬೀಜಗಳನ್ನು ಗೋಮುತ್ರದಲ್ಲಿ ಅರೆದು ತಲೆಗೆ ಬೆಳಗ್ಗೆ ಹಚ್ಚಿ ಸಂಜೆ ತಲೆ ತೊಳೆದುಕೊಳ್ಳುವುದರಿಂದ ಹೇನುಗಳು ನಾಶವಾಗುತ್ತವೆ. ಈ ಚಿಕಿತ್ಸೆಯನ್ನು ಒಂದು ವಾರ ನಡೆಸುವುದೊಳ್ಳೆಯದು. ಬೇವಿನ ಎಣ್ಣೆಯನ್ನು ತಲೆಗೆ ಹಚ್ಚಿ 3-4 ಗಂಟೆ ಬಿಟ್ಟು ಸ್ನಾನ ಮಾಡುವುದರಿಂದಲೂ ತಲೆಯ ಹೇನುಗಳು ನಾಶವಾಗುತ್ತವೆ

15 ಬೇವಿನ ಎಣ್ಣೆ ಲೇಪಿಸುವುದರಿಂದ ಗಜಕರ್ಣ ಗುಣವಾಗುತ್ತದೆ.

16 ಬೇವಿನ ಎಣ್ಣೆಯನ್ನು ಸಂಭೋಗಕ್ಕೆ ಮುನ್ನ ಲಿಂಗ ಮತ್ತು ಯೋನಿದ್ವಾರಕ್ಕೆ ಹಚ್ಚಿ ಸಂಭೋಗಿಸಿದರೆ ಗರ್ಭಧಾರಣೆಯಾಗುವುದಿಲ್ಲ.

## ಪಶುರೋಗ ಚಿಕಿತ್ಸೆಯಲ್ಲಿ

1 ಬೇವಿನ ತೊಗಟೆಯನ್ನು ಬಾಲದ ನೂತಿ ರೋಗದಲ್ಲಿ ಬಳಸುತ್ತಾರೆ ಚಿಕಿತ್ಸಾ ಕ್ರಮಕ್ಕೆ ಕಣಗಿಲೆಗಿಡದ ಉಪಯೋಗಗಳನ್ನು ನೋಡುವುದು.

2 ಬೇವಿನ ಚಿಗುರೆಲೆಗಳನ್ನು ಅರೆದು ಅರಿಸಿನ ಮತ್ತು ಕೊಬ್ಬರಿಎಣ್ಣೆ ಸೇರಿಸಿ ಕಲಸಿ ಮೈಮೇಲೆ ಕಾಣಿಸಿಕೊಳ್ಳುವ ದಡಾರದ ಹುಣ್ಣಿಗೆ ಲೇಪಿಸುತ್ತಾರೆ.

3 ಬೇವಿನ ಚಿಗುರೆಲೆಯನ್ನು ನೆರಳಿನಲ್ಲಿ ಒಣಗಿಸಿ ಕುಟ್ಟಿ ಪುಡಿಮಾಡಿಕೊಂಡು ಕೊಂಬು ಮುರಿದು ರಕ್ತ ಸುರಿಯುತ್ತಿರುವ ಕಡೆ ಸಿಂಪಡಿಸುವುದರಿಂದ ರಕ್ತ ನಿಲ್ಲುವುದಲ್ಲದೆ ಗಾಯ ಬೇಗ ವಾಸಿಯಾಗುತ್ತದೆ

4 ಬೇವಿನ ಚಿಗುರೆಲೆಯನ್ನು ಸುಟ್ಟು ಕರಕುಮಾಡಿ ಬೇವಿನ ಎಣ್ಣೆಯಲ್ಲಿ ಅರೆದು ಗಾಯದ ಮೇಲೆ ಲೇಪಿಸುವುದರಿಂದ ಕೀಡೆಗಳು ಸತ್ತು ಹೋಗುತ್ತದೆ

5 ಬೇವಿನ ಸೊಪ್ಪು, ವಿಷಮಧಾರಿ ಸೊಪ್ಪು ಮತ್ತು ತುಂಬೆಸೊಪ್ಪನ್ನು ಸಮಪ್ರಮಾಣದಲ್ಲಿ ತೆಗೆದುಕೊಂಡು ಚೆನ್ನಾಗಿ ಅರೆದು ತಕ್ಕಷ್ಟು ಪುಡಿ ಅರಿಸಿನ ಸೇರಿಸಿ ಕಲಸಿ ಮೈಗೆ ಲೇಪಿಸುವುದರಿಂದ ಉಣ್ಣೆಯು ಉಪಟಳ ಕಡಿಮೆಯಾಗುತ್ತದೆ.

# ಭಂಗಿಸೊಪ್ಪು

| | |
|---|---|
| ವೈಜ್ಞಾನಿಕ ಹೆಸರು | ಕೆನ್ನಾಬಿಸ್ ಸಟೈವ<br>[Cannabıs satıva L ] |
| ಸಸ್ಯದ ಕುಟುಂಬ | ಕೆನ್ನಾಬಿನೇಸಿ [Cannabınaceae] |
| ಕನ್ನಡದ ಇತರ ಹೆಸರುಗಳು | ಕುಸುವು, ಗಾಂಜಾಗಿಡ, ಸಿದ್ಧಪತ್ರಿ |
| ಇತರ ಭಾಷೆಯ ಹೆಸರುಗಳು | ಸಂ - ಭಂಗ, ವಿಜಯ, ಗಂಜಿಕ<br>ಹಿಂ - ಭಂಗ್, ಗಾಂಜ, ಚರಸ್, ಸಿದ್ಧಿ, ಜಿಯ<br>ತ - ಗಾಂಜ, ಭಂಗಿ<br>ತೆ - ಗಂಜೈ, ಕಲ್ಪಂಚೆಟ್ಟು<br>ಇಂ - ಗಾಂಜ, ಹೆಂಪ್, ಇಂಡಿಯನ್ ಹೆಂಪ್ |

**ಪರಿಚಯ**

ಭಂಗಿಸೊಪ್ಪಿನ ತವರು ಮಧ್ಯ ಏಷ್ಯಾ ಇದನ್ನು ಪಂಜಾಬ್, ಬಿಹಾರ ಮುಂತಾದ ಕಡೆ ನಾರಿಗಾಗಿ ಬೆಳೆಸುತ್ತಾರೆ. ಪ್ರಾಕೃತಿಕವಾಗಿ ಈ ಗಿಡವು ದೊರೆಯುವುದಿಲ್ಲ ಸರ್ಕಾರದಿಂದ ಅನುಮತಿ ಪಡೆದು ಇದನ್ನು ಬೆಳೆಸುತ್ತಾರೆ. ಅನುಮತಿಯಿಲ್ಲದೆ ಬೆಳೆಯುವುದು ಶಿಕ್ಷಾರ್ಹ ಅಪರಾಧವಾಗುತ್ತದೆ

ಕೆಲವು ಪಂದಸಾರಿ ಅಂಗಡಿಗಳಲ್ಲಿ ಈ ಮೂಲಿಕೆಯು ಔಷಧಿಗಾಗಿ ಮಾತ್ರ ದೊರೆಯುತ್ತದೆ ಕೊಂಡು ತಂದು ಬಳಸಬಹುದು

ಈ ಮೂಲಿಕೆಯು 4-6 ಅಡಿ ಎತ್ತರ ಬೆಳೆಯುತ್ತದೆ ನಾಲ್ಕು ಮೂಲೆಗಳಿರುವ ಕಾಂಡದ ಮೇಲೆ ಸರಳ ಎಲೆಗಳು ಪರ್ಯಾಯವಾಗಿ

ಜೋಡಣೆಯಾಗಿರುತ್ತವೆ. ಎಲೆಗಳು ಅಂಗೈ ಬೆರಳಿನಂತೆ ಸೀಳಿರುತ್ತವೆ. ಗಿಡದಲ್ಲಿ ಗಂಡು ಹೂ ಮತ್ತು ಹೆಣ್ಣು ಹೂ ಬಿಡುವ ಗಿಡಗಳು ಬೇರೆ ಬೇರೆಯಾಗಿರುತ್ತದೆ ಗಂಡುಹೂಗಳ ಪುಷ್ಪಮಂಜರಿ ಉದ್ದವಾಗಿರುತ್ತದೆ ಹೆಣ್ಣು ಹೂಗಳು ಪುಷ್ಪಮಂಜರಿ ಗುಚ್ಛದಂತಿದ್ದು ಎಲೆಯ ಕಂಕುಳಲ್ಲಿರುತ್ತದೆ ಗಿಡದ ಎಲ್ಲಾ ಭಾಗಗಳ ಮೇಲೆ ಗ್ರಂಥಿರೋಮಗಳಿರುತ್ತವೆ ಅವುಗಳಿಂದ ಒಂದು ಬಗೆಯ ವಾಸನೆ ಹೊಮ್ಮುತ್ತಿರುತ್ತದೆ.

## ಉಪಯೋಗಗಳು

**ಸೂಚನೆ** . ಭಂಗಿಸೊಪ್ಪು ಮಾದಕ ವಸ್ತುವಾದುದರಿಂದ ಇದರ ಅತಿಯಾದ ಸೇವನೆಯಿಂದ, ಭ್ರಮೆ, ಅಸಂಬದ್ಧ ಪ್ರಲಾಪ, ದೃಷ್ಟಿ ಮಂಜಾಗುವುದು, ಚರ್ಮ ಒಣಗುವುದು ಮುಂತಾದ ಲಕ್ಷಣಗಳು ಕಂಡು ಬರುತ್ತವೆ ಕೆಲವೊಮ್ಮೆ ಉಸಿರಾಟದ ತೊಂದರೆ ಉಂಟಾಗಬಹುದು ಆದುದರಿಂದ ಮಿತವಾಗಿ ವೈದ್ಯರ ಸಲಹೆಯಂತೆ ಉಪಯೋಗಿಸವುದೊಳ್ಳೆಯದು

1. ಎಲೆಯ ರಸವನ್ನು ತಲೆಗೆ ಲೇಪಿಸುವುದರಿಂದ ತಲೆಯ ಹೊಟ್ಟು ಮತ್ತು ಹೇನು ಕಡಿಮೆಯಾಗುತ್ತವೆ

2. ಎಲೆಯ ರಸವನ್ನು ಕಿವಿಗೆ ಹಾಕುವುದರಿಂದ ಕಿವಿಯಲ್ಲಿ ಹುಳು ಸೇರಿದ್ದರೆ ಸತ್ತು ಹೋಗುತ್ತವೆ

3. ಎಲೆಯ ಚೂರ್ಣಕ್ಕೆ ಸಕ್ಕರೆ ಸೇರಿಸಿ ತುಪ್ಪದಲ್ಲಿ ಉರಿದು ಮೆಣಸಿನೊಡನೆ ತಿನ್ನಿಸುವುದರಿಂದ ಬಹಳ ದಿವಸದಿಂದ ಕಾಡುವ ಭೇದಿ ವಾಸಿಯಾಗುತ್ತದೆ

4. ಎಲೆಯನ್ನು ಅರೆದು ಊತವಿರುವ ಜಾಗದ ಮೇಲೆ ಲೇಪಿಸುವುದರಿಂದ ನೋವು ಕಡಿಮೆಯಾಗುತ್ತದೆ.

5. ಭಂಗಿಸೊಪ್ಪಿನ ಧೂಪ ಹಾಕಿ ದೂಪವು ಗುದದ್ವಾರಕೆ ತಾಗುವಂತೆ ಕುಳಿತುಕೊಳ್ಳುವುದರಿಂದ ಭಗಂದರ ಮತ್ತು ಮೂಲವ್ಯಾಧಿಯ ನೋವು ಶಮನವಾಗುತ್ತದೆ

6 ಭಂಗಿಸೊಪ್ಪನ್ನು ಅಲ್ಪಪ್ರಮಾಣದಲ್ಲಿ ಸೇವಿಸುವುದರಿಂದ ಅಜೀರ್ಣ ಮತ್ತು ಹೊಟ್ಟೆನೋವು ವಾಸಿಯಾಗುತ್ತದೆ.

7 ಎಲೆಯ ಚೂರ್ಣವನ್ನು ಗಾಯದ ಮೇಲೆ ಸಿಂಪಡಿಸುವುದರಿಂದ ರಕ್ತ ಸ್ರಾವ ನಿಲ್ಲುತ್ತದೆ.

8 ಭಂಗಿಸೊಪ್ಪಿನ ಸೇವನೆಯಿಂದ ಕಫವು ಕಡಿಮೆಯಾಗಿ ಕೆಮ್ಮು ಗುಣವಾಗುತ್ತದೆ.

9 ಭಂಗಿಸೊಪ್ಪಿನ ಸೇವನೆಯಿಂದ ಮುಟ್ಟಿನ ದೋಷ ಪರಿಹಾರವಾಗುತ್ತದೆ

10 ಭಂಗಿಸೊಪ್ಪಿನ ಸೇವನೆಯು ಕಾಮೋದ್ದೀಪನಗೊಳಿಸುತ್ತದೆ.

## ಪಶುರೋಗ ಚಿಕಿತ್ಸೆಯಲ್ಲಿ

1 ಭಂಗಿಸೊಪ್ಪು ಮತ್ತು ತಪಸಿ ಮರದ ತೊಗಟೆಯನ್ನು ಸಮಪ್ರಮಾಣದಲ್ಲಿ ತೆಗೆದುಕೊಂಡು ಚೆನ್ನಾಗಿ ಅರೆದು ಇಸಬು ಇರುವ ಕಡೆ ವಾಸಿಯಾಗುವವರೆಗೆ ಲೇಪಿಸಬೇಕು.

2 ಭಂಗಿಸೊಪ್ಪು ಮತ್ತು ತುಂಬೆಸೊಪ್ಪುಗಳನ್ನು ಅರೆದು ರಸ ತೆಗೆದು ಬಟ್ಟೆಯಲ್ಲಿ ಶೋಧಿಸಿ ದಿವಸಕ್ಕೆರಡು ಬಾರಿ ಕಣ್ಣಿಗೆ ಹಾಕುವುದರಿಂದ ಕಣ್ಣುನೋವು ಗುಣವಾಗುತ್ತದೆ

3 ಭಂಗಿಸೊಪ್ಪು ಕಾಲು ಭಾಗಕ್ಕೆ ಮೂರು ಭಾಗ ತಪಸಿ ಸೊಪ್ಪು ಸೇರಿಸಿ ಅರೆದಿಟ್ಟುಕೊಂಡು ಗಂಡಾಮಾಲೆಯ ಗಂಟುಗಳಲ್ಲಿ ಕೀವು ತುಂಬಿದ್ದರೆ ಸೂಜಿಯಿಂದ ಚುಚ್ಚಿ ಕೀವನ್ನು ಹೊರತೆಗೆದು ಮೇಲಿನ ಔಷಧವನ್ನು ಲೇಪಿಸುವುದರಿಂದ ಗಂಡಾಮಾಲೆ (ಕೊರಳಬೇನೆ) ವಾಸಿಯಾಗುತ್ತದೆ.

4 ಭಂಗಿಸೊಪ್ಪು 10 ಗ್ರಾಂ, ಚಿತ್ರಮೂಲದ ಬೇರು ಎರಡು ಹಿಡಿ ಪ್ರಮಾಣ, ಇವೆರಡನ್ನೂ ನಿಂಬೆ ರಸದಲ್ಲಿ ಅರೆದು ನುಣ್ಣಗೆ ಗಂಧಮಾಡಿಕೊಂಡು ಮೂಗಿನ ಹೊಳ್ಳೆಯೊಳ್ಳಕ್ಕೆ ದಿವಸಕ್ಕೊಮ್ಮೆಯಂತೆ 2-3 ದಿವಸ ಲೇಪಿಸುವುದರಿಂದ ಪಿನಾಸಿ (ಸೊರಕು) ರೋಗ ವಾಸಿಯಾಗುತ್ತದೆ





ಚಿತ್ರ 81 ಭೀಮನಕಡ್ಡಿ

# ಭೀಮನಕಡ್ಡಿ

| | |
|---|---|
| ವೈಜ್ಞಾನಿಕ ಹೆಸರು | ಸೈಡ ಅಕ್ಯುಟ [Sida acuta Burm f ] |
| ಸಸ್ಯದ ಕುಟುಂಬ | ಮಾಲ್ವೇಸಿ [Malvaceae] |
| ಕನ್ನಡದ ಇತರ ಹೆಸರುಗಳು | ದೊಡ್ಡ ಬಿಂದಿಗೆ ಗಿಡ, ವಿಷಕಡ್ಡಿ |
| ಇತರ ಭಾಷೆಯ ಹೆಸರುಗಳು | ಸಂ. - ಬಲ, ರಾಜಬಲ, ಪ್ರಾಣಿಜೀವಿಕ, ಫಣಿಜೀವಿಕ, ವಾತ್ಯಾಲಿಕ, ವತ್ಯ |
| | ಹಿಂ. - ಖರೇಟ, ಬಾರಿಯಾರ, ಜಂಗ್ಲಿಮೇಧಿ, ಲಾಹಂಚಿಹ್ನೆ, |
| | ತ - ವಾಜವಾಸಿ, ಮಲೈತಂಗಿ |
| | ತೆ - ಚಿಟ್ಟಮು, ಚಿಟ್ಟಮುಟ್ಟಿ, ವಿಷಬೋಧಿ |
| | ಇಂ. - ದಿ ಹಾರ್ನ್ ಬೀಮ್ - ಲೀವ್ಡ್ ಸೈಡ |

**ಪರಿಚಯ**

ಭೀಮನಕಡ್ಡಿ ಕಳ್ಳಿ ಕುರುಚಲು ಗಿಡಗಳನ್ನೊಳಗೊಂಡ ಸಸ್ಯಾವರಣದಲ್ಲಿ, ಬೆಟ್ಟ ಗುಡ್ಡಗಳಲ್ಲಿ, ಗೋಮಾಳದಲ್ಲಿ ಮತ್ತು ಬೀಳು ಭೂಮಿಯಲ್ಲಿ ಬೆಳೆಯುತ್ತದೆ ಇದು ಒಣ ಹವೆಯಿರುವ ಕಡೆ ಚೆನ್ನಾಗಿ ಬೆಳೆಯುತ್ತದೆ ಹಳ್ಳಿಗಳಲ್ಲಿ ಗಿಡದ ರೆಂಬೆಗಳನ್ನು ಕತ್ತರಿಸಿ ಪೊರಕೆಯಂತೆ ಕಟ್ಟಿ ಕಣಗಾಲದಲ್ಲಿ ಕಣ ಗುಡಿಸಲು ಬಳಸುತ್ತಾರೆ ಈ ಮೂಲಿಕೆಯು ಸಣ್ಣ ಪೊದೆಯಂತೆ ಬೆಳೆಯುತ್ತದೆ ಕುಡಿಯನ್ನು ಚಿವುಟಿ ಹೊಸಕಿದರೆ ಲೋಳೆಯಂತಿರುತ್ತದೆ ಸರಳವಾದ ಚಿಕ್ಕ ತೊಟ್ಟಿನ ನೀಳವಾದ ಎಲೆಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ. ಎಲೆತೊಟ್ಟಿನ ತುದಿ ದಪ್ಪನಾಗಿರುತ್ತದೆ ತೊಟ್ಟಿನ ಅಕ್ಕಪಕ್ಕದಲ್ಲಿ ಅನುಪತ್ರಗಳಿರುತ್ತವೆ ಎಲೆಯ ಅಂಚು ಗರಗಸದ ಹಲ್ಲಿನಂತಿರುತ್ತದೆ ಎಲೆಯ ಮೇಲ್ಭಾಗ ಹಸಿರಾಗಿದ್ದು ಕೆಳಭಾಗ ತಿಳಿಹಸಿರಾಗಿರುತ್ತದೆ. ಸಾಮಾನ್ಯವಾಗಿ ಎಲೆಯ ಕಂಕುಳಲ್ಲಿ ಸಣ್ಣದಾದ ಹಳದಿ ಬಣ್ಣದ ಒಂದು ಹೂ ಇರುತ್ತದೆ ಕೆಲವೊಮ್ಮೆ ಹೂವಿನ ಗೊಂಚಲಿರುತ್ತದೆ ಹೂಗಳು

ಆಕೃತಿಯಲ್ಲಿ ದಾಸವಾಳದ ಹೂವನ್ನು ಹೋಲುತ್ತದೆ. ಕಾಯಿಯಲ್ಲಿ 5-10 ಕಿರುಕಾಯಿಗಳಿರುತ್ತವೆ. ಅವುಗಳಲ್ಲಿ ಕಪ್ಪನೆಯ ಬೀಜಗಳಿರುತ್ತವೆ

## ಉಪಯೋಗಗಳು

1 ಬೇರಿನ ಗಂಧ ಅಥವಾ ಎಲೆಯನ್ನು ಅರೆದು ತಿನ್ನಿಸುವುದರಿಂದ ಜಂತುಹುಳುಗಳು ಬಿದ್ದುಹೋಗುತ್ತವೆ.

2 ಬೇರಿನ ಗಂಧವನ್ನು ಗಾಯ ಮತ್ತು ವ್ರಣಗಳ ಮೇಲೆ ಲೇಪಿಸುತ್ತಾರೆ

3 ಬೇರಿನ ಕಷಾಯ ಕುಡಿಸುವುದರಿಂದ ಬಲಹೀನತೆ ಕಡಿಮೆಯಾಗುತ್ತದೆ.

4 ಬೇರಿನ ಮತ್ತು ಎಲೆಯ ಕಷಾಯ ಸೇವನೆಯಿಂದ ನಪುಂಸಕತ್ವ ಮತ್ತು ಮೂಲವ್ಯಾಧಿ ಗುಣವಾಗುತ್ತವೆ.

5 ಎಲೆಯನ್ನು ಎಳ್ಳೆಣ್ಣೆಯಲ್ಲಿ ಅದ್ದಿ ಹೆಂಚಿನ ಮೇಲೆ ಬಾಡಿಸಿ ಬಾವು ಮತ್ತು ಕುರುವಿನ ಮೇಲೆ ಕಟ್ಟುವುದರಿಂದ ಅವು ಬೇಗ ಮಾಗಿ ಹೊಡೆದು ನೋವು ಕಡಿಮೆಯಾಗುತ್ತದೆ.

6 ಎಲೆಯ ರಸ ಸೇವನೆಯಿಂದ ಎದೆನೋವು ಕಡಿಮೆಯಾಗುತ್ತದೆ

7 ಒಂದು ಹಿಡಿ ಎಲೆಯನ್ನು ದಿವಸಕ್ಕೊಮ್ಮೆಯಂತೆ 40 ದಿವಸ ಸೇವಿಸುವುದರಿಂದ ಮಧುಮೇಹ ಹತೋಟಿಗೆ ಬರುತ್ತದೆ.

8 ಸೊಪ್ಪನ್ನು ಎದೆ ಹಾಲಿನಲ್ಲಿ ಅರೆದು ಬಟ್ಟೆಯಲ್ಲಿ ಗಂಟುಕಟ್ಟಿ ಪೊರೆ ಬೆಳೆದಿರುವ ಕಣ್ಣಿಗೆ ಹಾಕುತ್ತಾರೆ.

9 ಗಿಡದ ಸಮೂಲವನ್ನು ಅರೆದು ಜಜ್ಜಿದ ಶುಂಠಿ ಸೇರಿಸಿ ಬೆಳಿಗ್ಗೆ ಮತ್ತು ಸಂಜೆ ಒಂದು ಚಮಚ ಪ್ರಮಾಣ ತಿನ್ನಿಸುವುದರಿಂದ ಬಿಟ್ಟು ಬಿಟ್ಟು ಬರುವ ಜ್ವರ ಮತ್ತು ಇತರ ಉದರ ಸಂಭಂದದ ಕಾಯಿಲೆಗಳು ವಾಸಿಯಾಗುತ್ತವೆ

## ಪಶುರೋಗ ಚಿಕಿತ್ಸೆಯಲ್ಲಿ

ಭೀಮನ ಕಡ್ಡಿ ಸೊಪ್ಪನ್ನು ಅರೆದು ಬಟ್ಟೆಯಲ್ಲಿ ಗಂಟುಕಟ್ಟಿ ಮೇಕೆ ಹಾಲಿನಲ್ಲಿ ಅದ್ದಿ ಪೊರೆ ಬಂದಿರುವ ಕಣ್ಣಿಗೆ ಹಿಂಡುತ್ತಾರೆ



# ಭೇದಿಸೊಪ್ಪು

| | | |
|---|---|---|
| ವೈಜ್ಞಾನಿಕ ಹೆಸರು | : | ಯೂಫೊರ್ಬಿಯ ಜನಿಕುಲಾಟ [Euphorbia geniculata Ort ] |
| ಸಸ್ಯದ ಕುಟುಂಬ | | ಯೂಫೊರ್ಬಿಯೇಸಿ [Euphorbiaceae] |
| ಕನ್ನಡದ ಇತರ ಹೆಸರುಗಳು | · | ಅಲ್ಪಭೇದಿ ಸೊಪ್ಪು, ಸೀಮೆಭೇದಿ ಸೊಪ್ಪು, ಜಲಭೇದಿಸೊಪ್ಪು |

**ಪರಿಚಯ**

ಈ ಮೂಲಿಕೆಯು ಕ್ರಿ.ಶ. 1946 ರಿಂದೀಚೆಗೆ ದಕ್ಷಿಣ ಭಾರತಕ್ಕೆ ಬಂದ ಒಂದು ವಿದೇಶಿ ಕಳೆ. ಈ ಮೂಲಿಕೆಯು ತೋಟದಲ್ಲಿ ತೇವಾಂಶ ಹೆಚ್ಚಾಗಿರುವ ಕಡೆ ಮತ್ತು ಮರದ ನೆರಳಿರುವ ಕಡೆ ಹೆಚ್ಚಾಗಿ ಕಂಡುಬರುತ್ತದೆ ಈ ಗಿಡವು 30-60 ಸೆ.ಮೀ. ಎತ್ತರ ಬೆಳೆಯುತ್ತದೆ. ಗಿಡದಲ್ಲಿ ಹಾಲಿನಂತಹ ಸಸ್ಯಕ್ಷೀರವಿರುತ್ತದೆ ಕಾಂಡ ಟೊಳ್ಳಾಗಿರುತ್ತದೆ. ಸರಳವಾದ ಕರ್ನೆಯಾಕಾರದ ತಿಳಿ ಹಸಿರು ಬಣ್ಣದ ಎಲೆಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ. ಕಾಂಡದ ತುದಿಯಲ್ಲಿ ಎಲೆಗಳು ಒತ್ತಾಗಿ ಜೋಡಣೆಯಾಗಿರುತ್ತವೆ. ಎಲೆಗಳ ಕಂಕುಳಲ್ಲಿ ವಿಶೇಷ ರೀತಿಯ ಪುಷ್ಪಮಂಜರಿ (ಸಯಾಥಿಯಂ) ಗೊಂಚಲಿರುತ್ತದೆ. ಒಂದು ಸಯಾಥಿಯಂ ಪುಷ್ಪಮಂಜರಿಯಲ್ಲಿ ಹಲವು ನಗ್ನ ಗಂಡುಹೂಗಳು ಮತ್ತು ಒಂದು ನಗ್ನ ಹೆಣ್ಣುಹೂವಿರುತ್ತದೆ. ಒಣ ಹಣ್ಣಿನಲ್ಲಿ ಮೂರು ದಟ್ಟ ಬೂದು ಬಣ್ಣದ ಬೀಜಗಳಿರುತ್ತವೆ.

## ಉಪಯೋಗಗಳು

1 ಭೇದಿಸೊಪ್ಪು ಗಿಡದ 8 15 ಎಲೆಗಳನ್ನು ತೊಳೆದು 1 ಲೋಟ ನೀರಿನಲ್ಲಿ ಬೇಯಿಸಿ ಆರಿದ ನಂತರ ಆ ಸೊಪ್ಪನ್ನು ತಿಂದು ಬೇಯಿಸಿದ ನೀರು ಕುಡಿಯುವುದರಿಂದ 2-3 ಗಂಟೆಯ ನಂತರ 2-3 ಸಲ ಭೇದಿಯಾಗಿ ನಿಲ್ಲುತ್ತದೆ. ನಿಲ್ಲದಿದ್ದ ಪಕ್ಷದಲ್ಲಿ ಒಂದು ಲೋಟ ಮಜ್ಜಿಗೆ ಕುಡಿದಲ್ಲಿ ಭೇದಿ ನಿಲ್ಲುತ್ತದೆ





ಚಿತ್ರ 82 : ಭೇದಿಸೊಪ್ಪು

# ಮಗ್ಗಾರೆ

| | |
|---|---|
| ವೈಜ್ಞಾನಿಕ ಹೆಸರು | ಝೀರಾಂಫಿಸ್ ಸ್ಪೈನೋಸ [Xeromphis spinosa (Thunb ) Keay]<br>= ರ್‍ಯಾಂಡಿಯ ಡುಮಿಟೊರಂ [=Randia dumetorum (Retz ) Poir ] |
| ಸಸ್ಯದ ಕುಟುಂಬ | ರುಬಿಯೇಸಿ [Rubiaceae] |
| ಕನ್ನಡದ ಇತರ ಹೆಸರುಗಳು | ಬಂಗಾರೆ, ಬೂದುಗಾರೆ, ಮನಗಾರೆ, ಮದನಫಲ, ಮೊಗ್ಗರೆ |
| ಇತರ ಭಾಷೆಯ ಹೆಸರುಗಳು | ಸಂ. - ಮದನ<br>ಹಿಂ. - ಮೆನ್ ಫಲ್, ಮಯಿನ, ಪಿಂಡ, ಮಿಂಢ್ಲ<br>ತ - ಮಲಂಕಾರೈ, ಮದುಕಾರೈ, ಪೊಂಗಾರೈ<br>ತೆ. - ಮಂಗರ, ಮಂದ, ಮಂಗ<br>ಇಂ. - ಇಮಿಟಿಕ್ ನಟ್ |

**ಪರಿಚಯ**

ಪೊದೆಯಂತೆ ಇಲ್ಲವೆ ಸಣ್ಣ ಮರದಂತಿರುವ ಮಗ್ಗಾರೆಯು ಸಾಮಾನ್ಯವಾಗಿ ಕುರುಚಲು ಗಿಡಗಳನ್ನೊಳಗೊಂಡ ಸಸ್ಯಾವರಣದಲ್ಲಿ ಕಂಡುಬರುತ್ತದೆ ಬೂದು ಬಣ್ಣದ ಕಾಂಡವು ಗಟ್ಟಿಯಾಗಿರುತ್ತದೆ ಗೆಣ್ಣಿನ ಜಾಗದಲ್ಲಿ ಸುಮಾರು 2 5 ರಿಂದ 3 8 ಸೆ ಮೀ ಉದ್ದದ ಮುಳ್ಳುಗಳು ಅಭಿಮುಖವಾಗಿ ಜೋಡಣೆಯಾಗಿರುತ್ತವೆ. ಕೆಲವೊಮ್ಮೆ ಎದುರು ಎಲೆಯು ಬೆಳೆದಿರುವುದಿಲ್ಲ ಕುಂಟಿತ ಬೆಳವಣಿಗೆಯ ಕಾಂಡವು ಮಾರ್ಚ್-ಜೂನ್ ವೇಳೆಗೆ ಹೂಗಳನ್ನು ಬಿಡುತ್ತದೆ. ಹೂಗಳು ಬಿಳುವಾಗಿರುತ್ತವೆ ಇಲ್ಲವೆ ಹಸಿರು ಮಿಶ್ರಿತ ಬಿಳುವಾಗಿರುತ್ತವೆ ಬಲಿತಂತೆ ಅವು ಹಳದಿ ಬಣ್ಣಕ್ಕೆ ತಿರುಗುತ್ತವೆ ಗೋಳಾಕಾರದ ಕಾಯಿಗಳು ಮಾಗಿದಾಗ ಸುವಾಸನೆ ಬೀರುತ್ತವೆ



ಚಿತ್ರ 83 . ಮಗ್ಗಾರೆ - ಹೂಗಳಿರುವ ರೆಂಬೆ

## ಉಪಯೋಗಗಳು

1 ತೊಗಟೆಯನ್ನು ಅರೆದು 10 ಗ್ರಾಂನಷ್ಟು ಹೊಟ್ಟೆಗೆ ಕುಡಿಸಿ ಉಳಿದ ಗಂಧವನ್ನು ವಾಯು ನೋವಿರುವ ಜಾಗದ ಮೇಲೆ ಲೇಪಿಸುತ್ತಾರೆ.

2 ತೊಗಟೆಯನ್ನು ಅರೆದು ಭೇದಿ ಮತ್ತು ರಕ್ತ ಭೇದಿಯಾದಾಗ ಕುಡಿಸುತ್ತಾರೆ

3 ತೊಗಟೆಯ ಕಷಾಯದಿಂದ ಗಾಯಗಳನ್ನು ತೊಳೆಯುವುದರಿಂದ ಅವು ಬೇಗ ವಾಸಿಯಾಗುತ್ತವೆ

4 ಮಗ್ಗಾರೆ ಹಣ್ಣನ್ನು ಅಕ್ಕಿ ಕಚ್ಚಿನಲ್ಲಿ ಅರೆದು ಹೊಕ್ಕುಳಿನ ಮೇಲೆ ಲೇಪಿಸುವುದರಿಂದ ಹೊಟ್ಟೆನೋವು ಗುಣವಾಗುತ್ತದೆ

5 ಮಗ್ಗಾರೆ ಹಣ್ಣಿನ ಸೇವನೆ ವಾಂತಿ ಕಾರಕವಾಗಿ ಕೆಲಸ ಮಾಡುತ್ತದೆ ಕೆಮ್ಮಿರುವಾಗ ಸೇವಿಸಿದರೆ ಕಫ ಹೊರಬಂದು ಕೆಮ್ಮು ಕಡಿಮೆಯಾಗುತ್ತದೆ

6 ಕಾಯಿಯ ತೊಗಟೆಯನ್ನು ಅರೆದು ಮುಖಕ್ಕೆ ಹಚ್ಚುವುದರಿಂದ ಮೊಡವೆ ಗುಳ್ಳೆಗಳು ಕಡಿಮೆಯಾಗುತ್ತವೆ

7 ಮಂಗ್ಗಾರೆಕಾಯಿ ಅಥವಾ ಹಣ್ಣನ್ನು ನಿಂಬೆಹುಳಿಯಲ್ಲಿ ಅರೆದು ಲೇಪಿಸುವುದರಿಂದ ವಿಸರ್ಪ (Herpes) ವಾಸಿಯಾಗುತ್ತದೆ

8 ಮಗ್ಗಾರೆ ಹಣ್ಣಿನ ತಿರುಳನ್ನು ಅರೆದು ಸ್ತನಕ್ಕೆ ಪಟ್ಟುಹಾಕುವುದರಿಂದ ಸ್ತನದ ನೋವು ಮತ್ತು ಬಾವು ನಿವಾರಣೆಯಾಗುತ್ತದೆ

9 ಮಗ್ಗಾರೆಹಣ್ಣಿನ ರಸವನ್ನು ತಲೆಗೆ ಲೇಪಿಸುವುದರಿಂದ ಹೇನುಗಳು ನಿವಾರಣೆಯಾಗುತ್ತದೆ.

10 ಮಗ್ಗಾರೆ ಹಣ್ಣಿನ ಚೂರ್ಣ ಸೇವನೆಯಿಂದ ಭೇದಿ ನಿಲ್ಲುತ್ತದೆ.





ಚಿತ್ರ 84 ಮರಗಡೆ - ಹೂ ಮತ್ತು ಕಾಯಿಗಳಿರುವ ರೆಂಬೆಗಳು

# ಮರಗಡೆ

| | |
|---|---|
| ವೈಜ್ಞಾನಿಕ ಹೆಸರು | ಕಡಬ ಫ್ರೂಟಿಕೋಸ<br>[Cadaba fruticosa (L ) Druce]<br>=ಕಡಬ ಇಂಡಿಕ [=C indica Lamk ] |
| ಸಸ್ಯದ ಕುಟುಂಬ | ಕ್ಯಾಪ್ಪಾರೇಸಿ [Capparaceae] |
| ಕನ್ನಡದ ಇತರ ಹೆಸರುಗಳು | ಕೆಗನಿಗೆ, ಚಾಯಗವಚೆ, ಚೆಗನಿಕೆ, ಚೌಗಡ ಮರಗಚೆ, ಮಗರೆ, ಷೆಗುರ್ತಿ |
| ಇತರ ಭಾಷೆಯ ಹೆಸರುಗಳು | ಹಿಂ - ಕೋಧಬ್<br>ತಂ. - ವೆಲವಿ, ವಿಲುತ್ತು, ಮಂತಕ್-ಕೋರೂಂತೂ<br>ತೆ - ಅದಮೋರಿನಿಕ, ಚಕೋರಡಿ, ಚಿಮುರುಡು<br>ಇಂ - ಇಂಡಿಯನ್ ಕಡಬ |

**ಪರಿಚಯ**

ಮರಗಡೆ ಸಾಮಾನ್ಯವಾಗಿ ಕುರುಚಲು ಗಿಡಗಳನ್ನೊಳಗೊಂಡ ಹಾಗೂ ಬೇಸಿಗೆಯಲ್ಲಿ ಎಲೆಯುದುರುವ ಮೈದಾನ ಸೀಮೆಯ ಒಣ ಸಸ್ಯಾವರಣಗಳಲ್ಲಿ ಕಂಡುಬರುತ್ತದೆ ಇದು ಪೊದೆಯಂತೆ ಬೆಳೆಯುತ್ತದೆ ಸರಳವಾದ ಅಂಡಾಕಾರದ ಎಲೆಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ ಎಲೆಯ ಅಂಚು ನಯವಾಗಿರುತ್ತದೆ ಎಲೆಯ ಮೇಲ್ಭಾಗ ಹೊಳಪಾಗಿರುತ್ತದೆ ಮತ್ತು ಕೆಳಭಾಗದಲ್ಲಿ ತುಪ್ಪಳವಿರುತ್ತದೆ ಹೂಗಳು ಅಂತ್ಯಾರಂಭಿ ಪುಷ್ಪಮಂಜರಿಯಲ್ಲಿರುತ್ತವೆ ಹೂವಿನಲ್ಲಿ 4 ಪುಷ್ಪಪತ್ರಕಗಳು ಮತ್ತುಅಷ್ಟೇ ಪುಷ್ಪದಳಗಳಿರುತ್ತವೆ ಕೇಸರಗಳು, ಎತ್ತರವಾದ ಅಂಡಾಶಯದ ತೊಟ್ಟಿನ ಮೇಲಿರುತ್ತವೆ. ನಳಿಕೆಯಂತಹ ಕಾಯಿಯಲ್ಲಿ ಕಿತ್ತಳೆ ಬಣ್ಣದ ತಿರುಳಿರುತ್ತದೆ ಅದರಲ್ಲಿ ಬೀಜಗಳು ಹುದಗಿರುತ್ತವೆ

## ಉಪಯೋಗಗಳು

1 ಮರಗಡೆಸೊಪ್ಪನ್ನು ಅಕ್ಕಿತೊಳೆದ ನೀರಿನೊಡನೆ ಅರೆದು ಶೋಧಿಸಿಕೊಂಡು ದೇಹ ಪ್ರಕೃತಿಯನ್ನಾದರಿಸಿ ಪ್ರಮಾಣ ನಿರ್ಧರಿಸಿಕೊಂಡು ಕುಡಿಯಬೇಕು ಜೊತೆಗೆ ನೆನೆಸಿಟ್ಟ ಬೆಣತಕ್ಕಿ ಒಂದು ಹಿಡಿಯುಷ್ಟನ್ನು ಪ್ರತಿದಿವಸ ದಿವಸಕ್ಕೊಮ್ಮೆಯಂತೆ ಮೂರು ದಿವಸ ಸೇವಿಸಲು ಬಿಳಿಸೆರಗು ರೋಗವು ವಾಸಿಯಾಗುತ್ತದೆ.

2 ಎಲೆಯ ಮತ್ತು ಬೇರಿನ ಚೂರ್ಣ ಅಥವಾ ಕಷಾಯ ಸೇವಿಸುವುದರಿಂದ ಜಂತುಹುಳುಗಳು ನಾಶವಾಗುತ್ತವೆ.

# ಮುತ್ತುಗ

| | |
|---|---|
| ವೈಜ್ಞಾನಿಕ ಹೆಸರು | ಬ್ಯುಟಿಯ ಮಾನೊಸ್ಪರ್ಮ<br>[Butea monosperma (Lam ) Taub ]<br>=ಬ್ಯು ಫ್ರಾಂಡೋಸ<br>[=B frondosa Roxb ] |
| ಸಸ್ಯದ ಕುಟುಂಬ | ಫ್ಯಾಬೇಸಿ {Fabaceae] |
| ಕನ್ನಡದ ಇತರ ಹೆಸರುಗಳು | ಪಲಸ, ಬ್ರಹ್ಮವೃಕ್ಷ, ಮುತ್ತಲಮರ, ಮುತ್ತಗಲ, ಮೊಟ್ಟುಗ |
| ಇತರ ಭಾಷೆಯ ಹೆಸರುಗಳು | ಸಂ - ಪಲಾಶ, ಕಿಂಶುಕ, ಪರ್ಣ, ವಾತಪೋಥ<br>ಹಿಂ - ಪಲಾಸ್, ಧತ್, ತೇಸು<br>ತ - ಪರಾಸ,<br>ತೆ - ಪಲಸಮೂಲ, ಮೋದುಗ<br>ಇಂ - ಫ್ಲೇಮ್ ಆಫ್ ದಿ ಫಾರೆಸ್ಟ್, ಬಾಸ್ಟರ್ಡ್ ಟೀಕ್, ಬೆಂಗಾಲ್ಕಿನೊ, ಬೂಟಿಯ ಗಂ |

**ಪರಿಚಯ**

ಈ ಮರವು ಸಾಹಿತಿಗಳ, ವೈದ್ಯರ ಗಮನ ಸೆಳೆಯುವಲ್ಲಿ ಯಶಸ್ವಿಯಾಗಿದೆ ಸಾಹಿತಿಯೊಬ್ಬರು ಮುತ್ತುಗದ ಹೂವನ್ನು "ವನದೇವತೆಯು ಹಿಡಿದಿರುವ ಸೊಡರುಗಳೋ" ಎಂದು ಬಣ್ಣಿಸಿದರೆ ಮಗದೊಬ್ಬರು "ನಿರ್ಗಂಧ ಕುಸುಮ" ಎಂದು ಕರೆದಿದ್ದಾರೆ ಈ ಮರವು ಫೆಬ್ರವರಿ-ಮಾರ್ಚ್ ತಿಂಗಳಿನಲ್ಲಿ ಪುಷ್ಪಭರಿತವಾದಾಗ ಬಹುದೂರದಿಂದಲೇ ತನ್ನ ಇರುವನ್ನು ತೋರುತ್ತದೆ ಕೆಂಪು ಹೂಗಳಿಂದ ಕೂಡಿದ ಮರವನ್ನು ದೂರದಿಂದ ನೋಡಿದರೆ ಇಡೀ ಮರವೇ



ಚಿತ್ರ 85 : ಮುತ್ತುಗ – ಹೂಗಳಿಂದ ತುಂಬಿರುವ ಮರ, ಒಳಚಿತ್ರ ಸಂಯುಕ್ತ ಪತ್ರ ಮತ್ತು ಹೂಗಳು

ಹತ್ತಿಕೊಂಡು ಉರಿಯುತ್ತಿದೆಯೇನೋ ಎಂಬ ಭ್ರಮೆಯುಂಟಾಗುತ್ತದೆ ಇದರಿಂದಲೇ ಆಂಗ್ಲರು ಈ ಮರವನ್ನು 'ಫ್ಲೇಮ್ ಆಫ್ ದಿ ಫಾರೆಸ್ಟ್' ಎಂದು ಕರೆದರೆಂದು ತೋರುತ್ತದೆ

ಮುತ್ತುಗದ ಮರವು ಬೇಸಿಗೆಯಲ್ಲಿ ಎಲೆಯುದುರುವ ಮಲೆನಾಡಿನ ಮತ್ತು ಮೈದಾನ ಸೀಮೆಯ ಹಾಗೂ ಕಳ್ಳಿಕುರುಚಲು ಗಿಡಗಳನ್ನೊಳಗೊಂಡ ಸಸ್ಯಾವರಣಗಳಲ್ಲಿ ಕಂಡುಬರುತ್ತದೆ ಈ ಮರವು ಸಾಮಾನ್ಯವಾಗಿ 30-40 ಅಡಿ ಎತ್ತರ ಬೆಳೆಯುತ್ತದೆ ಮರದ ಕೊಂಬೆಗಳು ವಕ್ರವಕ್ರವಾಗಿರುತ್ತವೆ ಮರದ ತೊಗಟೆ ಬೂದು ಬಣ್ಣಕ್ಕಿರುತ್ತದೆ ಸಂಯುಕ್ತ ಎಲೆಯಲ್ಲಿ 3 ಕಿರು ಪತ್ರಗಳಿರುತ್ತವೆ ಎಲೆ ತೊಟ್ಟು 4-6 ಸೆ ಮೀ ಉದ್ದವಿರುತ್ತದೆ ಕೆಂಪು ಹೂಗಳು ಗುಂಪಾಗಿ ಬಿಡುತ್ತವೆ ಹಳದಿ ಹೂಗಳನ್ನು ಬಿಡುವ ಮುತ್ತುಗದ ಮರಗಳು ಅಪರೂಪ ಅಂತಹ ಕೆಲವು ಮರಗಳನ್ನು ಬೆಂಗಳೂರಿನ ಲಾಲ್‌ಬಾಗ್ ಸಸ್ಯೋದ್ಯಾನದಲ್ಲಿ ಕಾಣಬಹುದು ಕಾಯಿಯಲ್ಲಿ ಒಂದೇ ಒಂದು ಚಪ್ಪಟೆಯಾದ ಬೀಜವಿರುತ್ತದೆ

## ಉಪಯೋಗಗಳು

1 ಮುತ್ತುಗದ ಬೇರನ್ನು ಕುಟ್ಟಿ ಪುಡಿಮಾಡಿ ಬಟ್ಟೆಯಲ್ಲಿ ಶೋಧಿಸಿ ನಸ್ಯವೇರಿಸುವುದರಿಂದ ಅಪಸ್ಮಾರ ರೋಗವು ಪರಿಹಾರವಾಗುತ್ತದೆ ರೋಗ ಬಂದಾಗ ಈ ಚಿಕಿತ್ಸೆಯನ್ನು 1-2 ತಿಂಗಳು ನಡೆಸಬೇಕು

2 ಮುತ್ತುಗದ ತೊಗಟೆ 3 ತೊಲ ತೆಗೆದುಕೊಂಡು ಚೆನ್ನಾಗಿ ಕುಟ್ಟಿ ಒಂದು ಸೇರು ನೀರಿಗೆ ಹಾಕಿ ಕಷಾಯಕ್ಕಿಟ್ಟು ಬತ್ತಿಸಿ ಅರ್ಧ ಪಾವಿಗಿಳಿಸಿ ಸೋಸಿಕೊಂಡು ಅದಕ್ಕೆ 6 ತೊಲ ತೆಂಗಿನಹಾಲು (ಬಲಿತ ತೆಂಗಿನಕಾಯಿಯನ್ನು ಚೆನ್ನಾಗಿ ರುಬ್ಬಿ ಬಟ್ಟೆಯಲ್ಲಿ ಗಂಟು ಕಟ್ಟಿ ಹಿಂಡಿ ತೆಗೆದ ರಸ) ಸೇರಿಸಿ ನಿತ್ಯ ಬೆಳಗ್ಗೆ ಕುಡಿಯುವುದರಿಂದ ಉದರಶೂಲೆ ನಿವಾರಣೆಯಾಗುತ್ತದೆ ಒಂದು ವಾರ ಉಪಯೋಗಿಸಬೇಕು

3 ಮುತ್ತುಗದ ಅಂಟು (ಬಂಕೆ) 5 ಗುಂಜಿತೂಕ, ದಾಲ್ಚಿನ್ನಿ $^1/_4$ ತೊಲ, ಜಾಕಾಯಿ $^1/_4$ ತೊಲ ಇವುಗಳನ್ನು ಚೂರ್ಣಿಸಿ ಗಸಗಸೆ ಬೀಜದ ಕಷಾಯದೊಡನೆ

ದಿವಸಕ್ಕೆ 3 ಬಾರಿಯಂತೆ 2-3 ದಿವಸ ಸೇವಿಸುವುದರಿಂದ ಅತಿಸಾರ ನಿವಾರಣೆಯಾಗುತ್ತದೆ.

4 ಮುತ್ತುಗ ಮರದ ಅಂಟನ್ನು ಚೇಳು ಕಚ್ಚಿದ ಜಾಗದ ಮೇಲೆ ಹಚ್ಚುವುದರಿಂದ ಉರಿ ಕಡಿಮೆಯಾಗುತ್ತದೆ

5 ಎರಡುವರೆ ತೊಲದಷ್ಟು ಮುತ್ತುಗದ ಎಲೆಯನ್ನು ಒಂದು ಸೇರು ನೀರಿಗೆ ಹಾಕಿ ಕಾಯಿಸಿ ಅರೆಪಾವಿಗೆ ಇಂಗಿಸಿ ಶೋಧಿಸಿಟ್ಟು ಕೊಂಡು ಮೂರು ದಿವಸ ಬೆಳಗ್ಗೆ ಹೊತ್ತು ಮಾತ್ರಕುಡಿಸುವುದರಿಂದ ಜಂತುಹುಳುಗಳು ಬೀಳುತ್ತವೆ ಹುಳುಗಳು ಬೀಳದಿದ್ದಲ್ಲಿ ನಾಲ್ಕನೆಯ ದಿವಸ ಶುದ್ಧ ಹರಳೆಣ್ಣೆಯನ್ನು ಕುಡಿಸಿ ಭೇದಿ ಮಾಡಿಸುವುದರ ಮೂಲಕ ಹುಳುಗಳು ಬೀಳುತ್ತವೆ

6 ಮುತ್ತುಗದ ಬೇರನ್ನು ಸುಟ್ಟು ಬೂದಿ ಮಾಡಿಟ್ಟುಕೊಂಡು ನಾಲ್ಕಾಣೆ ತೂಕದಷ್ಟು ಬೂದಿಯನ್ನು ದಿವಸಕ್ಕೊಮ್ಮೆ ಮೂರು ದಿವಸ ತಣ್ಣೀರಿನೊಡನೆ ಕುಡಿಸಿ, ನಾಲ್ಕನೆಯ ದಿವಸ ಹರಳೆಣ್ಣೆ ಕುಡಿಸಿ ಭೇದಿ ಮಾಡಿಸುವುದರಿಂದ ಜಂತುಹುಳುಗಳು ಬೀಳುತ್ತವೆ.

7 ಮುತ್ತುಗದ ಹೂವು ಒಂದು ತೊಲದಷ್ಟನ್ನು ಒಂದು ಹೊಸ ಮಣ್ಣಿನ ಮುಚ್ಚಳದಲ್ಲಿ ಹಾಕಿ ಅದರಲ್ಲಿ ಒಂದು ಲೋಟ ತಣ್ಣೀರು ಹಾಕಿ ಹಿಸುಕಿ ರಾತ್ರಿ ಹೊರಗೆ ಇಬ್ಬನಿಯಲ್ಲಿ ಇಟ್ಟಿದ್ದು ಬೆಳಗ್ಗೆ ಪುನಃ ಅದನ್ನು ಚೆನ್ನಾಗಿ ಹಿಸುಕಿ ಸೋಸಿ ಅದಕ್ಕೆ 1 ತೊಲ ಕಲ್ಲುಸಕ್ಕರೆ ಸೇರಿಸಿ ನಿತ್ಯ ಬೆಳಗ್ಗೆ ಮಾತ್ರ 2-3 ವಾರ ಕುಡಿಯುವುದರಿಂದ ಪಾಂಡುರೋಗ ನಿವಾರಣೆಯಾಗುತ್ತದೆ

8 ಮುತ್ತುಗದ ಹೂವು 2 ತೊಲ ತೆಗೆದುಕೊಂಡು ಒಂದು ಸೇರು ನೀರಿಗೆ ಹಾಕಿ ಕಾಯಿಸಿ, ಬತ್ತಿಸಿ ಅರ್ಧ ಸೇರಿಗೆ ಇಳಿಸಿ, ಅದಕ್ಕೆ ಸ್ವಲ್ಪ ಹಾಲುಸಕ್ಕರೆ ಹಾಕಿ ಕೊಡಬೇಕು ಇದರಿಂದ ಬಂದಾದ ಮೂತ್ರ ಸಲೀಸಾಗಿ ಹೊರಬರುತ್ತದೆ. ಔಷಧವನ್ನು ದಿವಸಕ್ಕೆ ಎರಡು ಸಾರಿ ಕೊಟ್ಟರೂ ತೊಂದರೆಯಿಲ್ಲ. ಇದೇ ರೀತಿ ಬೇರಿನ ಕಷಾಯದಿಂದಲೂ ಔಷಧ ಮಾಡಿಕೊಳ್ಳಬಹುದು.

9 ಮುತ್ತುಗದ ಬೀಜವನ್ನು ನಿಂಬೆಯ ರಸದಲ್ಲಿ ತೇಯ್ದು ಚಿಕ್ಕ ಮಕ್ಕಳ ಇಸುಬಿಗೆ ಹೊರಲೇಪನವಾಗಿ ಬಳಸುತ್ತಾರೆ.

10 ಮುತ್ತುಗದ ಬೀಜದ ತೈಲಕ್ಕೆ ತುಪ್ಪ ಸೇರಿಸಿ ಸೇವಿಸಿದರೆ ದೃಷ್ಟಿಮಾಂದ್ಯ ಗುಣವಾಗುತ್ತದೆ

11 ಮುತ್ತುಗದ ಬೀಜದ ಚೂರ್ಣಕ್ಕೆ ಬೆಟ್ಟನೆಲ್ಲಿಯ ರಸ ಸೇರಿಸಿ ಸೇವಿಸುವುದರಿಂದ ಮಂದ ದೃಷ್ಟಿ ಗುಣವಾಗುತ್ತದೆ.

12 ಶುದ್ಧಿ ಮಾಡಿದ ಮುತ್ತುಗದ ಬೀಜ $1/_2$ ತೊಲ, ಸೈಂಧಲವಣ 1 ತೊಲ, ಶುದ್ಧಿಗೊಳಿಸಿದ ಇಂಗು $1/_4$ ತೊಲ ಇವುಗಳೆಲ್ಲವನ್ನು ಕುಟ್ಟಿ ವಸ್ತ್ರಗಾಳಿತ ಚೂರ್ಣಮಾಡಿ ಹೊತ್ತಿಗೆ $1/_4$ತೊಲದಂತೆ ಉತ್ತರಾಣಿ ಸೊಪ್ಪಿನ ರಸದೊಡನೆ ಪ್ರತಿ ದಿವಸ ಬೆಳಗ್ಗೆ ಒಂದು ವಾರ ಸೇವಿಸುವುದರಿಂದ ಉದರಶೂಲೆ ನಿವಾರಣೆಯಾಗುತ್ತದೆ.

## ಪಶುರೋಗ ಚಿಕಿತ್ಸೆಯಲ್ಲಿ

1 ಮುತ್ತುಗದ ಚಕ್ಕೆ, ಆಡುಮುಟ್ಟದ ಬಳ್ಳಿ, ತುಂಬೆಸೊಪ್ಪು, ಇವುಗಳನ್ನು ನೀರಿನಲ್ಲಿ ಅರೆದು ಹಾವು ಕಡಿದಾಗ ಕುಡಿಸಿ ಉಳಿದ ರಸವನ್ನು ಮೈಗೆಲ್ಲಾ ಲೇಪಿಸುವುದರಿಂದ ಹಾವಿನ ವಿಷ ಪರಿಹಾರವಾಗುತ್ತದೆ

2 ಮುತ್ತುಗದ ಚಕ್ಕೆ, ಈಶ್ವರಿಬೇರು, ಬೂದುಗಾರೆ ಚಕ್ಕೆ (ಮಗ್ಗಾರೆ), ನಾಟಿ ಚಪ್ಪರ ಬದನೆಸೊಪ್ಪು ಇವೆಲ್ಲವನ್ನೂ ಹಸುವಿನ ಮಜ್ಜಿಗೆಯೊಡನೆ ಅರೆದು ಹೊತ್ತಿಗೆ 1 ಗೊಟ್ಟ (ದನಕರುಗಳಿಗೆ ಔಷಧಿ ಮುಂತಾದವುಗಳನ್ನು ಕುಡಿಸುವ ಬಿದಿರಿನ ಕೊಳವೆ) ಕುಡಿಸಿ, ಇದೇ ರಸವನ್ನು ಮೈಗೆ ಲೇಪಿಸಿ ಒಣಗಿದ ನಂತರ ಬಿಸಿ ನೀರಿನಿಂದ ತೊಳೆಯಬೇಕು. 2-3 ದಿವಸ ಈ ಚಿಕಿತ್ಸೆ ಮಾಡುವುದರಿಂದ ಸೂನಂಗಿ ರೋಗ ವಾಸಿಯಾಗುತ್ತದೆ





ಚಿತ್ರ 86 ಮುಳ್ಳುಮುತ್ತುಗ - ಪುಷ್ಪಮಂಜರಿ ಇರುವ ರೆಂಬೆ

# ಮುಳ್ಳುಮುತ್ತುಗ

| | |
|---|---|
| ವೈಜ್ಞಾನಿಕ ಹೆಸರು | ಎರಿತ್ರೈನ ಸುಬಿರೋಸ<br>[Erythrına suberosa Roxb ] |
| ಸಸ್ಯದ ಕುಟುಂಬ | ಫ್ಯಾಬೇಸಿ [Fabaceae] |
| ಕನ್ನಡದ ಇತರ ಹೆಸರುಗಳು | ಕಾಡುಪಾರಿವಾಳ, ಮುಳ್ಳುಪಾರಿವಾಳ, ಮುಳ್ಳು ಹೊಂಗರ |
| ಇತರ ಭಾಷೆಯ ಹೆಸರುಗಳು | ಹಿಂ - ಪಂಗ್ರ, ದೌಲ್ ಧಕ್, ಮದಾರ<br>ತ - ಮುಳ್ಳುಮುರುಕ್ಕು, ಮುನಿ, ಮದುಗ<br>ತೆ - ಬಾರಿಜಮ |

**ಪರಿಚಯ**

ಸಾಧಾರಣ ಎತ್ತರಕ್ಕೆ ಬೆಳೆಯುವ ಈ ಮರವು ಬೇಸಿಗೆಯಲ್ಲಿ ಎಲೆಯುದುರುವ ಮೈದಾನ ಸೀಮೆಯ ಮತ್ತು ಕಳ್ಳಿ ಕುರುಚಲು ಗಿಡಗಳನ್ನೊಳಗೊಂಡ ಸಸ್ಯಾವರಣವಿರುವ ಕಡೆ ಮಾತ್ರ ಕಂಡು ಬರುತ್ತದೆ. ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆಯ ಕೆಲವು ತಾಲ್ಲೂಕುಗಳಲ್ಲಿ ಅಲ್ಲಲ್ಲಿ ಕೆಲವು ಮರಗಳನ್ನು ನೋಡಬಹುದು. ಜನವರಿ ಫೆಬ್ರವರಿ ತಿಂಗಳಿನಲ್ಲಿ ಮರದ ಎಲೆಗಳೆಲ್ಲ ಉದುರಿಹೋದ ಮೇಲೆ ಇಟ್ಟಿಗೆ ಕೆಂಪು ಬಣ್ಣದ ಹೂಗಳಿಂದ ತುಂಬಿ ಮರ ನೋಡಲು ಆಕರ್ಷಕವಾಗಿ ಕಾಣುತ್ತದೆ ಮರದ ತುಂಬಾ ಸಣ್ಣ ಸಣ್ಣ ಮುಳ್ಳುಗಳಿರುತ್ತವೆ ಸಂಯುಕ್ತ ಎಲೆಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತದೆ ಒಂದು ಸಂಯುಕ್ತ ಎಲೆಯಲ್ಲಿ 3 ಕಿರುಪತ್ರಗಳಿರುತ್ತವೆ ಕಿರುಪತ್ರಗಳು ಮಂದವಾಗಿದ್ದು ಮುತ್ತುಗದ ಎಲೆಯನ್ನು ಹೋಲುತ್ತವೆ ಹೂವಿನ ಪುಷ್ಪಪಾತ್ರಾಪತ್ರಕದ ಕೊಳವೆ ಎರಡು ಭಾಗವಾಗಿ ಸೀಳಿರುತ್ತದೆ.

## ಉಪಯೋಗಗಳು

1 ಹಸಿ ಎಲೆಗಳನ್ನು ಎಳನೀರಿನಲ್ಲಿ ಬೇಯಿಸಿ ಕೆಲವು ಎಲೆಗಳನ್ನು ತಿನ್ನಿಸಿ ಉಳಿದವುಗಳನ್ನು ಅರೆದು ಮೊಲೆಗಳ ಮೇಲೆ ಪಟ್ಟು ಹಾಕುವುದರಿಂದ ಎದೆ ಹಾಲಿಲ್ಲದ ತಾಯಂದಿರಲ್ಲಿ ಎದೆಹಾಲು ಹೆಚ್ಚಾಗಿ ಉತ್ಪತ್ತಿಯಾಗುತ್ತದೆ

2 ಎಲೆಯನ್ನು ಅರೆದು ಕೀಡೆ (ಹುಳು)ಗಳಿರುವ ಗಾಯಗಳಿಗೆ ಲೇಪಿಸುವುದರಿಂದ ಕೀಡೆಗಳು ಸತ್ತು ಗಾಯ ಬೇಗ ವಾಸಿಯಾಗುತ್ತದೆ

3 ಎಲೆಯುನ್ನು ಅರೆದು ಒಸಡಿಗೆ ಹಚ್ಚುವುದರಿಂದ ಹಲ್ಲುನೋವು ನಿವಾರಣೆಯಾಗುತ್ತದೆ.

4 ಎಲೆಯನ್ನು ಹೆಂಚಿನ ಮೇಲೆ ಬಾಡಿಸಿ ಬಿಸಿಯಾಗಿರುವಾಗಲೇ ವಾಯು ನೋವಿರುವ ಕಡೆ ಕಾವುಟ ಕೊಡುವುದರಿಂದ ನೋವು ಕಡಿಮೆಯಾಗುತ್ತದೆ

5 ಮರದ ತೊಗಟೆಯ ಕಷಾಯದಿಂದ ಕಣ್ಣು ತೊಳೆಯುವುದರಿಂದ ಕಣ್ಣಿನ ರೋಗಗಳು ವಾಸಿಯಾಗುತ್ತವೆ

6 ಎಲೆಯ ರಸ 2 ಔನ್ಸ್ ಪ್ರಮಾಣಕ್ಕೆ ಜೇನುತುಪ್ಪ ಸೇರಿಸಿ ಸೇವಿಸುವುದರಿಂದ ಜಂತುಹುಳುಗಳು ನಾಶವಾಗುತ್ತವೆ.

7 ಎಲೆಯ ರಸಕ್ಕೆ ಸ್ವಲ್ಪ ಹರಳೆಣ್ಣೆ ಸೇರಿಸಿ ಕುಡಿಸುವುದರಿಂದ ಅತಿಯಾದ ಭೇದಿ ಮತ್ತು ಬಹುದಿನದಿಂದ ಕಾಡುವ ಭೇದಿ ನಿಲ್ಲುತ್ತದೆ



# ಮುಳ್ಳು ಹರಿವೆಸೊಪ್ಪು

| | |
|---|---|
| ವೈಜ್ಞಾನಿಕ ಹೆಸರು | ಅಮರಾಂಥಸ್ ಸ್ಪೈನೋಸಸ್ [Amaranthus spinosus L ] |
| ಸಸ್ಯದ ಕುಟುಂಬ | ಅಮರಾಂಥೇಸಿ [Amaranthaceae] |
| ಕನ್ನಡದ ಇತರ ಹೆಸರುಗಳು | ಮುಳ್ಳು ಅರಿವೆ, ಮುಳ್ಳು ಕೀರೆಸೊಪ್ಪು, ಮುಳ್ಳು ಗೊಕೂಚ |
| ಇತರ ಭಾಷೆಯ ಹೆಸರುಗಳು | ಸಂ - ತಂಡುಲೀಯ |
| | ಹಿಂ. - ಕಟ್ಟೈಲಿಚುಲ್ಲೈ |
| | ತ. - ಮುಳ್ಳುಕಕ್ಕೀರೈ |
| | ತೆ. - ಮುಳ್ಳುತೊಡಕರು |
| | ಇಂ - ಪ್ರಿಕ್ಲಿ ಅಮರಾಂತ್, ಥಾರ್ನಿ ಅಮರಾಂತ್ |

**ಪರಿಚಯ**

ಈ ಮೂಲಿಕೆಯು ಬೀಳು ಭೂಮಿಯಲ್ಲಿ ಮತ್ತು ತೇವಾಂಶವಿರುವ ಹೊಲ, ಗದ್ದೆ, ತೋಟಗಳ ಬದುಗಳಲ್ಲಿ ಕಳೆಯಾಗಿ ಬೆಳೆಯುತ್ತದೆ. ಇದು ಒಂದು ಏಕಋತು ಮೂಲಿಕೆ ಈ ಮೂಲಿಕೆಯು ನೇರವಾಗಿ ಬೆಳೆಯುತ್ತದೆ. ಕಾಂಡವು ಬಹಳವಾಗಿ ಕವಲೊಡೆದಿರುತ್ತದೆ ಎಲೆ ಮತ್ತು ಕಾಂಡವು ಸಾಧಾರಣವಾಗಿ ಹಸಿರಾಗಿರುತ್ತದೆ. ಕೆಲವೊಮ್ಮೆ ನಸುಗೆಂಪು ವರ್ಣದ್ದಾಗಿರುತ್ತದೆ ಎಲೆಯ ಕಂಕುಳಲ್ಲಿ ಮತ್ತು ಹೂ ಗೊಂಚಲಿನಲ್ಲಿ ಮುಳ್ಳುಗಳಿರುತ್ತವೆ ಈ ಮೂಲಿಕೆಯ ಬೆಳವಣಿಗೆ ಜೂನ್-ನವೆಂಬರ್ ತಿಂಗಳಿನಲ್ಲಿ ಉತ್ತುಂಗ ಸ್ಥಿತಿಯಲ್ಲಿರುತ್ತದೆ

ಈ ಮೂಲಿಕೆಯನ್ನು ಸೊಪ್ಪು ತರಕಾರಿಯಾಗಿ ಕೆಲವು ಕಡೆ ಉಪಯೋಗಿಸುತ್ತಾರೆ.

## ಉಪಯೋಗಗಳು

1. ಬೇರಿನ ಕಷಾಯವನ್ನು 1-2 ಔನ್ಸ್ ಪ್ರಮಾಣದಲ್ಲಿ ಸೇವಿಸುವುದರಿಂದ ಗೊನ್ನೊರಿಯ ಶಮನವಾಗುತ್ತದೆ
2. ಬೇರಿನ ಚೂರ್ಣ ಅಥವಾ ಕಷಾಯ ಸೇವನೆಯಿಂದ ಹೊಟ್ಟೆನೋವು ಗುಣವಾಗುತ್ತದೆ
3. ಸೊಪ್ಪಿನ ಪಲ್ಯ ಮಾಡಿ ಪ್ರತಿ ದಿವಸ ಸೇವಿಸುವುದರಿಂದ ಮಲಬದ್ಧತೆ ಮೂತ್ರಬಂಧನ ನಿವಾರಣೆಯಾಗುತ್ತದೆ
4. ಸಮೂಲದ ಕಷಾಯವನ್ನು ಕುಡಿಸುವುದರಿಂದ ಹಾವಿನ, ಚೇಳಿನ ವಿಷ ಪರಿಹಾರವಾಗುತ್ತದೆ.
5. ಸೊಪ್ಪಿನ ರಸ ಅಥವಾ ಸೊಪ್ಪಿನ ಪಲ್ಯ ಸೇವನೆಯಿಂದ ಅತಿಯಾದ ಮುಟ್ಟಿನ ಸ್ರಾವ ನಿಲ್ಲುತ್ತದೆ
6. ಎಲೆಯನ್ನು ಅರೆದು ಊತ ಬಂದಿರುವ ಜಾಗದ ಮೇಲೆ ಪಟ್ಟು ಕಟ್ಟುವುದರಿಂದ ಊತ ಕಡಿಮೆಯಾಗುತ್ತದೆ.





ಚಿತ್ರ 88 ಮೂಡುಗಟ್ಟಿನ ಗಿಡ

# ಮೂಡುಗಟ್ಟಿನ ಗಿಡ

| | |
|---|---|
| ವೈಜ್ಞಾನಿಕ ಹೆಸರು | ಸ್ಫಿರಾಂಥಸ್ ಇಂಡಿಕಸ್ [Sphaeranthus indicus L ] |
| ಸಸ್ಯದ ಕುಟುಂಬ | ಆಸ್ಟಿರೇಸಿ [Asteraceae] |
| ಕನ್ನಡದ ಇತರ ಹೆಸರುಗಳು | ಕರಂಡ, ಬೋಡುಕಡಲೆ, ಮುಂಡಿಕನ |
| ಇತರ ಭಾಷೆಯ ಹೆಸರುಗಳು | ಸಂ - ಮುಂಡರಿಕ, ಮುಂಡಿ, ಬಿಕ್ಷುಗವರಿವ್ರಾಜ್<br>ಹಿಂ - ಮುಂಡಿ, ಗೋರಕ್ ಮುಂಡಿ<br>ತ - ಕೊಟ್ಟಕ್ಕಾರಂಡೈ, ವಿಷ್ಣುಕರಂಡೈ<br>ತೆ - ಬೊಡಸವಮು, ಬೊಡಸೊರಂ, ಬೋಡತರವು ಚೆಟ್ಟು<br>ಇಂ - ಇಂಡಿಯನ್ ಸ್ಫೀರಾಂತಸ್, ಈಸ್ಟ್-ಇಂಡಿಯನ್-ಗ್ಲೋಬ್-ತಿಸಲಾ |

**ಪರಿಚಯ**

ಈ ಮೂಲಿಕೆಯು ಬತ್ತ ಕೊಯ್ಲಾದ ಮೇಲೆ ಗದ್ದೆಯಲ್ಲಿ ಕಳೆಯಾಗಿ ಬೆಳೆಯುತ್ತದೆ ಇದು ಕೆರೆಯಂಗಳದಲ್ಲಿ, ಕಾಲುವೆಯಂಚಿನಲಿ ಮತ್ತು ಒದ್ದೆ ಭೂಮಿಯಲ್ಲಿ ಹುಲುಸಾಗಿ ಬೆಳೆಯುತ್ತದೆ. ಮೂಲಿಕೆಯು ಮೇಲೆ ಗ್ರಂಥಿ ರೋಮಗಳಿರುವುದರಿಂದ ಮುಟ್ಟಲು ಅಂಟು ಅಂಟಾಗಿರುತ್ತದೆ ಜೊತೆಗೆ ವಾಸನೆಯೂ ಇರುತ್ತದೆ ಕಾಂಡವು ಹರಡಿಕೊಂಡು ಬೆಳೆಯುತ್ತದೆ. ಚಿಕ್ಕ ತೊಟ್ಟಿನ ಎಲೆಗಳು ಅಂಡಾಕಾರವಾಗಿರುತ್ತವೆ ಮತ್ತು ಕಾಂಡದ ಮೇಲೆ ಪರ್ಯಾಯವಾಗಿ ಜೋಡಣೆಯಾಗಿರುತ್ತವೆ. ಎಲೆಗಳ ಅಂಚು ಹಲ್ಲಿನಂತೆ ಇಲ್ಲವೆ ಗರಗಸದ ಹಲ್ಲಿನಂತಿರುತ್ತದೆ ಎಲೆಯ ಕಂಕುಳಲ್ಲಿ ಅಥವಾ ಅಭಿಮುಖವಾಗಿ ಹೂವಿನ ಚಂಡಿರುತ್ತದೆ ಹೂವಿನ ಚಂಡಿನಲ್ಲಿ ನೀಲಿ ಮಿಶ್ರಿತ ಕೆಂಪು ಹೂಗಳಿರುತ್ತವೆ

## ಉಪಯೋಗಗಳು

1. ಬೇರಿನ ತೊಗಟೆಯನ್ನು ಅರೆದು ಮಜ್ಜಿಗೆಯೊಡನೆ ಕುಡಿಸುವುದರಿಂದ ರಕ್ತ ಮೂಲವ್ಯಾಧಿ ಗುಣವಾಗುತ್ತದೆ ಇದೇ ಗಂಧವನ್ನು ಮೂಲವ್ಯಾಧಿಯ ಮೊಳಕೆಗಳ ಮೇಲೆ ಹೊರಲೇಪನವಾಗಿ ಸಹ ಉಪಯೋಗಿಸಬಹುದು

2 ಬೇರನ್ನು ನೀರಿನೊಡನೆ ಚೆನ್ನಾಗಿ ಅರೆದು ರಸ ಹಿಂಡಿಕೊಳ್ಳಬೇಕು ಈ ರಸದ $^1/_2$ ಭಾಗದಷ್ಟು ಎಳ್ಳೆಣ್ಣೆ ಸೇರಿಸಿ ಕಾಯಿಸಿ ಎಣ್ಣೆ ಉಳಿಸಿಕೊಂಡು ಸಂಗ್ರಹಿಸಿಟ್ಟುಕೊಳ್ಳಬೇಕು 2 ಡ್ರಾಂ (10 ಮಿ ಲೀ ನಷ್ಟು) ಎಣ್ಣೆಯನ್ನು ಬರಿಹೊಟ್ಟೆಗೆ ಪ್ರತಿದಿವಸ ಬೆಳಗ್ಗೆ 41 ದಿವಸ ಸೇವಿಸುವುದರಿಂದ ಪುರಷತ್ವ ವೃದ್ಧಿಯಾಗುತ್ತದೆ

3 ಬೇರನ್ನು ಒಣಗಿಸಿ ಚೂರ್ಣ ಮಾಡಿಕೊಂಡು ದಿವಸಕ್ಕೆ ಸುಮಾರು 2-5ಗ್ರಾಂನಷ್ಟು ಸೇವಿಸುವುದರಿಂದ ಹೊಟ್ಟೆನೋವು ವಾಸಿಯಾಗುತ್ತದೆ ಹೊಟ್ಟೆಯಲ್ಲಿ ಜಂತುಹುಳುಗಳಿದ್ದರೆ ಬಿದ್ದುಹೋಗುತ್ತವೆ ಬೀಜವನ್ನು ಸೇವಿಸಿದರೂ ಇದೇ ಗುಣ ಕಂಡುಬರುತ್ತದೆ

4 ಪಾತಾಳಯಂತ್ರದ ಸಹಾಯದಿಂದ ಮೂಡುಗಟ್ಟಿನ ಬೇರಿನ ತೈಲವನ್ನು ತಯಾರಿಸಿಕೊಂಡು ಕೆಲವು ಕಾಲ ಸೇವಿಸುವುದರಿಂದ ಬಲವೀರ್ಯ ವೃದ್ದಿಯಾಗುತ್ತದೆ.

5 ಮೂಡುಗಟ್ಟಿನ ಗಿಡದ ಸಮೂಲದ ಚೂರ್ಣವನ್ನು ಜೇನುತುಪ್ಪ ಮತ್ತು ತುಪ್ಪದೊಡನೆ ಸೇವಿಸುವುದರಿಂದ ಅಂಗುಲಿವಾತ ಗುಣವಾಗುತ್ತದೆ.

6 ಮೂಡುಗಟ್ಟಿನ ಗಿಡದ ಸಮೂಲದ ಚೂರ್ಣವನ್ನು ಹಾಲಿನಲ್ಲಿ ಸೇವಿಸಿದರೆ ಮಂದದೃಷ್ಟಿ ನಿವಾರಣೆಯಾಗುತ್ತದೆ.

7 ಗಿಡದ ಸ್ವರಸ ಸೇವನೆಯಿಂದ ಕಾಮಾಲೆ, ಅಜೀರ್ಣ, ಹೊಟ್ಟೆನೋವು, ಪಿತ್ತಕೋಶ ಮತ್ತು ಮೇದೋಜೀರಕ ಗ್ರಂಥಿಗಳ ಊತ ಗುಣವಾಗುತ್ತದೆ

8 ಗಿಡದ ಸಮೂಲವನ್ನು ನೆರಳಿನಲ್ಲಿ ಒಣಗಿಸಿ ಚೂರ್ಣಮಾಡಿಟ್ಟುಕೊಂಡು

ಹಸುವಿನ ಹಾಲಿನೊಡನೆ ಸುಮಾರು 10ಗ್ರಾಂನಷ್ಟು ಸೇವಿಸುವುದರಿಂದ ಸರ್ವರೋಗಗಳು ಗುಣವಾಗುತ್ತವೆ.

9 ಎಲೆಗಳನ್ನು ನೆರಳಿನಲ್ಲಿ ಒಣಗಿಸಿ ಚೂರ್ಣಮಾಡಿ 20ಗ್ರಾಂನಷ್ಟು ಚೂರ್ಣವನ್ನು ದಿವಸಕ್ಕೆರೆಡು ಬಾರಿ ಸೇವಿಸುವುದರಿಂದ ಚರ್ಮದ ಕಾಯಿಲೆಗಳು ವಾಸಿಯಾಗುತ್ತವೆ ಜೊತೆಗೆ ನರಗಳಿಗೆ ಬಲವುಂಟಾಗುತ್ತದೆ

10 ಎಲೆಯ ರಸಕ್ಕೆ ಕರಿ ಮೆಣಸಿನಪುಡಿ ಸೇರಿಸಿ ಸೇವಿಸುವುದರಿಂದ ಸೂರ್ಯಾವರ್ತ ತಲೆನೋವು (Hemicrania - day time headache) ಮತ್ತು ಅಪಸ್ಮಾರ ಗುಣವಾಗುತ್ತದೆ

11 ಹೂವಿನ ಚೆಂಡನ್ನು ಸೇವಿಸುವುದರಿಂದ ರಕ್ತ ಶುದ್ಧಿಯಾಗುತ್ತದೆ ಮತ್ತು ಚರ್ಮವ್ಯಾಧಿಗಳು ದೂರವಾಗುತ್ತವೆ

## ಪಶುರೋಗ ಚಿಕಿತ್ಸೆಯಲ್ಲಿ

ಮೂಡುಗಟ್ಟಿನ ಗಿಡದ ಚಿಗುರೆಲೆಯನ್ನು ಹಿಂಡಿ ರಸ ತೆಗೆದು ಕಣ್ಣಿಗೆ ಹಾಕುವುದರಿಂದ ಕಣ್ಣಿನ ಪೂರೆ ನಾಶವಾಗುತ್ತದೆ





ಚಿತ್ರ 89 ಲಕ್ಕಿ

# ಲಕ್ಕಿ

| | |
|---|---|
| ವೈಜ್ಞಾನಿಕ ಹೆಸರು | ವೈಟೆಕ್ಸ್ ನೆಗುಂಡೊ [Vitex negundo L ] |
| ಸಸ್ಯದ ಕುಟುಂಬ | ವರ್ಬಿನೇಸಿ [Verbenaceae] |
| ಕನ್ನಡದ ಇತರ ಹೆಸರುಗಳು . | ಕರಿನೆಕ್ಕಿ, ನೆಕ್ಕಿಲಿ, ನೋಚಿ, ಬಿಳಿನೆಕ್ಕಿ |
| ಇತರ ಭಾಷೆಯ ಹೆಸರುಗಳು | ಸಂ. - ಇಂದ್ರಾಣಿ, ನಿರ್ಗುಂಡಿ, ನೀಲನಿರ್ಗುಂಡಿ, ಸಿಂಧುವಾರ |
| | ಹಿಂ - ನಿಸುಂಡ, ನಿಶಿಂಡ, ನಿರ್ಗುಂಡ |
| | ತ - ಕರುನೊಸಿ, ಚೆಂಡುವರಂ, ನೊಸಿ, ವೆನ್ನೊಸಿ |
| | ತೆ - ತೆಲ್ಲವವಿಲ್ಲೆ, ನಲ್ಲವವಿಲಿ, ಸಿಂಧುವರುಮ |
| | ಇಂ - ಫೈವ್ ಲೀವ್ಡ್ ಚಸೀಟ್ರೀ |

**ಪರಿಚಯ**

ಲಕ್ಕಿ, ಸಾಮಾನ್ಯವಾಗಿ ಬೀಳು ಭೂಮಿಯಲ್ಲಿ, ಊರ ಹೊರವಲಯದಲ್ಲಿ ಮತ್ತು ಹಾದಿ ಬದಿಯಲ್ಲಿ ಬೆಳೆಯುತ್ತದೆ. ಕೆಲವು ಕಡೆ ಬೇಲಿಗಿಡವಾಗಿಯೂ ಲಕ್ಕಿಯನ್ನು ಬೆಳೆಸುತ್ತಾರೆ.

ಲಕ್ಕಿ ಪೊದೆಯಂತೆ ಬೆಳೆಯುವ ಗಿಡವಾದರೂ ಫಲವತ್ತಾದ ಕಡೆ ಸಣ್ಣ ಮರದೋಪಾದಿಯಲ್ಲಿ ಬೆಳೆಯುತ್ತದೆ. ಮೂಲಿಕೆಯ ಮೂಲ ಕಾಂಡವು ಗಟ್ಟಿಯಾಗಿರುತ್ತದೆ. ಕಾಂಡದ ಮೇಲೆ ಕೊಂಬೆಗಳು ಸಾಮಾನ್ಯವಾಗಿ ಅಭಿಮುಖವಾಗಿ ಜೋಡಣೆಯಾಗಿರುತ್ತವೆ ಕಿರುರೆಂಬೆಗಳ ಕಾಂಡವು ಚೌಕಾಕಾರವಾಗಿರುತ್ತದೆ ಅದರ ಮೇಲೆ ಬಿಳಿ ಬಣ್ಣದ ಸೂಕ್ಷ್ಮ ತುಪ್ಪಳವಿರುತ್ತದೆ ಸಂಯುಕ್ತ ಎಲೆಗಳು ಕಾಂಡದ ಮೇಲೆ ಅಭಿಮುಖವಾಗಿ ಜೋಡಣೆಯಾಗಿರುತ್ತವೆ

ಒಂದು ಸಂಯುಕ್ತ ಎಲೆಯಲ್ಲಿ 3-5 ಕಿರುಪತ್ರಗಳಿರುತ್ತವೆ ನೀಲಿ ಮಿಶ್ರಿತ ನೇರಳೆ ಬಣ್ಣದ ಹೂಗಳು ಮಧ್ಯಾರಂಬಿ ಪುಷ್ಪಮಂಜರಿಯಲ್ಲಿರುತ್ತವೆ. ಹೂವಿನಲ್ಲಿ 4 ಕೇಸರಗಳಿರುತ್ತವೆ. ಅವು ಹೂವಿನ ದಳಕ್ಕೆ ಅಂಟಿಕೊಂಡಿರುತ್ತವೆ ಕೇಸರಗಳಲ್ಲಿ ಎರಡು ಉದ್ದವಾಗಿದ್ದು ಉಳಿದೆರೆಡು ಗಿಡ್ಡವಾಗಿರುತ್ತವೆ

ಲಕ್ಕಿಯಲ್ಲಿ 'ಕರಿಲಕ್ಕಿ' ಮತ್ತು 'ಬಿಳಿಲಕ್ಕಿ' ಎಂಬ ಎರಡು ಬಗೆಗಳನ್ನು ಗುರುತಿಸುತ್ತಾರೆ. ಕರಿಲಕ್ಕಿ ಗಿಡದ ಕಾಂಡ ಮತ್ತು ಎಲೆ ಹಸಿರು ಮಿಶ್ರಿತ ತ್ರಿಳಿ ನೇರಳೆಯಾಗಿರುತ್ತದೆ. 'ಬಿಳಿಲಕ್ಕಿ' ಗಿಡದ ಕಾಂಡ ಮತ್ತು ಎಲೆ ತಿಳಿ ಹಸಿರಾಗಿರುತ್ತದೆ ಔಷಧಿ ತಯಾರಿಕೆಗೆ ಕರಿಲಕ್ಕಿ ಗಿಡವೇ ಹೆಚ್ಚು ಪ್ರಶಸ್ತವಾದುದ್ದೆಂಬ ಅಭಿಪ್ರಾಯವಿದ್ದರೂ, ಬಳಕೆಯಲ್ಲಿ ಕರಿಲಕ್ಕಿ ಮತ್ತು ಬಿಳಿಲಕ್ಕಿ ಎರಡೂ ಬಗೆಯ ಗಿಡಗಳನ್ನು ಒಂದೇ ಎಂದು ಬಳಸಲಾಗುತ್ತಿದೆ

## ಉಪಯೋಗಗಳು

1 ಕರಿಲಕ್ಕಿಯ ಬೇರನ್ನು ಎಳನೀರಿನಲ್ಲಿ ತೇಯ್ದು ಗಂಧ ಮಾಡಿಕೊಂಡು ಹೊತ್ತಿಗೆ ಸುಮಾರು 1 ತೊಲದಷ್ಟು ಗಂಧವನ್ನು ಬೆಳಗ್ಗೆ ಮತ್ತು ರಾತ್ರಿ 2-3 ವಾರ ಸೇವಿಸುವುದರಿಂದ ಮಧುಮೇಹ ನಿವಾರಣೆಯಾಗುತ್ತದೆ

2 ಲಕ್ಕಿಯ ಬೇರನ್ನು ತಂದು ಒಣಗಿಸಿ ಚೂರ್ಣಮಾಡಿಟ್ಟುಕೊಂಡು ಪ್ರತಿ ದಿವಸ ಬೆಳಗ್ಗೆ ಮತ್ತು ರಾತ್ರಿ ಕಾಲುಕಾಲು ತೊಲ ಚೂರ್ಣ ತೆಗೆದುಕೊಂಡು ಎಳ್ಳೆಣ್ಣೆಯಲ್ಲಿ ಕಲಸಿ ಸೇವಿಸುವುದರಿಂದ ಕುಷ್ಠವಾಸಿಯಾಗುತ್ತದೆ ಈ ಚಿಕಿತ್ಸೆಯನ್ನು 2-3 ತಿಂಗಳು ನಡೆಸಬೇಕು

3 ಕರಿಲಕ್ಕಿಬೇರು 1 ತೊಲ ತೆಗೆದುಕೊಂಡು ಎಳನೀರು ಅಥವಾ ಮಜ್ಜಿಗೆಯಲ್ಲಿ ಅರೆದು ತಕ್ಕಷ್ಟು ಎಳನೀರಿನಲ್ಲಿ ಅಥವಾ ಮಜ್ಜಿಗೆಯಲ್ಲಿ ಕದಡಿ ನಿತ್ಯ 2 ಹೊತ್ತಿನಂತೆ 1-2 ವಾರ ಸೇವಿಸುವುದರಿಂದ ಮೂತ್ರಕೋಶದ ಕಲ್ಲು (ಆಶ್ಮರೀ) ಕರಗಿಹೋಗುತ್ತದೆ

4 ಲಕ್ಕಿಸೊಪ್ಪನ್ನು ಅರೆದು ಉರಿ ಇರುವ ಅಂಗಾಲಿಗೆ ಕಟ್ಟುವುದರಿಂದ ಅಂಗಾಲು ಉರಿ ಕಡಿಮೆಯಾಗುತ್ತದೆ

5 ಲಕ್ಕಿಸೊಪ್ಪನ್ನು ಚೆನ್ನಾಗಿ ಕುಟ್ಟಿ, ಆಡಿನ ಹಾಲಿನಲ್ಲಿ ಅರೆದು ಕಡಲೆಕಾಳಿನ ಗಾತ್ರದ ಮಾತ್ರೆ ಮಾಡಿಟ್ಟುಕೊಂಡು ನಿತ್ಯ ಬೆಳಗ್ಗೆ 2 ಮತ್ತು ರಾತ್ರಿ 2 ಮಾತ್ರೆಗಳನ್ನು ½ ಲೋಟ ಆಡಿನ ಹಾಲಿನಲ್ಲಿ ಮಿಶ್ರಮಾಡಿ 4-6 ದಿವಸ ಸೇವಿಸುವುದರಿಂದ ಅಂಡವೃದ್ಧಿ (Hydrocele) (ವೃಷಣದ ಊತ) ಕಡಿಮೆಯಾಗುತ್ತದೆ

6 ಲಕ್ಕಿಸೊಪ್ಪನ್ನು ಹರಳೆಲೆಯಲ್ಲಿ ಕಟ್ಟಿ ಬೆಂಬೂದಿಯಲ್ಲಿಟ್ಟು ಪಕ್ವಮಾಡಿ ಅರೆದು ತೊಡೆವಾಳೆ (ಕುರಂಡ)ಯ ಮೇಲೆ 3-4 ದಿವಸ ಕಟ್ಟುವುದರಿಂದ ಗಡ್ಡೆಯು ಒಡೆದು ವಾಸಿಯಾಗುತ್ತದೆ

7 ಲಕ್ಕಿಯ ಎಲೆಯ ರಸಕ್ಕೆ ಸ್ವಲ್ಪ ಪುನುಗನ್ನು ಸೇರಿಸಿ ಮುಖಕ್ಕೆ ಲೇಪಿಸುವುದರಿಂದ ಮುಖದ ಬಂಗು ನಿವಾರಣೆಯಾಗುತ್ತದೆ.

8 ಲಕ್ಕಿ ತೊಪ್ಪಲನ್ನು ಚೆನ್ನಾಗಿ ಅರೆದು ಆಯುಧದಿಂದಾದ ಗಾಯದ ಮೇಲೆ ಹಚ್ಚಿ ನೀರು ಹಾಕುತ್ತಿರಬೇಕು ಹೀಗೆ 9 ದಿವಸ ಮಾಡುವುದರಿಂದ ಗಾಯ ವಾಸಿಯಾಗುತ್ತದೆ

9 ಲಕ್ಕಿಯ ಪಂಚಾಂಗ ಚೂರ್ಣಕ್ಕೆ ತುಪ್ಪ ಮತ್ತು ಜೇನುತುಪ್ಪ ಸೇರಿಸಿ ತಿನ್ನುವುದರಿಂದ ವೀರ್ಯವೃದ್ಧಿಯಾಗುತ್ತದೆ

10 ಲಕ್ಕಿಯ ಪಂಚಾಂಗದ ಚೂರ್ಣಕ್ಕೆ ತ್ರಿಫಲ ಚೂರ್ಣ, ಮೂಡುಗಟ್ಟಿನಗಿಡ, ಒಂದೆಲಗ, ಬೇವು ಮತ್ತು ಬಜೆಯ ಚೂರ್ಣ ಸೇರಿಸಿ ತಕ್ಕಷ್ಟು ಜೇನುತುಪ್ಪ ಸೇರಿಸಿ ಸೇವಿಸುವುದರಿಂದ ಜಂತು ಮತ್ತು ಲಾಡಿಹುಳುಗಳು ಸತ್ತು ಬೀಳುತ್ತವೆ

11 ಲಕ್ಕಿಯ ಪಂಚಾಂಗದ ಚೂರ್ಣವನ್ನು ಗೋಮೂತ್ರದೊಡನೆ ಸೇವಿಸುವುದರಿಂದ ಚರ್ಮವ್ಯಾಧಿಗಳು ಗುಣವಾಗುತ್ತವೆ

12 ಲಕ್ಕಿಯ ಪಂಚಾಂಗದ ಚೂರ್ಣಕ್ಕೆ ಹಾಲು ಸೇರಿಸಿ ಕುಡಿಯುವುದರಿಂದ ಸುಶ್ರಾವ್ಯ ಕಂಠವುಂಟಾಗುತ್ತದೆ ಗಾಯಕರಿಗೆ ಒಳ್ಳೆಯ ಔಷಧ

13 ಎಲೆಯ ರಸ 5-10 ಹನಿಗಳಷ್ಟನ್ನು ಮೂರ್ಛೆಯಿಂದ ಪ್ರಜ್ಞೆ ತಪ್ಪಿದವರ ಮೂಗಿಗೆ ಹಾಕಿದರೆ ಬೇಗ ಎಚ್ಚರಗೊಳ್ಳುತ್ತಾರೆ.

14. ಎಲೆಯ ರಸ 14-28 ಮಿ.ಲೀ.ನಷ್ಟನ್ನು ದಿವಸಕ್ಕೆ 3 ಸಾರಿ ಕುಡಿಯುವುದರಿಂದ ಗಳಗಂಡ (Goitre) ವಾಸಿಯಾಗುತ್ತದೆ ಜೊತೆಗೆ ಬೇರಿನ ರಸದ ಕೆಲಹನಿಗಳನ್ನು ಮೂಗಿಗೆ ಆಗಿಂದಾಗ್ಗೆ ಸ್ವಲ್ಪ ಸ್ವಲ್ಪ ಹಾಕುತ್ತಿರಬೇಕು.

15 14-28 ಮಿ.ಲೀ. ಎಲೆಯ ಕಷಾಯವನ್ನು ಜೇನುತುಪ್ಪದೊಡನೆ ದಿವಸಕ್ಕೆ 3 ಬಾರಿ ಸೇವಿಸಿದರೆ ಜ್ವರ ವಾಸಿಯಾಗುತ್ತದೆ.

16 ಎಲೆಯ ಕಷಾಯದಿಂದ ಆಗಿಂದಾಗ್ಗೆ ತಲೆ ತೊಳೆಯುವುದರಿಂದ ತಲೆಯಲ್ಲಿ ಎದ್ದಿರುವ ಹುಣ್ಣು, ಕುರ, ವಾಸಿಯಾಗುತ್ತವೆ

17 ಕರಿಲಕ್ಕಿ ಚಿಗುರು ಏಳು, ಬೆಳ್ಳುಳ್ಳಿ ಹಿಲುಕು ಏಳು, ಮೆಣಸಿನಕಾಳು ಏಳು ಈ ಮೂರನ್ನು ಕೂಡಿಸಿ ಗಂಡು ಕರುವಿರುವ ಎಮ್ಮೆಯ ಮೊಸರಿನಲ್ಲಿ ಅರೆದು ಅದರಲ್ಲೇ ಕದಡಿ ನಿತ್ಯ ಬೆಳಗ್ಗೆ ಸೇವಿಸಿ ಬರಿಯ ಹಾಲು ಅನ್ನ ಊಟ ಮಾಡಬೇಕು. ಹೀಗೆ ಚಿಕಿತ್ಸೆಯನ್ನು 1-2 ವಾರ ಪಾಲಿಸಿಕೊಂಡು ಬಂದರೆ ಮೂಲವ್ಯಾಧಿ ಗುಣವಾಗುತ್ತದೆ

18 ಲಕ್ಕಿ ಎಲೆ, ಒಂದು ಹೊತ್ತಿಗೆ ಸುಮಾರು 5 ಎಲೆಗಳನ್ನು ಸ್ವಲ್ಪ ಅಡಿಗೆ ಉಪ್ಪಿನೊಡನೆ ಬಾಯಿಗೆ ಹಾಕಿಕೊಂಡು ಅಗಿದು ತಿನ್ನಬೇಕು. ಈ ಚಿಕಿತ್ಸೆಯನ್ನು ದಿನಕ್ಕೆ ಎರಡು ಬಾರಿಯಂತೆ ಒಂದು ವಾರದ ಕಾಲ ನಡೆಸಿದರೆ ಎಲ್ಲಾ ಬಗೆಯ ಕೆಮ್ಮುಗಳು ವಾಸಿಯಾಗುತ್ತವೆ

19 ಕರಿಲಕ್ಕಿ ಸೊಪ್ಪಿನ ರಸದಲ್ಲಿ ಹಿಂಗನ್ನು ಸೇರಿಸಿ ಒಣಗಿಸಿ ಪುಡಿ ಮಾಡಿಕೊಂಡು 1-2 ತಿಂಗಳು ನಸ್ಯ ಹಾಕುವುದರಿಂದ ಅಪಸ್ಮಾರ ನಿವಾರಣೆಯಾಗುತ್ತದೆ

20 ಕರಿಲಕ್ಕಿ ರಸ 4 ಚಮಚಕ್ಕೆ 2 ಚಮಚ ಹರಳೆಣ್ಣೆ ಸೇರಿಸಿ ಸೇವಿಸುವುದರಿಂದ ವಾತಶೂಲೆ ಪರಿಹಾರವಾಗುತ್ತದೆ

21 ಒಂದು ಹಿಡಿ ಲಕ್ಕಿಯ ಚಿಗುರನ್ನು ನೀರಿನಲ್ಲಿ ಬೇಯಿಸಿ ಮಜ್ಜಿಗೆಯಲ್ಲಿ ಅರೆದು ಕದಡಿ ನಿತ್ಯ ಬೆಳಗ್ಗೆ ಒಂದು ಹೊತ್ತಿನಂತೆ 2-3 ವಾರ ಸೇವಿಸುವುದರಿಂದ ವಾತ ಗುಲ್ಮ ಪರಿಹಾರವಾಗುತ್ತದೆ.

## ಪಶುರೋಗ ಚಿಕಿತ್ಸೆಯಲ್ಲಿ

1 ಲಕ್ಕಿಸೊಪ್ಪು ಮತ್ತು ಗರುಗದಸೊಪ್ಪು ಇವುಗಳನ್ನು ತೆಗೆದುಕೊಂಡು ಕರಿಮೆಣಸು ಸೇರಿಸಿ ಅರೆದಿಟ್ಟುಕೊಂಡು ಮುರಿದ ಮೂಳೆಯನ್ನು ಸರಿಯಾಗಿ ಕೂಡಿಸಿ ಅದರ ಮೇಲೆ ಮೇಲಿನ ಮಿಶ್ರಣದ ಲೇಪ ಹಾಕಿ ಬಿದಿರು ಪಟ್ಟಿಗಳನ್ನಿಟ್ಟು ಬಿಗಿಯಾಗಿ ಕಟ್ಟುವುದರಿಂದ ಮುರಿದ ಮೂಳೆ ಸರಿಯಾಗಿ ಕೂಡಿಕೊಳ್ಳುತ್ತದೆ.

2 ಕರಿಲಕ್ಕಿ ಸೊಪ್ಪನ್ನು ತಲೆದೂಗುವ ರೋಗದಲ್ಲಿ ಬಳಸುತ್ತಾರೆ ಚಿಕಿತ್ಸಾ ಕ್ರಮಕ್ಕೆ ಆಡುಮುಟ್ಟದ ಬಳ್ಳಿಯ ಉಪಯೋಗಗಳನ್ನು ನೋಡುವುದು



# ಲಕೋಟೆಮರ

| | |
|---|---|
| ವೈಜ್ಞಾನಿಕ ಹೆಸರು | ಇರಿಯೊಬಾಟ್ರಿಯ ಜಪೊನಿಕ [Eriobotrya japonica (Thunb ) Lindl ] |
| ಸಸ್ಯದ ಕುಟುಂಬ | ರೊಸೇಸಿ [Rosaceae] |
| ಕನ್ನಡದ ಇತರ ಹೆಸರುಗಳು | ಲಕ್ವಾಟೆಮರ, ಲಕ್ವಾಟೆಹಣ್ಣು |
| ಇತರ ಭಾಷೆಯ ಹೆಸರುಗಳು | ಸಂ - ಲೊಕಟ |
| | ಹಿಂ. - ಲೊಗಟ್ |
| | ತ - ನೊಕೊಟಮರಂ, ಲಕ್ಟ |
| | ಇಂ - ಜಪಾನ್ ಪ್ಲಮ್, ಲಕ್ವೊಟ್, ಚೈನೀಸ್ ಮೆಡ್ಲಾರ್, ಜಪಾನ್ ಮೆಡ್ಲಾರ್, |

**ಪರಿಚಯ**

ಮೂಲತಃ ಚೀನಾದ ಈ ಮರವು ಜಪಾನ್ ದೇಶದ ಮೂಲಕ ಭಾರತಕ್ಕೆ ಬಂದು ನೆಲೆಸಿದೆ ಈ ಮರವನ್ನು ಸುವಾಸನೆ ಬೀರುವ ಹೂವಿಗಾಗಿ ಮತ್ತು ತಿನ್ನುವಂತಹ ಹಣ್ಣಿಗಾಗಿ ಉದ್ಯಾನವನಗಳಲ್ಲಿ, ತೋಟಗಳಲ್ಲಿ ಬೆಳೆಸಲಾಗುತ್ತಿದೆ ಲಾಲ್ ಬಾಗ್ ಸಸ್ಯ ತೋಟದಲ್ಲಿ ಕೆಲವು ಮರಗಳನ್ನು ನೋಡಬಹುದಾಗಿದೆ ಈ ಮರವು 10 ರಿಂದ 18 ಅಡಿ ಎತ್ತರ ಬೆಳೆಯುವ ಮಧ್ಯಮ ವರ್ಗದ ಮರ ಮರದ ಎಳೆಯ ಕೊಂಬೆಗಳ ಮೇಲೆ ತುಕ್ಕು (Rust) ಬಣ್ಣದ ತುಪ್ಪಳವಿರುತ್ತದೆ. ಎಲೆಗಳು ಕಿರುರೆಂಬೆಗಳಲ್ಲಿ ಒತ್ತಾಗಿ ಜೋಡಣೆಯಾಗಿರುತ್ತವೆ ಎಲೆಗಳ ಉದ್ದ ಸಾಧಾರಣವಾಗಿ 15-25 ಸೆ ಮೀ ಮತ್ತು ಅಗಲ 4-7 ಸೆ ಮೀ. ಇರುತ್ತದೆ ಎಲೆಗಳ ಮೇಲ್ಭಾಗ ಹಸಿರಾಗಿದ್ದು ಹೊಳಪಿನಿಂದ ಕೂಡಿರುತ್ತದೆ, ಕೆಳಭಾಗವು ತುಕ್ಕು ಬಣ್ಣದ ತುಪ್ಪಳದಿಂದ ಆವೃತವಾಗಿರುತ್ತದೆ ಕಾಂಡದ ತುದಿಯಲ್ಲಿರುವ ದಪ್ಪ ಅಂತ್ಯಾರಂಭಿ ಪುಷ್ಪಮಂಜರಿಯಲ್ಲಿ ಬಿಳುಪಾದ ಹೂಗಳು ಒತ್ತಾಗಿ ಜೋಡಣೆಯಾಗಿರುತ್ತವೆ ಹೂವಿನಲ್ಲಿ ಸುಮಾರು 20 ಕೇಸರಗಳಿರುತ್ತವೆ ಗೋಳಾಕಾರದ ಹಣ್ಣುಗಳ ಅಡ್ಡಗಲ

3-4 ಸೆ ಮೀ. ಇರುತ್ತದೆ. ಹಣ್ಣುಗಳನ್ನು ತಿನ್ನಬಹುದು ಆದರೆ ಅಷ್ಟೊಂದು ಒಳ್ಳೆಯ ರುಚಿಯಿರುವುದಿಲ್ಲ.

## ಉಪಯೋಗಗಳು

1 ಎಲೆಯ ರಸಸೇವನೆಯಿಂದ ಅಜೀರ್ಣ ನಿವಾರಣೆಯಾಗುತ್ತದೆ

2 ಎಲೆಯ ರಸ ಅಥವಾ ಚೂರ್ಣವನ್ನು ಭೇದಿಯಾದಾಗ ಕುಡಿಯಲು ಕೊಡುತ್ತಾರೆ. ಇದನ್ನೇ ಅತಿಯಾಗಿ ಮಧ್ಯಪಾನ ಮಾಡಿದವರಿಗೆ ಕುಡಿಸಿದರೆ ಮಧ್ಯಪಾನದಿಂದುಂಟಾದ ತೊಂದರೆಗಳು ನಿವಾರಣೆಯಾಗುತ್ತದೆ

3 ಹೂವಿನ ರಸ ಮತ್ತು ಚೂರ್ಣಕ್ಕೆ ವಾಂತಿಕಾರಕ ಗುಣವಿದೆ, ಕೆಮ್ಮಿರುವಾಗ ಕುಡಿಸಿದರೆ ವಾಂತಿಯಾಗಿ ಕಫ ಹೊರಬಂದು ಕೆಮ್ಮು ಕಡಿಮೆಯಾಗುತ್ತದೆ

4 ಮಾಗಿದ ಹಣ್ಣು ಸೇವನೆಯಿಂದ ಅತಿಯಾದ ದಾಹ ಪರಿಹಾರವಾಗುತ್ತದೆ.



# ಲಾಮಂಚ

| | |
|---|---|
| ವೈಜ್ಞಾನಿಕ ಹಸರು | ವೆಟಿವೇರಿಯ ಝಿಝುನಿಯಾಯ್ಡಿಸ್<br>[Vetiveria zizanioides (L ) Nash ]<br>= ಆಂಡ್ರೊಪೊಗಾನ್ ಮ್ಯುರಿಕ್ಯಾಟಸ್<br>[ = Andropogon muricatus Retz ] |
| ಸಸ್ಯದ ಕುಟುಂಬ | ಪೊಯೇಸಿ (Poaceae) |
| ಕನ್ನಡದ ಇತರ ಹೆಸರುಗಳು | ಕಾಡುದಪ್ಪ ಕರಿ ಸಜ್ಜೆಕಲ್ಲು, ಮುಡಿವಾಳಗಿಡ, ಲಾವಂಚ ಬೇರು |
| ಇತರ ಭಾಷೆಯ ಹೆಸರುಗಳು | ಸಂ - ಅಮ್ರನಲಂ, ಉಶಿವ, ವೀರನಂ<br>ಹಿಂ - ಖಾಸ್, ಖಾಸ್ ಬೆನ<br>ತ - ವೆಟ್ಟಿವರ್<br>ತೆ. - ವೆಟ್ಟಿವೇರು<br>ಇಂ - ಭೂತ್ ಗ್ರಾಸ್, ಕುಶ್ ಗ್ರಾಸ್, ವೆಟಿವರ್ |

**ಪರಿಚಯ**

ಈ ಹುಲ್ಲಿನ ಗಿಡವು ಪ್ರಾಕೃತಿಕವಾಗಿ ಬೆಳೆಯುತ್ತದೆಯಾದರೂ ಹೆಚ್ಚಾಗಿ ಸುವಾಸನಾಭರಿತ ಬೇರಿಗಾಗಿ ಈ ಗಿಡವನ್ನು ಬೆಳೆಯಲಾಗುತ್ತಿದೆ ಕೆಲವು ಕಡೆ ಮಣ್ಣಿನ ಸವಕಳಿಯನ್ನು ತಡೆಯಲೂ ಸಹ ಇದನ್ನು ಬೆಳೆಸುತ್ತಿದ್ದಾರೆ ಪೊದೆಯಂತಿರುವ ಬಹುವಾರ್ಷಿಕ ಹುಲ್ಲಿನ ಗಿಡದಲ್ಲಿ ತಿಳಿ ಹಸಿರು ಬಣ್ಣದ ಹೊಳಪಾದ 1-3 ಅಡಿ ಉದ್ದದ ನೆಟ್ಟನೆಯ ನೀಳ ಎಲೆಗಳಿರುತ್ತವೆ ಗಿಡದ ಕುಬ್ಜ ಕಾಂಡದಿಂದ ಹಲವಾರು ಮಾತೆಗಳು ಬೆಳೆಯುತ್ತವೆ ಒಂದು ಸಾಧಾರಣ ಹೂಮಾತೆಯ ಉದ್ದ ಒಂದು ಅಡಿಯಷ್ಟಿರುತ್ತದೆ. ಮಾತೆಯ ಬಣ್ಣ ಕಂದು ಅಥವಾ ನೇರಳೆಯಾಗಿರುತ್ತದೆ

## ಉಪಯೋಗಗಳು

1 ಬೇರನ್ನು ಅರೆದು ಹೊಟ್ಟೆಯುರಿ ಮತ್ತು ಜ್ವರವಿರುವಾಗ ನೀರಿನೊಡನೆ ಕುಡಿಯುವುದರಿಂದ ಹೊಟ್ಟೆಯುರಿ ಶಮನವಾಗುತ್ತದೆ ಮತ್ತು ಜ್ವರ ಕೂಡ ವಾಸಿಯಾಗುತ್ತದೆ

2 ಬೇರಿನ ಗಂಧವನ್ನು ಹೊರಲೇಪನವಾಗಿ ಚರ್ಮಕ್ಕೆ ಹಚ್ಚಿದರೆ ಉರಿ ಕಡಿಮೆಯಾಗುತ್ತದೆ.

3 ಲಾಮಂಚದ ಬೇರಿನ ಚೂರ್ಣ ಸುಮಾರು 5 ರಿಂದ 10 ಗುಂಜಿಯಷ್ಟನ್ನು ಹಾಲಿನಲ್ಲಾಗಲಿ ಅಥವಾ ಜೇನುತುಪ್ಪದಲ್ಲಾಗಲಿ 1-2 ವಾರ ಸೇವಿಸುವುದರಿಂದ ರಕ್ತಪಿತ್ತ ಪರಿಹಾರವಾಗುತ್ತದೆ

4 ಬೇರಿನ ಗಂಧವನ್ನು ಚರ್ಮಕ್ಕೆ ಹಚ್ಚುವುದರಿಂದ ಅತಿಯಾದ ಬೆವರುವಿಕೆ ಕಡಿಮೆಯಾಗುತ್ತದೆ ಮತ್ತು ಬಿಸಿಲಿನ ಝಳದಿಂದುಂಟಾದ ದುಷ್ಪರಿಣಾಮಗಳು ದೂರವಾಗುತ್ತವೆ.

5 ಬೇರನ್ನು ಮಡಿಕೆಯಲ್ಲಿಟ್ಟ ನೀರಿಗೆ ಹಿಂದಿನ ದಿವಸ ಹಾಕಿ ಬೆಳಗ್ಗೆ ಆ ಮಡಿಕೆಯ ನೀರನ್ನು ಸೇವಿಸುವುದರಿಂದ ದೇಹ ತಂಪಾಗುತ್ತದೆ. ನೀರು ಕುಡಿಯಲು ಸುವಾಸನೆಯಿಂದಿದ್ದು ರುಚಿಕರವಾಗುತ್ತದೆ. ತಮಿಳುನಾಡಿನ ಬಹುತೇಕ ಕಡೆ ಈ ಪದ್ಧತಿಯನ್ನು ಈಗಲೂ ಅನುಸರಿಸುತ್ತಿದ್ದಾರೆ

6 ಬೇರಿನ ಚೂರ್ಣ ಸೇವನೆಯಿಂದ ವಾಂತಿ ಮತ್ತು ಭೇದಿ ಕಡಿಮೆಯಾಗುತ್ತದೆ.

7 ಬೇರಿನ ಚೂರ್ಣ ಮತ್ತು ಎಳ್ಳೆಣ್ಣೆ ಅಥವಾ ಕೊಬ್ಬರಿಎಣ್ಣೆ ಹಾಕಿ ತಯಾರಿಸಿದ ಕೇಶ ತೈಲವು ಸುವಾಸನೆಯಿಂದ ಕೂಡಿರುವುದಲ್ಲದೆ ಕೂದಲ ಬೆಳವಣಿಗೆಗೆ ಸಹಾಯಕವಾಗುತ್ತದೆ ಹಾಗೂ ಕಣ್ಣಿಗೆ ತಂಪನ್ನು ನೀಡುತ್ತದೆ





ಚಿತ್ರ 92 · ಲಾಂಟಾನ - ಪುಷ್ಪಮಂಜರಿ ಇರುವ ರೆಂಬೆ

# ಲಾಂಟಾನಾ

| | |
|---|---|
| ವೈಜ್ಞಾನಿಕ ಹೆಸರು | ಲಾಂಟಾನ ಕ್ಯಾಮರ<br>(Lantana camara L )<br>= ಲಾ. ಅಕ್ಯುಲಿಯಾಟ<br>( = L aculeata L ) |
| ಸಸ್ಯದ ಕುಟುಂಬ | ವರ್ಬಿನೇಸಿ (Verbenaceae) |
| ಕನ್ನಡದ ಇತರ ಹೆಸರುಗಳು | ಕಸೂತಿ ಹೂ, ಕಾಡುಜೋಳ,<br>ಚದುರಂಗ, ರೋಜನ್ ಗಿಡ,<br>ಲಂಟವಾಣಿ, ಹೇಸಿಗೆ ಹೂ |
| ಇತರ ಭಾಷೆಯ ಹೆಸರುಗಳು | ತ. - ಉಣ್ಣಿಚಡಿ<br>ತೆ - ಮಕ್ಕಡಮು, ವುಲಿಕಂಪ<br>ಇಂ - ಲಾಂಟಾನಬುಷ್ |

**ಪರಿಚಯ**

ದಕ್ಷಿಣ ಅಮೆರಿಕ ಮೂಲದ ಈ ಪೊದರಿನ ಗಿಡವನ್ನು 18ನೇ ಶತಮಾನದಲ್ಲಿ ಅಲಂಕಾರಿಕ ಸಸಿಯಾಗಿ ಪೋರ್ಚುಗೀಸರು ಭಾರತಕ್ಕೆ ತಂದು ಬೆಳೆಸಿದರೆಂದು ತಿಳಿದು ಬರುತ್ತದೆ ಈಗ ಇದು ಕಳ್ಳಿ ಕುರುಚಲು ಗಿಡಗಳನ್ನೊಳಗೊಂಡ ಸಸ್ಯಾವರಣದಲ್ಲಿ ಮತ್ತು ಬೀಳು ಭೂಮಿಯಲ್ಲಿ ಸ್ವೇಚ್ಛೆಯಾಗಿ ಬೆಳೆಯುತ್ತದೆ ಕೆಲವು ಕಡೆ ಬೇಲಿಗಿಡವಾಗಿ ಬೆಳೆಸಲಾಗುತ್ತಿದೆ ಪೊದೆಯಂತೆ ಬೆಳೆಯುವ ಗಿಡದ ಬುಡದ ಕಾಂಡ ದುಂಡಾಗಿರುತ್ತದೆ ಎಳೆಯ ಕಾಂಡಕ್ಕೆ ನಾಲ್ಕು ಮೂಲೆಗಳಿರುತ್ತವೆ ಕಾಂಡದ ಮೇಲೆ ಕೆಳಕ್ಕೆ ಬಾಗಿದ ಸಣ್ಣ ಮುಳ್ಳುಗಳಿರುತ್ತವೆ ಈ ಮುಳ್ಳುಗಳನ್ನು ಕಾಂಡದಿಂದ ಸುಲಭವಾಗಿ ಬೇರ್ಪಡಿಸಬಹುದು ಉದ್ದ-ಅಂಡಾಕಾರದ ಒರಟಾದ ಎಲೆಗಳು ಅಭಿಮುಖವಾಗಿ ಜೋಡಣೆಯಾಗಿರುತ್ತವೆ ಎಲೆಯ ಕಂಕುಳಲ್ಲಿ ಪುಷ್ಪಮಂಜರಿಯಿರುತ್ತದೆ ಹೂಗಳ

ಬಣ್ಣ ಕೆಂಪು, ಹಳದಿ ಮತ್ತು ಗುಲಾಬಿಯಾಗಿರುತ್ತದೆ. ಮುತ್ತಿನಂತಹ ಕಪ್ಪು ಹಣ್ಣುಗಳಿರುತ್ತವೆ ತಿನ್ನಲು ರುಚಿಯಾಗಿರುತ್ತದೆ

ಲಾಂಟಾನಾ ಗಿಡದ ಹಲವಾರು ಪ್ರಭೇದ ಮತ್ತು ತಳಿಗಳನ್ನು ಅಲಂಕಾರಿಕ ಗಿಡವಾಗಿ ಬೆಳೆಸಲಾಗುತ್ತಿದೆ ಇವುಗಳನ್ನೂ ಔಷಧ ತಯಾರಿಕೆಗೆ ಬಳಸಬಹುದು.

## ಉಪಯೋಗಗಳು

1 ಲಾಂಟಾನ ಗಿಡದ ಎಲೆಯನ್ನು ನಯವಾಗಿ ಅರೆದು ಸುಣ್ಣ ಸೇರಿಸಿ ಹರಿತವಾದ ಆಯುಧದಿಂದಾದ ಗಾಯದ ಮೇಲೆ ಮೆತ್ತಿದರೆ ಗಾಯ ಬೇಗ ವಾಸಿಯಾಗುತ್ತದೆ

2 ಗುನಿಯ ದೇಶದಲ್ಲಿ ಈ ಗಿಡದ ಕಷಾಯವನ್ನು ಧನುರ್ವಾಯು ಸಂಧಿವಾತ ಮತ್ತು ಮಲೇರಿಯ ರೋಗ ಕಾಣಿಸಿಕೊಂಡಾಗ ಕುಡಿಸುತ್ತಾರೆ



# ವಡವಾರ

| | |
|---|---|
| ವೈಜ್ಞಾನಿಕ ಹೆಸರು | ಡೈಕ್ರೊಸ್ಟ್ಯಾಕಿಸ್ ಸಿನೇರಿಯ [Dıchrostachys cınerea (L ) Wt and Arn ] |
| ಸಸ್ಯದ ಕುಟುಂಬ | ಮಿಮೊಸೇಸಿ [Mımosaceae] |
| ಕನ್ನಡದ ಇತರ ಹೆಸರುಗಳು | ಎಡತರಿ, ಒಡತರೆ, ಒದವಿನ, ವಾಡುವರಡು |
| ಭಾಷೆಯ ಹೆಸರುಗಳು | ಸಂ - ವೆಲ್ಲಾಂತರ, ವೀರವೃಕ್ಷ, ವೀರತರು<br>ಹಿಂ - ವರ್ತುಳಿ, ಖೇರಿ<br>ತ - ವದತಲ, ವಡತರೆ, ವಡತಂ<br>ತೆ - ವೇತುರು, ನಲ್ಲಿವೆನುತುರು, ನೆಲ್ಲಜಾಮಿ |

**ಪರಿಚಯ**

ವಡವಾರವು ಕುರುಚಲು ಗಿಡಗಳನ್ನೊಳಗೊಂಡ ಹಾಗೂ ಬೇಸಿಗೆಯಲ್ಲಿ ಎಲೆಯುದುರುವ ಮೈದಾನ ಸೀಮೆಯ ಒಣ ಸಸ್ಯಾವರಣಗಳಲ್ಲಿ ಪೊದರಿನಂತೆ ಬೆಳೆಯುತ್ತದೆ. ಫಲವತ್ತಾದ ಮಣ್ಣಿರುವ ಕಡೆ ಈ ಪೊದರುಗಿಡವು ಸಣ್ಣ ಮರದಂತೆಯೂ ಬೆಳೆಯುತ್ತದೆ ತೊಗಟೆಗೆ ಬೂದು ಇಲ್ಲವೆ ಕಂದು ಬಣ್ಣವಿರುತ್ತದೆ ಮತ್ತು ಸಣ್ಣ ಸಿಪ್ಪೆಯಂತೆ ಸುಲಿದು ಬೀಳುತ್ತದೆ ರೆಂಬೆ ಮತ್ತು ಕಿರುರೆಂಬೆಗಳ ಮೇಲೆ ಮುಳ್ಳುಗಳಿರುತ್ತವೆ ಸಂಯುಕ್ತ ಪತ್ರಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ ಸಂಯುಕ್ತ ಪತ್ರದ ಕವಲು ರೆಂಬೆಗಳ ಮೇಲೆ ಕಿರುಪತ್ರಗಳು ಅಭಿಮುಖವಾಗಿ ಜೋಡಣೆಯಾಗಿರುತ್ತವೆ ವಡವಾರವು ಏಪ್ರಿಲ್-ಅಕ್ಟೋಬರ್ ಅವಧಿಯಲ್ಲಿ ಹೂ ಬಿಡುತ್ತದೆ ಆ ಸಮಯದಲ್ಲಿ ವಡವಾರದ ಪೊದರನ್ನು ದೂರದಿಂದಲೇ ಗುರುತಿಸಬಹುದು ಎಲೆಯ ಕಂಕುಳಿನಿಂದ ತೂಗಾಡುವ ಪುಷ್ಪಮಂಜರಿಯಲ್ಲಿ ಹಳದಿ, ಗುಲಾಬಿ ಮತ್ತು ಬಿಳಿ ಬಣ್ಣದ ಹೂಗಳಿರುವುದರಿಂದ



ಚಿತ್ರ 93 ವಡವಾರ - ಪುಷ್ಪಮಂಜರಿ ಇರುವ ರೆಂಬೆಗಳು

ಪುಷ್ಪಮಂಜರಿಯು ಅತ್ಯಾಕರ್ಷಕವಾಗಿ ಕಾಣುತ್ತದೆ ಪುಷ್ಪಮಂಜರಿಯಲ್ಲಿರುವ ಫಲೋತ್ಪಾದಕ ಮತ್ತು ಗೊಡ್ಡು ಹೂಗಳಿಂದ ಹೊರಬಂದ ಕೇಸರಗಳು ಮತ್ತು ಬಂಜೆಕೇಸರಗಳಿಂದಾಗಿ ಪುಷ್ಪಮಂಜರಿಯು ಕುಂಚದಂತೆ ಕಂಡುಬರುತ್ತದೆ. ಕಾಯಿಗಳು ವಕ್ರವಕ್ರವಾಗಿ ತಿರುಚಿಕೊಂಡಿರುತ್ತವೆ

## ಉಪಯೋಗಗಳು

1 ಬೇರಿನ ಚೂರ್ಣ ಅಥವಾ ಕಷಾಯ ಸೇವನೆಯಿಂದ ಹಸಿವುಂಟಾಗುತ್ತದೆ.

2 ಬೇರಿನ ಚೂರ್ಣ ಅಥವಾ ಕಷಾಯ ಸೇವನೆಯಿಂದ ಮೂತ್ರ ತಡೆ ಮತ್ತು ಮೂತ್ರಕೋಶದ ಕಲ್ಲು ನಿವಾರಣೆಯಾಗುತ್ತದೆ

3 ಬೇರಿನ ಚೂರ್ಣವನ್ನು ಸಂಧಿವಾತದ ಬಾದೆಯಿರುವವರಿಗೆ ತಿನ್ನಿಸುತ್ತಾರೆ.

4 ಕಾಂಡದ ಕುಡಿಯನ್ನು ನಯವಾಗಿ ಅರೆದು ಕಣ್ಣುಪೊರೆಯಿರುವ ಕಣ್ಣುಗಳಿಗೆ ಕಣ್ಕಪ್ಪಿನಂತಿಡುತ್ತಾರೆ

## ಪಶುರೋಗ ಚಿಕಿತ್ಸೆಯಲ್ಲಿ

ತಲಾ ಒಂದು ಹಿಡಿಯಷ್ಟು ವಡವಾರದ ಬೇರಿನಪುಡಿ, ಇಂಗಳಾರದ ಬೇರಿನ ಪುಡಿ, ಆಡುಮುಟ್ಟದ ಬಳ್ಳಿಯ ಬೇರಿನಪುಡಿ, ಅಶ್ವಗಂಧ (ಹಿರೆಮದ್ದಿನಗಿಡ) ಬೇರಿನ ಪುಡಿ ಇವುಗಳನ್ನು ಮಿಶ್ರಮಾಡಿ ಒಂದು ಮಣ್ಣಿನ ಪಾತ್ರೆಗೆ ಹಾಕಿ ಅದಕ್ಕೆ ಒಂದು ಸೇರು ಮಜ್ಜಿಗೆ ಸೇರಿಸಿ, ಮಣ್ಣಿನ ಪಾತ್ರೆಯ ಬಾಯಿ ಸೀಲು ಮಾಡಿ ಏಳು ದಿವಸ ಭೂಮಿಯಲ್ಲಿ ಹೂತಿಟ್ಟು ಎಂಟನೆಯ ದಿವಸ ಹೊರತೆಗೆದು ನಯವಾಗಿ ಅರೆದು ಮತ್ತೆ 3 ಸೇರು ಮಜ್ಜಿಗೆ ಸೇರಿಸಿ ದಿವಸಕ್ಕೆ ಅರ್ಧ ಸೇರಿನಂತೆ ಏಳು ದಿವಸ ಕುಡಿಸುವುದರಿಂದ ಕೆಮ್ಮು ದಮ್ಮು ಮತ್ತು ಗೂರಲು ವಾಸಿಯಾಗುತ್ತದೆ





ಚಿತ್ರ 94 ವಾತನಾರಾಯಣ - ಹೂಗಳಿರುವ ರೆಂಬೆ

# ವಾತನಾರಾಯಣ (ಸುಂಕತ್ರಿ)

| | |
|---|---|
| ವೈಜ್ಞಾನಿಕ ಹೆಸರು | ಡಿಲೊನಿಕ್ಸ್ ಇಲಾಟ<br>[Delonix elata (L ) Gamble]<br>= ಪಾಯಿನ್ಸಿಯಾನ ಇಲಾಟ<br>[ = Poinciana elata L ] |
| ಸಸ್ಯದ ಕುಟುಂಬ | ಸಿಸಾಲ್‌ಪಿನಿಯೇಸಿ[Caesalpiniaceae] |
| ಕನ್ನಡದ ಇತರ ಹೆಸರುಗಳು | ಸಂಕೇಶ್ವರ, ಸೀಮೆಸಂಕೇಶ್ವರ, ಸುಂಕೇಸರಿ, ಕೆಂಪುಕೆಂಜಿಗ, ನೀರಂಗಿ |
| ಇತರ ಭಾಷೆಯ ಹೆಸರುಗಳು | ತ - ವಾತನಾರಾಯಣ, ವದೆನಾರಾಯಣಂ, ವೆರುಗೊಂಡ್ರೈ<br>ತೆ - ವಾತನಾರಾಯಣಮು, ಚಿನ್ನಕೇರಿಬಿಸೇರಿ<br>ಇಂ - ವೈಟ್ ಗುಲ್ ಮೋಹರ್, ಟೈಗರ್ ಬೀನ್ |

**ಪರಿಚಯ**

ಅಬಿಸೀನಿಯಾದಿಂದ ತರಲಾದ ಈ ಮರವನ್ನು ಅಲ್ಲಲ್ಲಿ ಸಾಲು ಮರವಾಗಿ ಮತ್ತು ಅಲಂಕಾರಿಕ ಹೂಮರವಾಗಿ ಉದ್ಯಾನ ವನಗಳಲ್ಲಿ ಬೆಳೆಸಲಾಗುತ್ತಿದೆ

ಈ ಮರವು ಸುಮಾರು 30 ಅಡಿ ಎತ್ತರದವರೆಗೆ ಬೆಳೆಯುತ್ತದೆ ರೆಂಬೆಗಳು ಛತ್ರಿಯಂತೆ ಸುತ್ತಲೂ ಹರಡಿಕೊಳ್ಳುತ್ತವೆ ಸಂಯುಕ್ತ ಎಲೆಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ ಫೆಬ್ರವರಿ ಮತ್ತು ಮಾರ್ಚ್ ತಿಂಗಳುಗಳಲ್ಲಿ ಇಡೀ ಮರವೇ ಬಿಳಿ ಮಿಶ್ರಿತ ಹಳದಿ ಹೂಗಳಿಂದ ತುಂಬಿರುತ್ತದೆ.

ಹೂವಿನಲ್ಲಿ 5 ಪುಷ್ಪಪಾತ್ರಾಪತ್ರಕಗಳು ಮತ್ತು ಅಷ್ಟೇ ಸಂಖ್ಯೆಯ ದಳಗಳಿರುತ್ತವೆ. ದಳಗಳಿಗಿಂತ ಉದ್ದವಾದ ಹತ್ತು ಕೇಸರಗಳು ಹೂವಿನಿಂದ ಹೊರಕ್ಕೆ ಚಾಚಿಕೊಂಡಿರುತ್ತವೆ

## ಉಪಯೋಗಗಳು

1. ಸಮೂಲದ ಚೂರ್ಣ ಸೇವನೆಯಿಂದ ಸಂಧಿವಾತ ಮತ್ತು ಉದರ ಸಂಭಂದದ ರೋಗಗಳು ವಾಸಿಯಾಗುತ್ತವೆ.
2. ಮರದ ತೊಗಟೆಯ ಚೂರ್ಣವನ್ನು ಸೇವಿಸುವುದರಿಂದ ಜ್ವರ ಕಡಿಮೆಯಾಗುತ್ತದೆ
3. ಸೊಪ್ಪನ್ನು ಬೇಯಿಸಿ ಸೇವಿಸುವುದರಿಂದ ಮಲಬದ್ಧತೆ ನಿವಾರಣೆಯಾಗುತ್ತದೆ.



# ವಿಷಮಧಾರಿ

| | |
|---|---|
| ವೈಜ್ಞಾನಿಕ ಹೆಸರು | ಕ್ಲೀರೊಡೆಂಡ್ರಂ ಇನರ್ಮೆ [Clerodendrum inerme (L ) Gaertner] |
| ಸಸ್ಯದ ಕುಟುಂಬ | ವರ್ಬಿನೇಸಿ [Verbenaceae] |
| ಕನ್ನಡದ ಇತರ ಹೆಸರುಗಳು | ಕಿರಿತೆಕ್ಕು, ಕುಂಡಲಿಗಿಡ, ನಾಯಿತೆಕ್ಕಲೆ, ಭತರಾಜ, ವನಜಾಯಿ |
| ಇತರ ಭಾಷೆಯ ಹೆಸರುಗಳು | ಸಂ. - ಕುಂಡಲಿ, ಕ್ಷುದ್ರಾಗ್ನಿಮಂಥ<br>ಹಿಂ. - ಬಿನ್ ಜೋಮ್,ಸಂಗನ್ ಕುಪ್ಪಿ, ಚೋಟಿ-ಅರ್ನಿ<br>ತ. - ಪಿನಸಂಗಂ-ಕೊಪ್ಪಿ<br>ತೆ. - ಪಿಶಿನಿಕ, ಉತಿಚೆಟ್ಟು, ಎರುವ್-ಪಿಚ್ಚ<br>ಇಂ - ಗಾರ್ಡನ್ ಕ್ವಿನೈನ್ |

**ಪರಿಚಯ**

ಈ ಮೂಲಿಕೆಯನ್ನು ಉದ್ಯಾನವನಗಳಲ್ಲಿ ಅಲಂಕಾರಿಕ ಅಂಚು ಗಿಡವಾಗಿ ಬೆಳೆಸುತ್ತಾರೆ. ಕೆಲವು ಕಡೆ ಬೇಲಿಗಿಡವಾಗಿಯೂ ಸಹ ಇದನ್ನು ಬೆಳೆಸುತ್ತಾರೆ ಉದ್ಯಾನವನಗಳಲ್ಲಿ ಈ ಗಿಡವನ್ನು ಕತ್ತರಿಸಿ ವಿವಿಧ ಆಕಾರ ಮತ್ತು ರೂಪ ಕೊಡುತ್ತಾರೆ. ಈ ಪೊದರು ಗಿಡವು 2-4 ಅಡಿ ಎತ್ತರ ಬೆಳೆಯುತ್ತದೆ ಸರಳವಾದ ಅಂಡಾಕಾರದ ಎಲೆಗಳು ಅಭಿಮುಖವಾಗಿ ಜೋಡಣೆಯಾಗಿರುತ್ತವೆ. ಎಲೆಯ ಮೇಲ್ಭಾಗ ದಟ್ಟ ಹಸಿರಾಗಿದ್ದು ಕೆಳಭಾಗ ತಿಳಿ ಹಸಿರಾಗಿರುತ್ತದೆ. ಎಲೆ ರುಚಿಯಲ್ಲಿ ಅತ್ಯಂತ ಕಹಿಯಾಗಿರುತ್ತದೆ. ಬಿಳುಪಾದ ಹೂಗಳು ಮಧ್ಯಾರಂಬಿ ಪುಷ್ಪಮಂಜರಿಯಲ್ಲಿ ಜೋಡಣೆಯಾಗಿರುತ್ತವೆ ಒಂದು ಪುಷ್ಪಮಂಜರಿಯಲ್ಲಿ ಕೇವಲ 3 ಹೂಗಳು ಮಾತ್ರ ಇರುತ್ತವೆ. ಹೂಗಳಿಂದ 4 ಕೇಸರಗಳು ಹೊರಚಾಚಿರುತ್ತವೆ.

## ಉಪಯೋಗಗಳು

1 ಬೇರನ್ನು ಎಳ್ಳೆಣ್ಣೆಗೆ ಹಾಕಿ ಚೆನ್ನಾಗಿ ಕಾಯಿಸಿ ಬೇರನ್ನು ತೆಗೆದುಹಾಕಿ ಎಣ್ಣೆಯನ್ನು ಹೊರಲೇಪನವಾಗಿ ಬಳಸುವುದರಿಂದ ವಾಯುನೋವು ವಾಸಿಯಾಗುತ್ತದೆ

2 ಬೇರನ್ನು ಅರೆದು ಚೇಳು ಕಡಿದ ಜಾಗದ ಮೇಲೆ ಹಚ್ಚುವುದರಿಂದ ಚೇಳಿನ ವಿಷ ಪರಿಹಾರವಾಗುತ್ತದೆ

3 ಎಲೆಗಳನ್ನು ನೀರಿಗೆ ಹಾಕಿ ಚೆನ್ನಾಗಿ ಮರಳಿಸಿ ನಂತರ ಆ ನೀರಿನಿಂದ ಸ್ನಾನ ಮಾಡುವುದರಿಂದ ಮೈನವೆ ವಾಸಿಯಾಗುತ್ತದೆ

4. ಎಲೆಯ ಚೂರ್ಣವನ್ನು ಮತ್ತು ನಕ್ಕರೆಯನ್ನು ಅನ್ನದ ಗಂಜಿಗೆ ಸೇರಿಸಿ ಕುಡಿಯುವುದರಿಂದ ಲೈಂಗಿಕ ವ್ಯಾಧಿಗಳು ಗುಣವಾಗುತ್ತವೆ

5 ಸೊಪ್ಪಿನ ರಸವನ್ನು ಮಜ್ಜಿಗೆಯಲ್ಲಿ ಕೊಟ್ಟರೆ ರಕ್ತ ಹಾಗೂ ಶ್ವೇತ ಪ್ರದರ ರೋಗಗಳು ಗುಣವಾಗುತ್ತವೆ

6 ಪ್ರತಿದಿನ 3-4 ಎಲೆಯನ್ನು ಸೇವಿಸಿದರೆ ಮಧುಮೇಹ ಹತೋಟಿಗೆ ಬರುತ್ತದೆ

7 ಸಮೂಲದ ರಸ ಅಥವಾ ಕಷಾಯವನ್ನು ಕುಡಿಸುವುದರಿಂದ ಬಿಟ್ಟು ಬಿಟ್ಟು ಬರುವ ಜ್ವರ ಕಡಿಮೆಯಾಗುತ್ತದೆ.

## ಪಶುರೋಗ ಚಿಕಿತ್ಸೆಯಲ್ಲಿ

1 ವಿಷಮಧಾರಿ ಸೊಪ್ಪು 3 ಹಿಡಿ ತೆಗೆದುಕೊಂಡು ಚೆನ್ನಾಗಿ, ಅರೆದು ಪುಡಿ ಅರಿಸಿನ ಸೇರಿಸಿ ಕಲಸಿ ಮೈಗೆ ಲೇಪಿಸುವುದರಿಂದ ಉಣ್ಣೆಯ ಉಪಟಳ ಕಡಿಮೆಯಾಗುತ್ತದೆ

2 ವಿಷಮಧಾರಿ ಸೊಪ್ಪನ್ನು ದನುರ್ವಾಯು ರೋಗದಲ್ಲಿ ಬಳಸುತ್ತಾರೆ. ಚಿಕಿತ್ಸಾ ಕ್ರಮಕ್ಕೆ ಬುಗುಡಿ ಹಂಬಿನ ಉಪಯೋಗಗಳನ್ನು ನೋಡುವುದು



# ವಿಭೂತಿ ಗಿಡ

| | |
|---|---|
| ವೈಜ್ಞಾನಿಕ ಹೆಸರು | ಮಿರಾಬಿಲಿಸ ಜಲಪ [Mırabılıs jalapa L ] |
| ಸಸ್ಯದ ಕುಟುಂಬ | ನಿಕ್ಟಾಜಿನೇಸಿ [Nyctagınaceae] |
| ಕನ್ನಡದ ಇತರ ಹೆಸರುಗಳು | ಕಲ್ಲುಳ್ಳಿ, ಗುಲ್ಲುಮಂಚಿ, ಭದ್ರಾಕ್ಷಿಹೂ, ಮಧ್ಯಾಹ್ನ ಮಲ್ಲಿಗೆ, ವಿಭೂತಿಹೂ, ಸಂಜೆಮಲ್ಲಿಗೆ |
| ಇತರ ಭಾಷೆಯ ಹೆಸರುಗಳು | ಸಂ. - ಕೃಷ್ಣಕೇಳಿ<br>ಹಿಂ - ಗುಲಬ್ಬಾಸ್<br>ತ - ವಟ್ಟರಶು, ಬದ್ರಾಕ್ಷಿ<br>ತೆ. - ಚಂದ್ರಕಾಂತ, ಚಂದ್ರಮಳ್ಳಿ<br>ಇಂ - ಫೋರ್ 'ಒ' ಕ್ಲಾಕ್ ಪ್ಲಾಂಟ್ |

**ಪರಿಚಯ**

ಈ ಮೂಲಿಕೆಯು ಸಾಧಾರಣವಾಗಿ ಹೊರ ವಲಯದಲ್ಲಿ, ದೇವಾಲಯದ ಸಮೀಪ ಬೆಳೆಯುತ್ತದೆ ಸಾಧಾರಣ ಪೊದೆಯಂತಾಗುವ ಗಿಡದಲ್ಲಿ ಸರಳವಾದ ಹಾಗೂ ಕರ್ನೆಯಾಕಾರದ ಎಲೆಗಳು ಕಾಂಡದ ಮೇಲೆ ಪರ್ಯಾಯವಾಗಿ ಜೋಡಣೆಯಾಗಿರುತ್ತವೆ ಮಧ್ಯಾರಂಬಿ ಹೂ ಗೊಂಚಲಿನಲ್ಲಿ ದೊಡ್ಡ ದೊಡ್ಡ ಗುಲಾಬಿಗೆಂಪು, ಬಿಳಿ ಅಥವಾ ಹಳದಿ ಬಣ್ಣದ ಹೂಗಳಿರುತ್ತವೆ ಬೀಜಗಳು ಕರಿಮೆಣಸನ್ನು ಹೋಲುತ್ತವೆ

## ಉಪಯೋಗಗಳು

1 ಬೇರಿನ ಸೇವನೆಯು ಮೃದು ವಿರೇಚನದಂತೆ ಕೆಲಸ ಮಾಡುತ್ತದೆ

2 ಬೇರಿನ ಚೂರ್ಣವನ್ನು ತುಪ್ಪದಲ್ಲಿ ಹುರಿದು ಹಾಲಿನೊಡನೆ ತಿನ್ನಿಸುವುದರಿಂದ ದೇಹಕ್ಕೆ ಬಲ ಬರುತ್ತದೆ

3 ಬೇರಿನ ಗಂಧವನ್ನು ಮೂಗೇಟು ಬಿದ್ದಿರುವ ಕಡೆ ಲೇಪಿಸುವುದರಿಂದ ನೋವು ಮತ್ತು ಊತ ಕಡಿಮೆಯಾಗುತ್ತದೆ

4 ಎಲೆಗಳನ್ನು ಅರೆದು ಬಿಸಿಮಾಡಿ ಕುರು ಮತ್ತು ಬಾವಿನ ಮೇಲೆ ಪಟ್ಟು ಕಟ್ಟುವುದರಿಂದ ಅವು ಬೇಗನೆ ಮಾಗಿ ಕೀವು ಸೋರಿಹೋಗಿ ವಾಸಿಯಾಗುತ್ತದೆ.

5 ಆಗತಾನೆ ಕಿತ್ತುತಂದ ಎಲೆಗಳನ್ನು ಅರೆದು ಮೈಗೆ ಲೇಪಿಸುವುದರಿಂದ ನವೆ ಮತ್ತು ಗಂಧೆ ಕಡಿಮೆಯಾಗುತ್ತದೆ

6 ವಿಭೂತಿ ಗಿಡದ ಸೊಪ್ಪು ಅಥವಾ ಬೇರನ್ನು ಅರೆದು ಎಳ್ಳೆಣ್ಣೆ ಸೇರಿಸಿ ಬಿಸಿಮಾಡಿ ಉಗುರು ಸುತ್ತಾಗಿರುವ ಬೆರಳಿಗೆ ಕೆಲವು ದಿವಸಗಳವರೆಗೆ ಪ್ರತಿ ದಿವಸ ಪಟ್ಟು ಹಾಕುವುದರಿಂದ ಉಗುರುಸುತ್ತು ವಾಸಿಯಾಗುತ್ತದೆ.



# ಶಿವನಿಮರ

| | |
|---|---|
| ವೈಜ್ಞಾನಿಕ ಹೆಸರು | ಮೆಲಿನ ಆರ್ಬೋರಿಯ [Gmelina arborea Roxb ] |
| ಸಸ್ಯದ ಕುಟುಂಬ | ವರ್ಬಿನೇಸಿ [Verbenaceae] |
| ಕನ್ನಡದ ಇತರ ಹೆಸರುಗಳು | ಕಾಶ್ಮೀರಿ, ಕುಂಬಲ್, ಕುಂಭುದಿ, ಕುಮುಲು, ಕುಸ, ಕೂಲೆ, ಗಾಂಧಾರಿಗಿಡ, ಗುಪ್ಸಿ, ಗುಂಭಾರಿ, ಗುಮ್ಮಿ |
| ಇತರ ಭಾಷೆಯ ಹೆಸರುಗಳು | ಸಂ. - ಶ್ರೀಪರ್ಣೆ, ಕಾಸ್ಮಾರ್ರಿ, ಗಂಭಾರಿ, ಗುಂಭಾರಿ, ಭದ್ರಪರ್ಣೆ, ಮಧುಪರ್ಣಿಕ,<br>ಹಿಂ - ಗುಮಾರಿ, ಗುಂಭಾರ್<br>ತ - ಕುಂಪ್ಲಿ, ಪೆರುಂಗುಂಪ್ಲಿ, ಕಟ್ಟಾನಂ<br>ತೆ - ಗುಮ್ಮಡಿಟೇಕು<br>ಇಂ - ಮೆಲೈನ ಟ್ರೀ |

**ಪರಿಚಯ**

ಈ ಮರವು ಬೇಸಿಗೆಯಲ್ಲಿ ಎಲೆಯುದುರುವ ಮಲೆನಾಡಿನ ಮತ್ತು ಮೈದಾನ ಸೀಮೆಯ ಒಣ ಸಸ್ಯಾವರಣ ಹಾಗೂ ಕಳ್ಳಿ ಕುರುಚಲು ಗಿಡಗಳನ್ನೊಳಗೊಂಡ ಸಸ್ಯಾವರಣಗಳಲ್ಲಿ ಬೆಳೆಯುತ್ತದೆ ಉದ್ದತೊಟ್ಟಿನ ಎಲೆಗಳು ಅಭಿಮುಖವಾಗಿ ಜೋಡಣೆಯಾಗಿರುತ್ತವೆ ಎಲೆಗಳು ಎಳೆಯದಾಗಿದ್ದಾಗ ತುಪ್ಪಳ ಹೊಂದಿರುತ್ತವೆ, ಬಲಿತ ಮೇಲೆ ಅವುಗಳ ಮೇಲಿನ ತುಪ್ಪಳ ಉದುರಿಹೋಗಿ ಹೊಳಪಾಗುತ್ತದೆ. ಬಲಿತ ಹೃದಯದಾಕಾರದ ಎಲೆಗಳ ಉದ್ದಗಲ 18 ರಿಂದ 25 ಸೆ ಮೀ. ಇರುತ್ತದೆ ಜೂನ್ ಮತ್ತು ನವೆಂಬರ್ ತಿಂಗಳುಗಳಲ್ಲಿ ಈ ಮರ ಹೂ ಬಿಡುತ್ತದೆ ಹೂಗಳ ಹೊರಭಾಗ ಕಂದು ಮಿಶ್ರಿತ ಹಳದಿಯಾಗಿದ್ದರೆ ಒಳಭಾಗವು ಹಳದಿಯಾಗಿರುತ್ತದೆ ಹಣ್ಣುಗಳು ಗೋಳಾಕಾರವಾಗಿರುತ್ತವೆ ಬಲಿತಾಗ ಹಳದಿ ಬಣ್ಣಕ್ಕೆ ತಿರುಗುತ್ತವೆ ಪ್ರತಿ ಹಣ್ಣಿನಲ್ಲಿ 1-2 ಬೀಜಗಳಿರುತ್ತವೆ



ಚಿತ್ರ 97 : ಶಿವನಿ ಮರ – ಹೂಗಳಿರುವ ರೆಂಬೆ

## ಉಪಯೋಗಗಳು

1. ಜ್ವರದಿಂದ ತಲೆನೋವು ಬಂದಾಗ ಎಲೆಗಳನ್ನು ಅರೆದು ಹಣೆಗೆ ಪಟ್ಟು ಹಾಕುವುದರಿಂದ ತಲೆನೋವು ಗುಣವಾಗುತ್ತದೆ

2. ಬೇರಿನ ಗಂಧ, ಕಷಾಯ ಅಥವಾ ಚೂರ್ಣ ಸೇವನೆಯಿಂದ ಅಜೀರ್ಣ ಮತ್ತು ಮೂಲವ್ಯಾಧಿ ಗುಣವಾಗುತ್ತದೆ.

3. ಈ ಮರದ ಫಲಸೇವನೆಯಿಂದ ಅತಿಯಾದ ದಾಹ, ಹೃದಯಸಂಬಂಧದ ರೋಗ ಮತ್ತು ಕ್ಷಯರೋಗಗಳು ಗುಣವಾಗುತ್ತವೆ.

4. ಎಲೆಯ ರಸವನ್ನು ಹಾಲು ಸಕ್ಕರೆಯೊಡನೆ ಸೇವಿಸುವುದರಿಂದ ಮೂತ್ರಾಂಗದ ಉರಿ, ಊತ ಮತ್ತು ಪ್ರಮೇಹವ್ಯಾದಿ ಗುಣವಾಗುತ್ತದೆ

5. ಈ ಮರದ ಫಲಸೇವನೆಯಿಂದ ಎದೆಹಾಲು ಹೆಚ್ಚಾಗಿ ಉತ್ಪತ್ತಿಯಾಗುತ್ತದೆ.

6. ಈ ಮರದ ಫಲವನ್ನು ಸೇವಿಸುವುದರಿಂದ ವೀರ್ಯವೃದ್ಧಿಯಾಗುತ್ತದೆ

7. ಬೇರಿನ ತೊಗಟೆಯ ಕಷಾಯ ಸೇವನೆಯಿಂದ ಹೆರಿಗೆಯಾದ ನಂತರ ಗರ್ಭಾಶಯದಲ್ಲಿ ಕಾಣಿಸಿಕೊಳ್ಳುವ ತೊಂದರೆಗಳು ನಿವಾರಣೆಯಾಗುತ್ತವೆ.

8. ಬೇರಿನ ತೊಗಟೆಯ ಗಂಧ ತಯಾರಿಸಿಕೊಂಡು ಹಾವು ಚೇಳು ಕಡಿದವರಿಗೆ ಹೊಟ್ಟೆಗೆ ಕುಡಿಸಿ ಹೊರಗೆ ಲೇಪಿಸುವುದರಿಂದ ವಿಷಪರಿಹಾರವಾಗುತ್ತದೆ.

9. ಬೇರಿನ ಚೂರ್ಣ ಹಾಗೂ ಹಣ್ಣು ಸೇವನೆಯಿಂದ ನರದೌರ್ಬಲ್ಯ ಪರಿಹಾರವಾಗುತ್ತದೆ





ಚಿತ್ರ 98 · ಸಣ್ಣದಾಸವಾಳ

# ಸಣ್ಣದಾಸವಾಳ

| | |
|---|---|
| ವೈಜ್ಞಾನಿಕ ಹೆಸರು | ಹೈಬಿಸ್ಕಸ್ ಒವಾಲಿಫೊಲಿಯಸ್ (Hibiscus ovalifolius (Forsk ) Vahl ) |
| ಸಸ್ಯದ ಕುಟುಂಬ | ಮಾಲ್ವೇಸಿ (Malvaceae) |
| ಕನ್ನಡದ ಇತರ ಹೆಸರುಗಳು | ಲೊವಾಲೆ |
| ಇತರ ಭಾಷೆಯ ಹೆಸರುಗಳು | ತ - ಸಿಟ್ಟಾಮುಟ್ಟಿ<br>ತೆ - ತುತ್ತುರುಬೆಂಡ |

**ಪರಿಚಯ**

ಈ ಗಿಡವು ಸಾಮಾನ್ಯವಾಗಿ ಬೀಳು ಭೂಮಿಯಲ್ಲಿ, ಕಲ್ಲುಗುಟ್ಟೆಯಲ್ಲಿ ಬೆಳೆಯುತ್ತದೆ. ಹಲವು ಕವಲುಗಳಿಂದ ಕೂಡಿದ ಗಿಡವು 2 ರಿಂದ 4 ಅಡಿ ಎತ್ತರ ಬೆಳೆಯುತ್ತದೆ. ಗಿಡದಲ್ಲಿ ಮುಳ್ಳುಗಳಿರುವುದಿಲ್ಲ. ಎಲೆಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ ಎಲೆಯ ಕಂಕುಳಲ್ಲಿ ಒಂದೊಂದೇ ಹೂಗಳಿರುತ್ತವೆ. ಬಿಳಿಬಣ್ಣದ ಹೂಗಳು ರೂಪದಲ್ಲಿ ದಾಸವಾಳದ ಹೂವನ್ನು ಹೋಲುತ್ತವೆಯಾದರೂ ಗಾತ್ರದಲ್ಲಿ ಅದಕ್ಕಿಂತ ಅತ್ಯಂತ ಕಿರಿದಾಗಿರುತ್ತವೆ ಹೂವಿನ ತೊಟ್ಟು ಎಲೆಯ ತೊಟ್ಟಿಗಿಂತ ಉದ್ದವಿರುತ್ತದೆ ಹೂವಿನ ದಳಗಳು ಕೇವಲ 1 ಸೆ ಮೀ ಇರುತ್ತದೆ ಕಾಯಿ ದುಂಡಾಗಿರುತ್ತದೆ, ಹೊರಮೈಗೆ ಹೊಳಪಿರುತ್ತದೆ

## ಉಪಯೋಗಗಳು

1 ಸಮೂಲವನ್ನು ಅರೆದು ಕುಡಿಸುವುದರಿಂದ ಜ್ವರ ವಾಸಿಯಾಗುತ್ತದೆ



# ಸಹದೇವಿ

| | |
|---|---|
| ವೈಜ್ಞಾನಿಕ ಹೆಸರು | ವೆರ್ನೋನಿಯ ಸಿನೇರಿಯ<br>(Vernonia cinerea (L ) Less ) |
| ಸಸ್ಯದ ಕುಟುಂಬ | ಆಸ್ಟಿರೇಸಿ (Asteraceae) |
| ಕನ್ನಡದ ಇತರ ಹೆಸರುಗಳು | ಕರೇಹಿಂಡಿ, ಗಾಯದೊಪ್ಪಲು, ದಂಡೊತ್ಪಲ |
| ಇತರ ಭಾಷೆಯ ಹೆಸರುಗಳು | ಸಂ - ಸಹದೇವಿ<br>ಹಿಂ - ಸಹದೇವಿ<br>ತ - ಸಹದೇವಿ<br>ತೆ - ಘರಿತಕಮ್ಮ, ಸಹದೇವಿ<br>ಇಂ - ಆ್ಯಷ್‌ಕಲರ್ಡ್ ಫ್ಲಬೇನ್ |

**ಪರಿಚಯ**

ಈ ಮೂಲಿಕೆಯು ಹುಲ್ಲುಗಾವಲಿನಲ್ಲಿ, ಹೊಲದ ಬದುಗಳಲ್ಲಿ ಮತ್ತು ಬೀಳು ಜಮೀನಿನಲ್ಲಿ ಬೆಳೆಯುತ್ತದೆ ಮೂಲಿಕೆಯ ಕಾಂಡವು ನೆಟ್ಟಗೆ ಬೆಳೆಯುತ್ತದೆ ಮತ್ತು ಕವಲುಗಳಿಂದ ಕೂಡಿರುತ್ತದೆ ಸರಳವಾದ ಅಂಡಾಕಾರದ ಅಥವಾ ಕರ್ಣಿಯಾಕಾರದ ಎಲೆಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ ಕಾಂಡ ಮತ್ತು ಎಲೆಗಳ ಮೇಲೆ ರೋಮಗಳಿರುತ್ತವೆ ಚೆಂಡು ಹೂ ಗೊಂಚಲಿನ ಹೊರಗಡೆ ಸುತ್ತಲೂ ಹೊಳಪಾದ ಸೂಚಿ ಎಲೆಗಳಿರುತ್ತವೆ ಚೆಂಡು ಹೂಗೊಂಚಲಿನ ಹೂಗಳ ಬಣ್ಣ ಕೆಂಪು ಮಿಶ್ರಿತ ನೇರಳೆಯಾಗಿರುತ್ತದೆ

## ಉಪಯೋಗಗಳು

1 ಸಹದೇವಿ ಗಿಡದ ಪಂಚಾಂಗವನ್ನು ಅರೆದು ಊತ ಮತ್ತು ನೋವಿರುವ ಕಡೆ ಲೇಪಿಸುವುದರಿಂದ ಊತ ಮತ್ತು ನೋವು ಕಡಿಮೆಯಾಗುತ್ತದೆ.

2 ಗಿಡದ ರಸ ಅಥವಾ ಚೂರ್ಣ ಸೇವನೆಯಿಂದ ರಕ್ತ ಶುದ್ಧಿಯಾಗುತ್ತದೆ ಮೂಲವ್ಯಾಧಿ ಸಹ ಗುಣವಾಗುತ್ತದೆ.

3 ಗಿಡದ ಚೂರ್ಣ ಸೇವನೆಯಿಂದ ಜ್ವರ ಗುಣವಾಗುತ್ತದೆ ಮತ್ತು ಚರ್ಮ ರೋಗಗಳೂ ಗುಣವಾಗುತ್ತವೆ.

4 ಸ್ವರಸ ಸೇವನೆಯಿಂದ ಮೂತ್ರ ಕೋಶದ ಕಲ್ಲು ಕರಗಿಹೋಗುತ್ತದೆ

5 ಎಲೆಯ ರಸ 5-10 ಮಿ ಲೀ. ಕುಡಿಸುವುದರಿಂದ ಭೇದಿ ನಿಲ್ಲುತ್ತದೆ

6 ಬೀಜದ ಚೂರ್ಣ ಸುಮಾರು 30-60 ಗುಂಜಿತೂಕ ಅಥವಾ ಬೇರಿನ ಚೂರ್ಣ ಸುಮಾರು 15-60 ಗುಂಜಿತೂಕ ಸೇವಿಸುವುದರಿಂದ ಜಂತುಹುಳುಗಳು ಬಿದ್ದುಹೋಗುತ್ತವೆ

7 ಸಮಪ್ರಮಾಣದಲ್ಲಿ ಸಹದೇವಿ ಬೀಜದ ಚೂರ್ಣ ಮತ್ತು ಕರಿಮೆಣಸಿನ ಚೂರ್ಣ ತೆಗೆದುಕೊಂಡು ಚೆನ್ನಾಗಿ ಮಿಶ್ರಮಾಡಿಟ್ಟುಕೊಂಡು ದಿವಸಕ್ಕೊಮ್ಮೆ ಬೆಳಗ್ಗೆ ಒಂದು ಗ್ರಾಂ ಮಿಶ್ರಿತ ಚೂರ್ಣವನ್ನು ಉಗುರು ಬೆಚ್ಚಗಿನ ನೀರಿಗೆ ಹಾಕಿ ಕದಡಿ ಒಂದು ವರ್ಷದವರೆಗೆ ಸೇವಿಸುವುದರಿಂದ ತೊನ್ನು ಮತ್ತು ಸೋರಿಯಾಸಿಸ್ ಎಂಬ ಚರ್ಮರೋಗಗಳು ವಾಸಿಯಾಗುತ್ತವೆ

8 ಬೀಜಗಳನ್ನು ಅರೆದು ತಲೆಗೆ ಹಚ್ಚುವುದರಿಂದ ತಲೆಯ ಹೇನು ನಾಶವಾಗುತ್ತವೆ



# ಸೀತಾಫಲ

| | |
|---|---|
| ವೈಜ್ಞಾನಿಕ ಹೆಸರು | ಅನ್ನೋನ ಸ್ಕ್ವಾಮೋಸ (Annona squamosa L ) |
| ಸಸ್ಯದ ಕುಟುಂಬ | ಅನ್ನೊನೇಸಿ (Annonaceae) |
| ಕನ್ನಡದ ಇತರ ಹೆಸರುಗಳು | ಅಮೃತಫಲ, ಅಮುಚಿಕಾಯಿ, ದುರಂಜಿ |
| ಇತರ ಭಾಷೆಯ ಹೆಸರುಗಳು | ಸಂ - ಗಂದಗಾತ್ರ, ಸೀತಾಫಲ, ಬಹುಬೀಜಕ |
| | ಹಿಂ. - ಷರಿಫ, ಸೀತಾಫಲ್ |
| | ತ - ಸೀತಾಫಲಂ |
| | ತೆ - ಸೀತಾಫಲಮು |
| | ಇಂ - ಕಸ್ಟರ್ಡ್ ಆ್ಯಪಲ್, ಶುಗರ್ ಆ್ಯಪಲ್, ಸ್ವೀಟ್ ಸಾಪ್ |

**ಪರಿಚಯ**

ಈ ಮರದ ತವರೂರು ದಕ್ಷಿಣ ಅಮೇರಿಕಾ, ಅಲ್ಲಿಂದ ಪೋರ್ಚುಗೀಸರ ಮೂಲ ಕ್ರಿ.ಶ. 16ನೇ ಶತಮಾನದ ಸುಮಾರಿನಲ್ಲಿ ಭಾರತಕ್ಕೆ ಆಗಮನವಾಯಿತೆಂದು ಚರಿತ್ರೆಯಿಂದ ತಿಳಿದು ಬರುತ್ತದೆ ಈಗ ಈ ಮರವನ್ನು ತೋಟಗಳಲ್ಲಿ ಹಣ್ಣಿಗಾಗಿ ಬೆಳೆಸಲಾಗುತ್ತಿದೆ

ಈ ಮರವು ಸುಮಾರು 10-20 ಅಡಿ ಎತ್ತರ ಬೆಳೆಯುತ್ತದೆ. ಕಾಂಡದ ಮೇಲೆ ಎಲೆಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ. ಎಲೆಯ ತುದಿ ಸ್ವಲ್ಪ ಚೂಪಾಗಿರುತ್ತದೆ ಇಲ್ಲವೆ ಮೊಂಡಾಗಿರುತ್ತದೆ. ಹಸಿರು ಮಿಶ್ರಿತ ಹಳದಿ ಹೂಗಳು ಎಲೆಯ ಕಂಕುಳಲ್ಲಿ ಒಂಟಿಯಾಗಿ ಇಲ್ಲವೆ ಗುಂಪಾಗಿ ಬಿಡುತ್ತವೆ ಹೂವಿನ ದಳಗಳು ದಪ್ಪನಾಗಿದ್ದು ತಿರುಳಿನಿಂದ ಕೂಡಿರುತ್ತದೆ ಸೀತಾಫಲವು ನೋಡಲು ಒಂದೇ ಹಣ್ಣಿನಂತೆ ಕಂಡರೂ ಅದೊಂದು 'ಸಾಮೂಹಿಕ ಫಲ', ಹಲವಾರು ಸಣ್ಣ ಸಣ್ಣ ಹಣ್ಣುಗಳಿಂದಾಗಿರುತ್ತದೆ ಪ್ರತಿ ಹಣ್ಣಿನಲ್ಲಿರುವ ಬಿಳಿ ತಿರುಳಿನಲ್ಲಿ ಒಂದೊಂದು ಕಪ್ಪನೆಯ ಬೀಜವಿರುತ್ತದೆ



ಚಿತ್ರ 100 ಸೀತಾಫಲ

## ಉಪಯೋಗಗಳು

**ಸೂಚನೆ** ಬೀಜದ ಚೂರ್ಣ ವಿಷಯುಕ್ತವಾಗಿದೆ ಕಣ್ಣಿಗೆ ಬಿದ್ದರೆ ಕಣ್ಣಿನ ದೃಷ್ಟಿ ಹೋಗುತ್ತದೆ.ಎಂದು ಕೀರ್ತಿಕಾರ್ ಮತ್ತು ಬಸುರವರ ಗ್ರಂಥದಲ್ಲಿ ಉಲ್ಲೇಖಿತವಾಗಿದೆ. ಉಪಯೋಗಿಸುವಾಗ ಎಚ್ಚರಿಕೆಯಿಂದ ಉಪಯೋಗಿಸಬೇಕು

1 ಎಲೆಗಳನ್ನು ನೀರು ಹಾಕದೆ ಅರೆದು ಗಾಯಗಳ ಮೇಲೆ ಪಟ್ಟು ಹಾಕುವುದರಿಂದ ಅವು ಬೇಗ ವಾಸಿಯಾಗುತ್ತವೆ ಗಾಯದಲ್ಲಿ ಹುಳುಗಳಿದ್ದರೆ ಸತ್ತುಹೋಗುತ್ತವೆ

2 ಹಣ್ಣಿನ ಬಿಳುವಾದ ತಿರುಳನ್ನು ಕುರ ಮತ್ತು ಹುಣ್ಣಿನ ಮೇಲೆ ಕಟ್ಟಿದರೆ ಅವು ಬೇಗ ಮಾಗಿ ಕೀವು ಹೊರಬಂದು ನೋವು ಕಡಿಮೆಯಾಗುತ್ತದೆ

3 ಬೀಜ ತೆಗೆದ ಎಳೆಯ ಸೀತಾಫಲವನ್ನು ತಿನ್ನುವುದರಿಂದ ಭೇದಿ ಮತ್ತು ರಕ್ತ ಭೇದಿ ವಾಸಿಯಾಗುತ್ತದೆ

4 ಬೀಜವನ್ನು ಪುಡಿಮಾಡಿ ಅದಕ್ಕೆ ತಕ್ಕಷ್ಟು ಹಸಿಕಡಲೆಯ ಹಿಟ್ಟು ಸೇರಿಸಿ ಸ್ನಾನದ ಪುಡಿಯಾಗಿ ಬಳಸುವುದರಿಂದ ಕೂದಲು ಹೊಳವಾಗುತ್ತವೆ

5 ಹಣ್ಣಿನ ಬಿಳುವಾದ ತಿರುಳಿನಿಂದ ತಯಾರಿಸಿದ ರಸವನ್ನು ತಂಪು ಪಾನಿಯವಾಗಿ ಜ್ವರ ಬಂದಾಗ ಕುಡಿಸಬಹುದು

6 ಮೂರ್ಛೆ ಬಿದ್ದವರ ಮೂಗಿಗೆ ಆಗತಾನೆ ಕಿತ್ತು ತಂದ ಸಿತಾಫಲದ ಎಲೆಗಳನ್ನು ಬೆರಳುಗಳಲ್ಲಿ ಹಿಸುಕಿ ಮೂಸಿ ನೋಡಿಸಿದರೆ ಬೇಗ ಎಚ್ಚರಗೊಳ್ಳುತ್ತಾರೆ

7 ಬೀಜಗಳನ್ನು ಅರೆದು ತಲೆಗೆ ಲೇಪಹಾಕಿದರೆ ಹೇನುಗಳಿದ್ದರೆ ಸತ್ತು ಬೀಳುತ್ತವೆ

8 ಎಲೆಯನ್ನು ಅರೆದು ಹೊರಲೇಪನವಾಗಿ ಗೂದೆ ಹೊರಟಿರುವ ಮಕ್ಕಳ ಗೂದೆಯ ಮೇಲೆ ಕಟ್ಟಿದರೆ ಒಳ ಸೇರುತ್ತದೆ.

9 ಸೀತಾಫಲದ ಎಲೆಯನ್ನು ಅರಿಸಿನದ ಕೊಂಬಿನೊಡನೆ ಅರೆದು 7-14 ದಿವಸ ನಾರುಹುಣ್ಣಿನಮೇಲೆ ಲೇಪಿಸುವುದರಿಂದ ನಾರುಹುಣ್ಣು ವಾಸಿಯಾಗುತ್ತದೆ

10 ಬೇರಿನ ಗಂಧವನ್ನು ತಿನ್ನಿಸುವುದರಿಂದ ಬಹಳ ದಿನದ ರಕ್ತ ಭೇದಿ ನಿಲ್ಲುತ್ತದೆ

11 ಮರದ ತೊಗಟೆಯನ್ನು ಅರೆದು ತಿನ್ನಿಸುವುದರಿಂದ ಭೇದಿ ನಿಲ್ಲುತ್ತದೆ

## ಪಶುರೋಗ ಚಿಕಿತ್ಸೆಯಲ್ಲಿ

1. ಎಲೆಗಳನ್ನು ಚೆನ್ನಾಗಿ ಅರೆದು ಪಶುಗಳ ಮೈಗೆ ಲೇಪಹಾಕಿದರೆ ಹೇನುಗಳು ಸತ್ತು ಬೀಳುತ್ತವೆ

2 ಬೀಜಗಳನ್ನು ಅರೆದು ಪಶುಗಳ ಗಾಯುಗಳಿಗೆ ಹಚ್ಚುವುದರಿಂದ ಗಾಯಗಳಲ್ಲಿರುವ ಕೀಡೆಗಳು ಸತ್ತು ಬೀಳುತ್ತವೆ



# ಹಾಗಲ

| | |
|---|---|
| ವೈಜ್ಞಾನಿಕ ಹೆಸರು | ಮೊಮಾರ್ಡಿಕ ಚರಂಶಿಯ (Momordica charantia L.) |
| ಸಸ್ಯದ ಕುಟುಂಬ | ಕುಕುರ್ಬಿಟೇಸಿ (Cucurbitaceae) |
| ಕನ್ನಡದ ಇತರ ಹೆಸರುಗಳು | ಕಹಲಕ್ಕಾಯ, ಮಿಡಿಕಾಯಿ |
| ಇತರ ಭಾಷೆಯ ಹೆಸರುಗಳು | ಸಂ. - ಸುಶಾವಿ<br>ಹಿಂ - ಕರೇಲ<br>ತ - ಪಾವಕ್ಕಚೇಡಿ, ಪಾರಕಾಯಿ<br>ತೆ - ಕಾಕರ<br>ಇಂ - ಕಾರಿಲ್ಲಫ್ರೂಟ್, ಬಿಟ್ಟರ್ ಗೂರ್ಡ್ |

## ಪರಿಚಯ

ಹಾಗಲ ಬಳ್ಳಿಯನ್ನು ಕಾಯಿಗಾಗಿ ತೋಟಗಳಲ್ಲಿ, ಕೈತೋಟಗಳಲ್ಲಿ ಸಾಗುವಳಿ ಮಾಡುತ್ತಾರೆ. ಹಾಗಲ ಕಾಯಿಯನ್ನು ತರಕಾರಿಯಾಗಿ ಬಳಸುತ್ತಾರೆ ಕಾಯಿಗಳನ್ನು ಕೊಯ್ದು ಹೆರಳಿ ಕಾಯಿಯ ಜೊತೆ ಉಪ್ಪಿನಕಾಯಿ ಹಾಕುತ್ತಾರೆ ಹಾಗಲ ಗಿಡದಲ್ಲಿ ಪ್ರಾಕೃತಿಕ ತಳಿಯೊಂದಿದೆ. ಅದು ಸಾಮಾನ್ಯವಾಗಿ ಕುರುಚಲು ಕಾಡುಗಳಲ್ಲಿ ಕಂಡುಬರುತ್ತದೆ ಅದರ ಕಾಯಿಯ ಉದ್ದ ಕೇವಲ 5-7 ಸೆ ಮೀ ಇರುತ್ತದೆ ನೋಡಲು ರುದ್ರಾಕ್ಷಿಯನ್ನು ಹೋಲುತ್ತದೆ. ಆದುದರಿಂದ ಅದನ್ನು ರುದ್ರಾಕ್ಷಿಹಾಗಲ ಎಂದು ಕರೆಯುತ್ತಾರೆ. ಬೇಸಾಯದಲ್ಲಿರುವ ಹಾಗಲ ಬಳ್ಳಿಯಲ್ಲಿ ಬಿಳಿ ಮತ್ತು ಹಸಿರು ಕಾಯಿ ಬಿಡುವ ತಳಿಗಳಿವೆ, ಕಾಯಿಗಳ ಉದ್ದ ಸಾಧಾರಣವಾಗಿ 15 ರಿಂದ 30 ಸೆ.ಮೀ. ಇರುತ್ತದೆ. ಎಲ್ಲಾ ಬಗೆಯ ಹಾಗಲ ಕಾಯಿಗಳನ್ನು ಔಷಧ ತಯಾರಿಕೆಯಲ್ಲಿ ಭೇದವೆಣಿಸದೆ ಬಳಸಬಹುದಾಗಿದೆ.

## ಉಪಯೋಗಗಳು

1 ಹಾಗಲಬಳ್ಳಿಯ ಎಲೆಯು ಕಷಾಯಕ್ಕೆ ಸ್ವಲ್ಪ ಅರಿಸಿನ ಸೇರಿಸಿ ಕುಡಿಯುವುದರಿಂದ ಪದೇ ಪದೇ ತೇಗು ಬರುವುದು ಕಡಿಮೆಯಾಗುತ್ತದೆ ಮತ್ತು ವಾಯು ಬಾಧೆಯಿದ್ದರೂ ಗುಣವಾಗುತ್ತದೆ

2 ಹಾಗಲ ಬಳ್ಳಿಯ ಎಲೆ 1 ತೊಲ, ಮೆಣಸಿನ ಕಾಳು 10-12, ಬೆಳ್ಳುಳ್ಳಿ ಹಿಲಕು 7, ಸ್ವಲ್ಪ ಅಚ್ಚಳೆಣ್ಣೆ (ಎಳ್ಳೆಣ್ಣೆ) ಇವುಗಳನ್ನು ಕಲಸಿ ಅರೆದು ಮುಟ್ಟಾಗಿರುವಾಗ ಮೂರು ದಿವಸ ಬೆಳಗ್ಗೆ ಒಂದು ಹೊತ್ತು ಕುಡಿಸಿ ಹಾಲು ಅನ್ನ ಪಥ್ಯವಿಡಬೇಕು ಇದರಿಂದ ಬಂಜೆಯರಿಗೆ ಮತ್ತು ಮಕ್ಕಳಾಗದವರಿಗೆ ಮಕ್ಕಳಾಗುತ್ತವೆ

3 ಹಾಗಲ ಹೂವಿನ ರಸವನ್ನು ಕಿವಿಗೆ ಹಾಕುವುದರಿಂದ ಕಿವಿಯಿಂದ ಸೋರುವ ಕೀವು ನಿಲ್ಲುತ್ತದೆ.

4 ಹಾವು ಕಡಿದ ಕೂಡಲೇ ಹಾಗಲ ಎಲೆಯ ರಸವನ್ನು ಕುಡಿಸಿದರೆ ವಾಂತಿಯಾಗಿ ವಿಷವು ಇಳಿಯುತ್ತದೆ

5 ಹಾಗಲಕಾಯಿ ಅಥವಾ ಎಲೆಯ ರಸವನ್ನು ಸುಮಾರು 2 ತೊಲದಷ್ಟು ಮಾಡಿಕೊಂಡು 1 ತೊಲ ಕಲ್ಲುಸಕ್ಕರೆ ಸೇರಿಸಿ ಪ್ರಾತಃಕಾಲ ಕುಡಿಯಬೇಕು ಇದೇ ರೀತಿ 7 ದಿವಸ ಕುಡಿಯಲು ರಕ್ತಮೂಲವು ವಾಸಿಯಾಗುತ್ತದೆ ಈ ಚಿಕಿತ್ಸೆಯನ್ನು ಅನೇಕ ಸಾರಿ ಪರೀಕ್ಷಿಸಲ್ಪಟ್ಟಿರುವುದಾಗಿ ಉಲ್ಲೇಖವಿದೆ

6 ಹಾಗಲಎಲೆಯನ್ನು ಅರೆದು, ಸ್ವಲ್ಪ ಸುಣ್ಣ ಸೇರಿಸಿ, ಹರಿತವಾದ ಆಯುಧ ತಗುಲಿ ರಕ್ತಸೋರುವ ಜಾಗದ ಮೇಲೆ ಲೇಪಿಸಿದರೆ ರಕ್ತವು ಕೂಡಲೇ ನಿಂತುಹೋಗುತ್ತದೆ

7 ಹಾಗಲಕಾಯಿ ಅಥವಾ ಎಲೆಯ ರಸಕ್ಕೆ ಸ್ವಲ್ಪ ಜೇನುತುಪ್ಪ ಕೂಡಿಸಿ ಕುಡಿಯುವುದರಿಂದ ಯಕೃತ್ತಿನ (ಲಿವರ್) ವಿಕಾರಗಳು ಶಾಂತವಾಗುತ್ತವೆ

8 ಹಾಗಲ ಎಲೆಯ ರಸಕ್ಕೆ ಸ್ವಲ್ಪ ಮೊಸರು ಕೂಡಿಸಿ ಶರೀರಕ್ಕೆ ಹಚ್ಚಿ ಒಂದು ಗಂಟೆಯ ನಂತರ ಸ್ನಾನಮಾಡುವುದರಿಂದ ಮೈಮೇಲೆದ್ದಿರುವ ಪಿತ್ತದ ಗಂಧೆಗಳು ವಾಸಿಯಾಗುತ್ತವೆ.

9 ಹಾಗಲ ಎಲೆಯ ರಸದಲ್ಲಿ ಮಣಸನ್ನು ತೇಯ್ದು ಕಣ್ಣಿಗೆ ಕಣ್ಕಪ್ಪಿನಂತೆ 7 ದಿವಸ ಲೇಪಿಸುವುದರಿಂದ ನಿಶಾಂಧತ್ವ (ರಾತ್ರಿ ಕುರುಡು) ನಿವಾರಣೆಯಾಗುತ್ತದೆ ನಾಲ್ಕೈದು ದಿನಗಳಲ್ಲೇ ಗುಣ ಕಂಡು ಬರುತ್ತದೆ. ಈ ಚಿಕಿತ್ಸೆಯನ್ನು ಪರೀಕ್ಷಿಸಲ್ಪಟ್ಟಿರುವುದಾಗಿ ಉಲ್ಲೇಖವಿದೆ

10 ಹಾಗಲ ಹೂ 9, ನುಗ್ಗೆ ಹೂ 9 ಮತ್ತು ಕಾಳುಮೆಣಸು 9, ಇವುಗಳನ್ನು ಬಿಸಿನೀರಿನಲ್ಲಿ ಅರೆದು ಕುಡಿಸುವುದರಿಂದ ಛಳಿಜ್ವರ ಮತ್ತು ವಾತ ಜ್ವರ ವಾಸಿಯಾಗುತ್ತವೆ

11 ಹಾಗಲ (ಸಮೂಲದ) ರಸ, ಇದಕ್ಕೆ ಸಮಪ್ರಮಾಣದಷ್ಟು ಈರುಳ್ಳಿ ರಸ ಸೇರಿಸಿ ಪ್ರತಿ ಅರ್ಧ ಗಂಟೆಗೊಮ್ಮೆ 1-2 ಚಮಚ ಸೇವಿಸುವುದರಿಂದ ಕಾಲರ ರೋಗ ಶಮನವಾಗುತ್ತದೆ ಹಾಗಲ ಕಾಯಿಯನ್ನು ಕಾಲರಾ ಕಾಣಿಸಿಕೊಂಡ ಪ್ರದೇಶಗಳಲ್ಲಿ ಹೆಚ್ಚಾಗಿ ತಿನ್ನುವುದೊಳ್ಳೆಯದು. ಕಾಲರಾ ತಡೆಗಾಗಿ ಹಾಗಲಕಾಯಿ ರಸ, ಈರುಳ್ಳಿ ರಸ, ಸಕ್ಕರೆ ಸೇವಿಸುತ್ತಿರಬೇಕು.

12 ಹಾಗಲಸೊಪ್ಪಿನ ರಸ 1 ಪಾವು ಮತ್ತು ಅಷ್ಟೇ ಪ್ರಮಾಣ ತೆಂಗಿನ ಹಾಲು ಸೇರಿಸಿ ಕುದಿಸಿ ಸೇವಿಸಿದರೆ ಭೇದಿಯಾಗಿ ಜಂತುಹುಳುಗಳು ಹೊರಬರುತ್ತವೆ. ವಾರಕ್ಕೊಮ್ಮೆ ಅಥವಾ ಹದಿನೈದು ದಿನಕ್ಕೊಮ್ಮೆ ಈ ಚಿಕಿತ್ಸೆ ಮಾಡಬೇಕು

13 ಹಾಗಲಬೇರು ಮತ್ತು ಬಜೆಯನ್ನು ಸಮಪ್ರಮಾಣ ತೆಗೆದುಕೊಂಡು ಕುಟ್ಟಿ ಹೊತ್ತಿಗೆ ಅರ್ಧ ತೊಲೆಯಂತೆ ಬಿಸಿನೀರಿನೊಡನೆ ಕುಡಿಯುವುದರಿಂದ ಗುಲ್ಮ ಪರಿಹಾರವಾಗುತ್ತದೆ.

14 ಹಾಗಲ ಬಳ್ಳಿಯ ಎಲೆಗಳನ್ನು ಅರೆದು ಅಂಗಾಲಿಗೆ ಹಚ್ಚುವುದರಿಂದ ಅಂಗಾಲು ಉರಿ ಕಡಿಮೆಯಾಗುತ್ತದೆ

15 ಹಾಗಲಸೊಪ್ಪನ್ನು ಅರೆದು ಎದೆಗೆ ಪಟ್ಟು ಹಾಕುವುದರಿಂದ ತಾಯಂದಿರಲ್ಲಿ ಎದೆಹಾಲು ಹೆಚ್ಚಾಗಿ ಉತ್ಪತ್ತಿಯಾಗುತ್ತದೆ.

16 ಹಾಗಲಬೇರನ್ನು ಅರೆದು ಕುಡಿಸುವುದರಿಂದ ಪಾದರಸ ಸೇವನೆಯಿಂದುಂಟಾದ ವಿಷ ಪರಿಹಾರವಾಗುತ್ತದೆ.

17 ದಿವಸಕ್ಕೊಮ್ಮೆ ತಲಾ 5ಗ್ರಾಂನಷ್ಟು ಹಾಗಲ ಎಲೆ, ಬೇವಿನ ಎಲೆ, ಕರಿಬೇವಿನ ಎಲೆ, ತುಳಸಿ ಎಲೆ ಇವುಗಳ ಸೇವನೆಯಿಂದ ಮಧುಮೇಹ ವ್ಯಾಧಿಯು ಹತೋಟಿಗೆ ಬರುತ್ತದೆ

## ಪಶುರೋಗ ಚಿಕಿತ್ಸೆಯಲ್ಲಿ

1 ಹಾಗಲ ಸೊಪ್ಪಿನ ರಸಕ್ಕೆ ಬೋರಿಕ್ ಪೌಡರ್ ಸೇರಿಸಿ ಹಚ್ಚುವುದರಿಂದ ಗಾಯಕ್ಕೆ ಬಿದ್ದಿರುವ ಕೀಡೆಗಳು ನಾಶವಾಗುತ್ತವೆ

2 ಹಾಗಲಸೊಪ್ಪು ಮತ್ತು ಅವರಾಣೆ (ಶಿವಲಿಂಗ) ಗಿಡದ ಸೊಪ್ಪನ್ನು ತಲಾ ಐದೈದು ಹಿಡಿ ತೆಗೆದುಕೊಂಡು ಅರೆದು ಅವರಾಣೆ ಕಡಿದ ಜಾಗದ ಮೇಲೆ ಪಟ್ಟು ಕಟ್ಟಿ ಉಳಿದದ್ದನ್ನು ಹೊಟ್ಟೆಗೆ ಕುಡಿಸುವುದರಿಂದ ಅವರಾಣೆ ಕಡಿದ ವಿಷ ಪರಿಹಾರವಾಗುತ್ತದೆ.



# ಹುಳುಹಿಡುಕನ ಗಿಡ

| | |
|---|---|
| ವೈಜ್ಞಾನಿಕ ಹೆಸರು | ಡ್ರೊಸೀರ ಬರ್ಮಾನ್ನೈ (Drosera burmannii Vahl ) |
| ಸಸ್ಯದ ಕುಟುಂಬ | ಡ್ರೊಸಿರೇಸಿ (Droseraceae) |
| ಕನ್ನಡದ ಇತರ ಹೆಸರುಗಳು | ಕ್ರಿಮಿಭಕ್ಷ, ವೃಷಕಾ |
| ಇತರ ಭಾಷೆಯ ಹೆಸರುಗಳು | ಹಿಂ - ಮುಖಜಾಲಿ<br>ಇಂ - ಸನ್ ಡ್ಯೂ ಪ್ಲಾಂಟ್ |

**ಪರಿಚಯ**

ಇದೊಂದು ಏಕಋತು ಮೂಲಿಕೆ ಈ ಮೂಲಿಕೆಯು ಸಾಮಾನ್ಯವಾಗಿ ಕಡಲಂಚಿನ ಸಸ್ಯಾವರಣದಲ್ಲಿ ಕಂಡುಬರುತ್ತದೆ ಕಳ್ಳಿ ಕುರುಚುಲು ಗಿಡಗಳೊನ್ನೊಳಗೊಂಡ ಸಸ್ಯಾವರಣದ ಸಮೀಪವಿರುವ ಒದ್ದೆ ನೆಲದಲ್ಲಿ, ಕೆರಯಂಗಳದಲ್ಲಿ ಮತ್ತು ಬತ್ತದ ಗದ್ದೆಯಲ್ಲಿ ಕೊಯ್ಲಾದ ಮೇಲೆ ಹುಲುಸಾಗಿ ಬೆಳೆಯುತ್ತದೆ ಕುಬ್ಜವಾದ ಕಾಂಡದ ಮೇಲೆ ಚಮಚದಾಕಾರದ ಎಲೆಗಳು ನೆಲಕ್ಕೆ ಅಂಟಿಕೊಂಡಂತೆ ಹರಡಿರುತ್ತವೆ ಎಳೆಯ ಎಲೆಗಳ ಬಣ್ಣ ಕೆಂಪು ಮಿಶ್ರಿತ ಹಸಿರಾಗಿರುತ್ತದೆ ಅದೇ ಎಲೆಗಳು ಬಲಿತಾಗ ಕೆಂಬಣ್ಣಕ್ಕೆ ತಿರುಗುತ್ತವೆ ಎಲೆಗಳ ಮೇಲೆ ಹಲವಾರು ಗ್ರಂಥಿರೋಮಗಳಿರುತ್ತವೆ ಇವು ಒಂದು ಬಗೆಯ ಪಾಚಕ ರಸವನ್ನು ಸ್ರವಿಸುತ್ತವೆ ಈ ಮೂಲಿಕೆಯು ತನ್ನ ಎಲೆಗಳ ಮೇಲಿರುವ ಗ್ರಂಥಿರೋಮಗಳ ಸಹಾಯದಿಂದ ಸಣ್ಣಸಣ್ಣ ಕೀಟಗಳನ್ನು ಹಿಡಿದು ಜೀರ್ಣಿಸಿಕೊಳ್ಳುತ್ತದೆ ಗಿಡದಲ್ಲಿ ಸಣ್ಣಸಣ್ಣ ಬಿಳಿಬಣ್ಣದ ಹೂಗಳು ಅಂತ್ಯಾರಂಭಿ ಪುಷ್ಪಮಂಜರಿಯಲ್ಲಿರುತ್ತವೆ

## ಉಪಯೋಗಗಳು

1 ಗಿಡದ ಸಮೂಲವನ್ನು ಅರೆದು ಕಾಲಿನ ಆಣಿ (ಕಲ್ಲೂತ್ತು) ಇರುವ ಕಡೆ ಲೇಪಿಸುತ್ತಾರೆ.

2 ಹಗೇವು, ಕಣಜಗಳಲ್ಲಿ ಬಹಳ ಕಾಲ ಬಾಯಿ ಮುಚ್ಚಿದ್ದು ಒಳಗಿನ ಗಾಳಿ ಕೆಟ್ಟಿದ್ದು ಅಂತಹ ಹಗೇವಿನೊಳಗೆ ಇಳಿದು ಹೋದವರು ಮೂರ್ಛೆ ಹೋದಾಗ ಗಿಡದ ಸಮೂಲವನ್ನು ಕುಟ್ಟಿ ಹಿಂಡಿ ರಸಮಾಡಿಕೊಂಡು ಕುಡಿಸುವುದರಿಂದ ಬೇಗ ಎಚ್ಚರಗೊಳ್ಳುತ್ತಾರೆ

3 ಸಮೂಲದ ರಸವನ್ನು ಮೊಸರಿನೊಡನೆ ಕುಡಿಸುವುದರಿಂದ ಮೂತ್ರ ತಡೆ ಗುಣವಾಗುತ್ತದೆ.

4 ಮಕ್ಕಳ ನಾಯಿಕೆಮ್ಮಿಗೆ ಗಿಡದ ಸ್ವರಸವನ್ನು ಕುಡಿಸುತ್ತಾರೆ

# ಹೊನಗೊನ್ನೇ ಸೊಪ್ಪು

| | |
|---|---|
| ವೈಜ್ಞಾನಿಕ ಹೆಸರು | ಆಲ್ಟರ್‌ನ್ಯಾಂಥೀರ ಸೆಸ್ಸಿಲಿಸ್ (Alternanthera sessılıs (L ) R Br ) |
| ಸಸ್ಯದ ಕುಟುಂಬ | ಅಮರಾಂಥೇಸಿ (Amaranthaceae) |
| ಕನ್ನಡದ ಇತರ ಹೆಸರುಗಳು | ಹಸಿರು ಹೊನಗೊನ್ನೆ, ಹೊನಗೊನೆ |
| ಇತರ ಭಾಷೆಯ ಹೆಸರುಗಳು | ಸಂ - ಮತ್ಸ್ಯಾಕ್ಷಿ<br>ಹಿಂ - ಮಕ್ಸೀ, ಮಛೇಛೀ<br>ತ - ಪೊನ್ನಗನ್ನೈ - ಕೀರೈ<br>ತೆ - ಪೊನ್ನಗಂಟಾಕು, ಪೊನ್ನಗಂಟಕುರ<br>ಇಂ - ಆಲ್ಟರ್ ನ್ಯಾಂಥೀರ |

**ಪರಿಚಯ**

ಈ ಗಿಡವು ರಾಜ್ಯದ ಉಷ್ಣಪ್ರದೇಶಗಳಲ್ಲಿನ ಒದ್ದೆಭೂಮಿಯಲ್ಲಿ, ಗದ್ದೆ ಬಯಲಿನಲ್ಲಿ ಮತ್ತು ಕೆರೆಯಂಗಳದಲ್ಲಿ ಹುಲುಸಾಗಿ ಬೆಳೆಯುತ್ತದೆ. ಇದನ್ನು ಸೊಪ್ಪುತರಕಾರಿಯಂತೆ ಕೆಲವು ಕಡೆ ಬಳಸುತ್ತಾರೆ ಗಿಡವು ಕವಲೊಡೆದು ನೆಲದ ಮೇಲೆ ಹರಡಿ ಬೆಳೆಯುತ್ತದೆ. ನೆಲಕ್ಕೆ ತಾಗುವ ಗೆಣ್ಣಿನಲ್ಲಿ ಬೇರುಗಳು ಮೊಳೆತು ಕಾಂಡವನ್ನು ನೆಲಕ್ಕೆ ಭದ್ರಪಡಿಸುತ್ತವೆ ಕಾಂಡದ ಮೇಲೆ ರಸಭರಿತವಾದ, ನೀಳವಾದ, ಸರಳವಾದ ಮತ್ತು ಹೊಳಪಾದ ಎಲೆಗಳು ಅಭಿಮುಖವಾಗಿ ಜೋಡಣೆಯಾಗಿರುತ್ತವೆ ಎಲೆಯ ಕಂಕುಳಲ್ಲಿ ಅಣ್ಣೆಸೊಪ್ಪಿನ ಹೂಗೊಂಚಲಿನಂತಿರುವ ಸಣ್ಣ ಹೂಗೊಂಚಲಿರುತ್ತದೆ.

## ಉಪಯೋಗಗಳು

1 ಹೊನಗೊನ್ನೇ ಬೇರನ್ನು 2 ತೊಲದಷ್ಟು ತೆಗೆದುಕೊಂಡು ¼ ಸೇರು ಆಡಿನ ಹಾಲಿನಲ್ಲಿ ಅರೆದು ಸೋಸಿ ದಿವಸಕೊಮ್ಮೆ ಕುಡಿಸುವುದರಿಂದ ಬಂದಾದ ಮೂತ್ರ ಸಲೀಸಾಗಿ ಹೊರಬರುತ್ತದೆ.

2 ಹೊನಗೊನ್ನೇ ಸೊಪ್ಪಿನ ಪಲ್ಯಮಾಡಿ ತಿನ್ನುವುದರಿಂದ, ಜ್ವರ ಬಿಟ್ಟ ನಂತರ ರುಚಿಕೆಟ್ಟ ಬಾಯಿಗೆ ರುಚಿಯುಂಟು ಮಾಡುತ್ತದೆ 8 ದಿವಸ ಬಿಡದೆ ತಿನ್ನುವುದೊಳ್ಳೆಯದು

3 ಹೊನಗೊನ್ನೇ ಸೊಪ್ಪಿನ ರಸ 2 ತೊಲ, ಮೂಲಂಗಿ ಸೊಪ್ಪಿನ ರಸ 2 ತೊಲ ತೆಗೆದುಕೊಂಡು ಮಿಶ್ರಮಾಡಿ ಸ್ವಲ್ಪ ಸೈಂಧಲವಣ ಸೇರಿಸಿ ಕುಡಿಯುವುದರಿಂದ ಮೂಲವ್ಯಾಧಿಯು ಗುಣವಾಗುತ್ತದೆ

4 ಹೊನಗೊನ್ನೇಸೊಪ್ಪಿನ ರಸದಲ್ಲಿ ಉತ್ತರಾಣಿ ಬೇರನ್ನು ತೇಯ್ದು ಕಣ್ಣುಗಳಿಗೆ ಹಚ್ಚುವುದರಿಂದ ಕಣ್ಣಿನ ಪೊರೆ ನಿವಾರಣೆಯಾಗುತ್ತದೆ

5 ಹೊನಗೊನ್ನೇ ಗಿಡವನ್ನು ಬೇರು ಸಹಿತ ಕಿತ್ತು ತಂದು 1 ಸೇರಿನಷ್ಟು ರಸಮಾಡಿಕೊಂಡು ಅದಕ್ಕೆ 1 ಪಾವು ಎಳ್ಳೆಣ್ಣೆಯನ್ನು ಹಾಕಿ ಕಾಯಿಸಿ ರಸವೆಲ್ಲ ಇಂಗಿದ ಮೇಲೆ ಇಳಿಸಿಕೊಂಡು ಎಣ್ಣೆಯನ್ನು ಶೋಧಿಸಿಕೊಂಡು ಸಂಗ್ರಹಿಸಿಟ್ಟಕೊಳ್ಳಬೇಕು ಈ ಎಣ್ಣೆಯನ್ನು ತಲೆಗೆ ಹಚ್ಚುವುದರಿಂದ ಮೆದುಳು ಮತ್ತು ಕಣ್ಣುಗಳ ಉಷ್ಣತೆಯು ಕಡಿಮೆಯಾಗಿ ಬಲ ಮತ್ತು ತೇಜಸ್ಸು ಹೆಚ್ಚಾಗುತ್ತದೆ ಈ ಎಣ್ಣೆಯನ್ನು ಬೆಂದ ಗಾಯದ ಮೇಲೆ ಹೊರಲೇಪನವಾಗಿಯೂ ಸಹ ಬಳಸಬಹುದು

6 ಹೊನಗೊನ್ನೇ ಗಿಡದ ಎಲೆ 2 ಹಿಡಿಯಷ್ಟು ತೆಗೆದುಕೊಂಡು ಅದಕ್ಕೆ ಅವರೆಕಾಳು ಗಾತ್ರದ ಆರತಿಕರ್ಪೂರ ಸೇರಿಸಿ ನಯವಾಗಿ ಅರೆದು ಮುಲಾಮಿನಂತೆ ಮಾಡಿಕೊಂಡು ಎಲ್ಲಾ ಬಗೆಯ ಗಾಯಗಳಿಗೆ ಹೊರಲೇಪನವಾಗಿ ಬಳಸಬಹುದು.

7 ಹೊನಗೊನ್ನೇ ಬೇರಿನ ರಸ 1 ತೊಲದಷ್ಟು ತೆಗೆದುಕೊಂಡು ಅದಕ್ಕೆ ಸ್ವಲ್ಪ ಬೆಲ್ಲ ತುಪ್ಪ ಸೇರಿಸಿ, ಸ್ತ್ರೀಯರು ಕುಡಿಯುವುದರಿಂದ ರಕ್ತಪ್ರದರ

ಗುಣವಾಗುತ್ತದೆ ಈ ಔಷಧಿಯನ್ನು ದಿವಸಕೊಮ್ಮೆಯಂತೆ 3 ದಿವಸ ಕುಡಿಯಬೇಕು

8 ಹೊನಗೊನ್ನೇ ಬೇರನ್ನು ಆಡಿನ ಹಾಲಿನಲ್ಲಿ ಅರೆದು ಕುಡಿಯುವುದರಿಂದ ಬಹುಮೂತ್ರ ರೋಗವಾಸಿಯಾಗುತ್ತದೆ. ಇದನ್ನೇ ಮಕ್ಕಳಲ್ಲಿ ಕಾಣಿಸಿಕೊಳ್ಳುವ ಉರಿಮೂತ್ರಕ್ಕೂ ಸಹ ಕೊಡಬಹುದು.

9 ಹೊನಗೊನ್ನೇ ಸೊಪ್ಪಿನ ರಸ 2 ತೊಲ, ಮೂಲಂಗಿ ಸೊಪ್ಪಿನ ರಸ 2 ತೊಲ ತೆಗೆದುಕೊಂಡು ಒಂದು ಚಿಟಿಕಿ ಸೈಂಧಲವಣ ಸೇರಿಸಿ ದಿವಸಕ್ಕೆ ಎರಡು ಹೊತ್ತಿನಂತೆ 2-3 ವಾರ ಸೇವಿಸಿದರೆ ಮೂಲವ್ಯಾಧಿ ಪರಿಹಾರವಾಗುತ್ತದೆ

10 ಹೊನಗೊನ್ನೇ ಸೊಪ್ಪಿನ ಸಾರು ಅಥವಾ ಪಲ್ಯ ಮಾಡಿ ಆಗಾಗ್ಗ ಸೇವಿಸುವುದರಿಂದ ಕಣ್ಣುಗಳ ವ್ಯಾಧಿಗಳು ಬರುವುದಿಲ್ಲ ದೃಷ್ಟಿ ಮಾಂದ್ಯ ಉಂಟಾಗದು

11 ಹೊನಗೊನ್ನೇ ಸೊಪ್ಪಿನ ರಸವನ್ನು ಒಂದು ಹೆಂಚಿಗೆ ಹಲವು ಸಲ ಸವರಿ ಒಣಗಿಸಿಟ್ಟು ಕೊಳ್ಳುವುದು ಅದರ ಮೇಲೆ ಹಸುವಿನ ತುಪ್ಪ ಹಾಕಿ ಉರಿಸಿದ ದೀಪದಿಂದ ಬರುವ ಕಾಡಿಗೆಯನ್ನು ರಸ ಲೇಪಿಸಿ ಆಗಲೇ ಒಣಗಿಸಿಟ್ಟು ಕೊಂಡಿದ್ದ ಹೆಂಚಿನ ಮೇಲೆ ಶೇಖರಿಸಿಕೊಂಡು ಆ ಕಾಡಿಗೆಯನ್ನು ಹಸುವಿನ ತುಪ್ಪದಲ್ಲಿಯೇ ಕಲಸಿ. ಕಣ್ಣು ಕಪ್ಪಾಗಿ ಉಪಯೋಗಿಸುತ್ತಾರೆ ಇದರಿಂದ ಕಣ್ಣುಗಳು ಆರೋಗ್ಯ ಪೂರ್ಣವಾಗುತ್ತವೆ.

## ಪಶುರೋಗ ಚಿಕಿತ್ಸೆಯಲ್ಲಿ

ಸುಮಾರು 5-6 ಹಿಡಿ ಹೊನಗೊನ್ನೇ ಸೊಪ್ಪನ್ನು ನೀರಿನೊಡನೆ ಅರೆದು ಒಂದು ಬಾರಿಗೆ ಕುಡಿಸಬೇಕು ಹಾಗೆಯೇ ದಿವಸಕ್ಕೆ ಎರಡು ಬಾರಿಯಂತೆ 4-5 ದಿವಸ ಕುಡಿಸುವುದರಿಂದ ಶಿಲ್ಕು ಮೂತ್ರ ನಿವಾರಣೆಯಾಗುತ್ತದೆ



# ಹೊಮ್ಮುಗ್ಗಳಿ

| | | |
|---|---|---|
| ವೈಜ್ಞಾನಿಕ ಹೆಸರು | : | ಸ್ಪೈಲಾಂಥೆಸ್ ಕ್ಲಾವ<br>(Spilanthes clava DC )<br>= ಸ್ಪೈ. ಆಕ್‌ಮೆಲ್ಲ<br>(= S acmella auct non (L ) Murr ) |
| ಸಸ್ಯದ ಕುಟುಂಬ | | ಆಸ್ಟಿರೇಸಿ (Asteraceae) |
| ಕನ್ನಡದ ಇತರ ಹೆಸರುಗಳು | | ಆಚಾರ ಜೊಂಡಿ, ಸಣ್ಣ ವನಮುಗುಳಿ |
| ಇತರ ಭಾಷೆಯ ಹೆಸರುಗಳು | | ತೆ. - ಮರಾಟಿಮೊಗ್ಗ, ಮರಾತ್ತಿಗೆ<br>ಇಂ. - ಬಟನ್ ಫ್ಲವರ್, ಪಾರಾ ಕ್ರೆಸ್ |

**ಪರಿಚಯ**

ಈ ಮೂಲಿಕೆಯು ಕೆರೆಯಂಗಳ, ಕಾಲುವೆ ಅಂಚು, ತೇವದ ನೆಲದಲ್ಲಿ, ಬತ್ತದ ಮತ್ತು ಕಬ್ಬಿನ ಗದ್ದೆಯ ಬದುಗಳಲ್ಲಿ ಬೆಳೆಯುತ್ತದೆ. ಈ ಗಿಡವು ಒಂದು ಏಕ ಋತು ಮೂಲಿಕೆ ಗಿಡದ ಕಾಂಡವು ಬುಡದಲ್ಲಿ ಕವಲೊಡೆದು ಬೆಳೆಯುತ್ತದೆ. ಈ ಕವಲುಗಳು ಸಾಮಾನ್ಯವಾಗಿ ಹರಡಿಕೊಂಡು ಬೆಳೆಯುತ್ತವೆ. ಅಂಡ ಭರ್ಜಿಯಾಕಾರದ ಎಲೆಗಳು ಕಾಂಡದ ಮೇಲೆ ಅಭಿಮುಖವಾಗಿ ಜೋಡಣೆಯಾಗಿರುತ್ತವೆ. ಎಲೆಯಲ್ಲಿ ಮೂರು ಪತ್ರ ನರಗಳು ಪ್ರಮುಖವಾಗಿ ಕಾಣಸುತ್ತವೆ. ಎಲೆಯ ಕಂಕುಳಲ್ಲಿ ಅಥವಾ ಕಾಂಡದ ತುದಿಯಲ್ಲಿ ಕೋನಾಕಾರದ ಹೂವಿನ ಚಂಡಿರುತ್ತದೆ.

ಹೂವಿನ ಚಂಡನ್ನು ಬಾಯಿಗೆ ಹಾಕಿಕೊಂಡು ಅಗಿದು ತಿಂದಾಗ ನಾಲಿಗೆಯಲ್ಲಿ ಒಂದು ರೀತಿಯ ಕಡಿತದ ಅನುಭವವಾಗುತ್ತದೆ.



ಚಿತ್ರ 104 ಹೊಮ್ಮುಗ್ಗಳಿ

## ಉಪಯೋಗಗಳು

1 ಹೂವಿನ ಚೆಂಡನ್ನು ಅಗಿದು ಬಾಯಿಯಲ್ಲಿ ರಸವಿಟ್ಟುಕೊಳ್ಳುವುದರಿಂದ ಹಲ್ಲುನೋವು ಕಡಿಮೆಯಾಗುತ್ತದೆ ಗಂಟಲು ಕಟ್ಟಿರುವುದು ಮತ್ತು ಗಂಟಲಕೆರೆತ ಗುಣವಾಗುತ್ತದೆ

2 ಸಮೂಲವನ್ನು ನೀರಿನಲ್ಲಿ ಬೇಯಿಸಿ, ಬೆಂದ ಸೊಪ್ಪನ್ನು ತಿಂದು ಉಳಿದ ನೀರನ್ನು ಕುಡಿಯುವುದರಿಂದ, ಭೇದಿಯಾಗುವುದು ನಿಲ್ಲುತ್ತದೆ

3 ನೀರಿನಲ್ಲಿ ಆಟವಾಡಿದ ಮಕ್ಕಳ ಕಾಲಿನ ಚರ್ಮದಲ್ಲಿ ನವೆ ಕಾಣಿಸಿಕೊಂಡಾಗ ಎಲೆಯನ್ನು ಅರೆದು ಲೇಪಿಸುವುದರಿಂದ ನವೆ ಕಡಿಮೆಯಾಗುತ್ತದೆ

4 ಎಲೆಯ ರಸ ಅಥವಾ ಕಷಾಯವನ್ನು ಕಜ್ಜಿ ಮತ್ತು ಸೊರಿಯಾಸಿಸ್ ರೋಗವುಳ್ಳವರು ಮೈಗೆ ಲೇಪಿಸಿಕೊಳ್ಳುವುದರಿಂದ ಅವು ಬೇಗ ವಾಸಿಯಾಗುತ್ತದೆ

5 ಬೇರಿನ ಕಷಾಯ ಸೇವನೆ ಭೇದಿಕಾರಕವಾಗಿ ಕೆಲಸಮಾಡುತ್ತದೆ

6 ಎಲೆಯ ಕಷಾಯವನ್ನು ಸಂಧಿವಾತದ ಊತವಿರುವ ಕಡೆ ತೊಳೆಯಲು ಬಳಸುವುದರಿಂದ ಅಥವಾ ಲೇಪಿಸುವುದರಿಂದ ಸಂಧಿವಾತ ಕಡಿಮೆಯಾಗುತ್ತದೆ.





ಚಿತ್ರ 105 : ಹೊಂಗೆಮರ - ಹೂ ಮತ್ತು ಕಾಯಿಯಿರುವ ರೆಂಬೆ

# ಹೊಂಗೆಮರ

| | |
|---|---|
| ವೈಜ್ಞಾನಿಕ ಹೆಸರು | ಪೊಂಗಾಮಿಯ ಪಿನ್ನಾಟ<br>(Pongamia pinnata (L ) Pierre)<br>= ಪೊ ಗ್ಲಾಬ್ರ (= P glabra Vent ) |
| ಸಸ್ಯದ ಕುಟುಂಬ | ಫ್ಯಾಬೇಸಿ (Fabaceae) |
| ಕನ್ನಡದ ಇತರ ಹೆಸರುಗಳು | ಕನಗ, ಕೊರಿಂಟ, ಪೊಂಗೆ, ಬಟ್ಟ |
| ಇತರ ಭಾಷೆಯ ಹೆಸರುಗಳು | ಸಂ - ಕರಂಜ, ಸ್ನಿಗ್ಧಪತ್ರ, ಕಾಲಸ್ಕಂದ, ತಮಾಲ, ತಾಪಿಚ್ಛ<br>ಹಿಂ - ಕಂಜ, ಕರಂಜ<br>ತ - ಪುಂಗೈ, ಪೊಂಗ<br>ತೆ - ಕಾನುಗಲು<br>ಇಂ - ಇಂಡಿಯ ಬೀಚ್, ಪುಂಗಾಯಿಲ್ ಟ್ರೀ |

## ಪರಿಚಯ

ಈ ಮರವು ಬೇಸಿಗೆಯಲ್ಲಿ ಎಲೆಯುದುರುವ ಮಲೆನಾಡಿನ ಸಸ್ಯಾವರಣ, ಬೇಸಿಗೆಯಲ್ಲಿ ಎಲೆಯುದುರುವ ಮೈದಾನ ಸೀಮೆಯ ಒಣ ಸಸ್ಯಾವರಣ ಮತ್ತು ಕಳ್ಳಿಕುರುಚಲು ಗಿಡಗಳನ್ನೊಳಗೊಂಡ ಸಸ್ಯಾವರಣದಲ್ಲಿ ಕಂಡು ಬರುತ್ತದೆಯಾದರೂ ಈ ಮರವನ್ನು ಹಳ್ಳಿಗಳಲ್ಲಿ ಹಸಿರುಗೊಬ್ಬರಕ್ಕಾಗಿ, ಬೀಜದಿಂದ ಬರುವ ಎಣ್ಣೆಗಾಗಿ ಹೆಚ್ಚಾಗಿ ಬೆಳೆಸುತ್ತಾರೆ ಈ ಮರವು ಸುಮಾರು 30-40 ಅಡಿ ಎತ್ತರಕ್ಕೆ ಬೆಳೆಯುತ್ತದೆ. ಸಂಯುಕ್ತ ಪತ್ರಗಳು ಪರ್ಯಾಯವಾಗಿ ಜೋಡಣೆಯಾಗಿರುತ್ತವೆ ಒಂದು ಸಂಯುಕ್ತ ಪತ್ರದಲ್ಲಿ 5-9 ಕಿರುಪತ್ರಗಳಿರುತ್ತವೆ. ಮಾರ್ಚ್-ಏಪ್ರಿಲ್ ತಿಂಗಳ ವೇಳೆಗೆ ಮರ ಹೂ ಬಿಡುತ್ತದೆ. ಬಿಳುಪಾದ ಹೂವಿನ ದಳಗಳ ಮೇಲೆ ಅಲ್ಲಲ್ಲಿ ಕೆಂಪು ಗೆರೆಗಳಿರುತ್ತವೆ. ಅಂಡಾಕಾರದ ಕಾಯಿಯ ಉದ್ದ ಸಾಮಾನ್ಯವಾಗಿ1 ½ ಯಿಂದ

2 ಅಂಗುಲ ಇರುತ್ತದೆ ಒಂದು ಕಾಯಿಯಲ್ಲಿ ಸಾಧಾರಣವಾಗಿ ಒಂದು ಬೀಜವಿರುತ್ತದೆ.

## ಉಪಯೋಗಗಳು

1 ಹೊಂಗೆ ಹೂವನ್ನು ತುಪ್ಪದಲ್ಲಿ ಹುರಿದು, ನಂತರ ಪುಡಿ ಮಾಡಿಟ್ಟುಕೊಂಡು ಬೆಳಗ್ಗೆ-ಸಂಜೆ ಎರಡು ಹೊತ್ತು ಆರು ವಾರ ಸೇವಿಸಿದರೆ ಸಕಲ ಮೇಹರೋಗಗಳು ವಾಸಿಯಾಗುತ್ತವೆ.

2 ಹೊಂಗೆಯ ಪಂಚಾಂಗಗಳನ್ನು ಅರೆದು ಹಾಲು ಸೇರಿಸಿ ಕುಡಿಯುವುದರಿಂದ ಪಾಂಡುರೋಗ ಗುಣವಾಗುತ್ತದೆ ದೇಹಕ್ಕೆ ಬಲವೂ ಬರುತ್ತದೆ

3 ಹೊಂಗೆಯ ಪಂಚಾಂಗದ ಚೂರ್ಣಕ್ಕೆ ತುಪ್ಪ ಸೇರಿಸಿ ತಿನ್ನುವುದರಿಂದ ವಾತ ಸಂಬಂಧದ ವ್ಯಾದಿಗಳು ಗುಣವಾಗುತ್ತವೆ

4 ಹೊಂಗೆಯ ಪಂಚಾಂಗಗಳನ್ನು ಅರೆದು ಅದಕ್ಕೆ ಎಳ್ಳೆಣ್ಣೆ ಸೇರಿಸಿ ಕಾಯಿಸಿ ಎಣ್ಣೆ ಮಾತ್ರ ಉಳಿಸಿಕೊಂಡು ಬಾಟಲ್ ನಲ್ಲಿ ಸಂಗ್ರಹಿಸಿಟ್ಟುಕೊಳ್ಳಬೇಕು ಈ ತೈಲವನ್ನು ಹಚ್ಚುವುದರಿಂದ ಚರ್ಮವ್ಯಾಧಿಗಳು ವಾಸಿಯಾಗುತ್ತವೆ

5 ಹೊಂಗೆ ಬೀಜವನ್ನು ನೀರಿನಲ್ಲಿ ನೆನೆಸಿಟ್ಟು ಸಿಪ್ಪೆ ಸುಲಿದು, ಒಣಗಿಸಿ, ಕುಟ್ಟಿ ವಸ್ತ್ರಗಾಳಿಕ ಚೂರ್ಣ ಮಾಡಿಕೊಂಡು ಹೊತ್ತಿಗೆ 5-6 ಗುಂಜಿ ತೂಕದಷ್ಟು ಚೂರ್ಣವನ್ನು ತೆಗೆದುಕೊಂಡು ಜೇನುತುಪ್ಪದಲ್ಲಿ ಕಲಸಿ ದಿವಸಕ್ಕೆ 3-4 ಬಾರಿ ಸೇವಿಸುವುದರಿಂದ ಮಲೇರಿಯ ಜ್ವರ ವಾಸಿಯಾಗುತ್ತದೆ

6 ಹೊಂಗೆಯ ಚಿಗುರೆಲೆ 4 ತೊಲದಷ್ಟನ್ನು ತುಪ್ಪದಲ್ಲಿ ಹುರಿದು ರಾಗಿಯ ಹುರಿಹಿಟ್ಟನೊಡನೆ ಸೇರಿಸಿ ಬೆಲ್ಲ ಮತ್ತು ತುಪ್ಪದೊಡನೆ ಕಲಸಿ ತಿನ್ನುವುದರಿಂದ ಮೂಲವ್ಯಾಧಿ ನಿವಾರಣೆಯಾಗುತ್ತದೆ ಕೆಲವರಿಗೆ ರಾಗಿಯ ಹುರಿಹಿಟ್ಟು ಮೂಲವ್ಯಾಧಿಯನ್ನು ಕೆರಳಿಸುತ್ತದೆ ಆದರೆ ಈ ಪ್ರಯೋಗದಿಂದ ಅಂತಹವರಿಗೂ ತೊಂದರೆಯಾಗುವುದಿಲ್ಲ ಹಾಗೊಮ್ಮೆ ತೊಂದರೆಯಾದಲ್ಲಿ ಅಕ್ಕಿಯ ಹುರಿಹಿಟ್ಟನ್ನೇ ಉಪಯೋಗಿಸಬಹುದು ಈ ಪ್ರಯೋಗವನ್ನು 2-3 ತಿಂಗಳು ಅನುಸರಿಸಬೇಕು

7 ಹೊಂಗೆಯ ಚಿಗುರೆಲೆಯ ರಸ 2 ಚಮಚಕ್ಕೆ, ಎರಡು ಗುಂಜಿ ತೂಕ ಕಾಳುಮೆಣಸಿನ ಚೂರ್ಣ ಸೇರಿಸಿ ನಿತ್ಯ ಬೆಳಗ್ಗೆ ಸಂಜೆ ಸೇವಿಸಿದರೆ ಕಫ ಕಡಿಮೆಯಾಗಿ ಕೆಮ್ಮೂ ಸಹ ಕಡಿಮೆಯಾಗುತ್ತದೆ

8 ಹೊಂಗೆಯ ಸಮೂಲದ ಚೂರ್ಣ 2 ½ ಗುಂಜಿಯಷ್ಟು ತೆಗೆದುಕೊಂಡು ಅದಕ್ಕೆ ಬಿಳಿಗಾರದ ಹರಳು 1 ಗುಂಜಿಯಷ್ಟು ಸೇರಿಸಿ ಈ ಎರಡನ್ನು ಒಂದು ಚಮಚ ಜೇನಿನೊಡನೆ ಕಲಸಿ ನಿತ್ಯ ಎರಡುಹೊತ್ತು ಒಂದುವಾರ ಸೇವಿಸುವುದರಿಂದ ನಾಯಿಕೆಮ್ಮು ವಾಸಿಯಾಗುತ್ತದೆ.

9 ಹೊಂಗೆಯ ಎಣ್ಣೆ 6 ತೊಲದಷ್ಟು ತೆಗೆದುಕೊಂಡು ಅದಕ್ಕೆ 1 ½ ತೊಲ ಆರತಿ ಕರ್ಪೂರ ಮಿಶ್ರಮಾಡಿ ಬಿಸಿಮಾಡಿಟ್ಟುಕೊಂಡು ಆ ಎಣ್ಣೆಯನ್ನು ಹಚ್ಚಿ ತಿಕ್ಕುವುದರಿಂದ ಸಂಧಿವಾತ (ಆಮವಾತ) ನಿವಾರಣೆಯಾಗುತ್ತದೆ

10 ಒಂದು ಹಿಡಿ ಹೊಂಗೆ ಎಲೆಯ ಅಷ್ಟಾವಶೇಷ ಕಷಾಯ ತಯಾರಿಸಿಕೊಂಡು ನಿತ್ಯ ಎರಡು ಹೊತ್ತಿನಂತೆ 4-6 ತಿಂಗಳು ಸೇವಿಸುತ್ತಾ ಗಾಯಕ್ಕೆ ಹೊಂಗೆಯ ಎಣ್ಣೆಯನ್ನೇ ಹಚ್ಚುತ್ತಾ ಬರುವುದರಿಂದ ಭಯಂಕರವಾದ ಕುಷ್ಠರೋಗವೂ ವಾಸಿಯಾಗುತ್ತದೆ ಈ ಕಾಲದಲ್ಲಿ ಸ್ನಾನವನ್ನೂ ಕೂಡ ಹೊಂಗೆಯ ಸೊಪ್ಪಿನ ಕಷಾಯದಿಂದಲೇ ಮಾಡುತ್ತಿರಬೇಕು

11 ಹೊಂಗೆಯ ಬೀಜವನ್ನು ಹಾಲಿನಲ್ಲಿ ತೇಯ್ದು ಮುಖಕ್ಕೆ ನಿತ್ಯ ರಾತ್ರಿ ಹಚ್ಚಿ ಬೆಳಗ್ಗೆ ತೊಳೆಯುವುದರಿಂದ ಮುಖ ಕಾಂತಿಯುಕ್ತವಾಗುತ್ತದೆ.

12 ಹೊಂಗೆಯ ತೊಗಟೆಯನ್ನು ಅರೆದು ಲೇಪಿಸುವುದರಿಂದ ವಿಸರ್ಪ ಪರಿಹಾರವಾಗುತ್ತದೆ.

13 ಹೊಂಗೆಯ ಚಿಗುರೆಲೆಗಳನ್ನು ಸುಟ್ಟು ಕರಕು ಮಾಡಿ ಜೇನುತುಪ್ಪದಲ್ಲಿ (1-2 ಚಿಟಿಕೆ ಪ್ರಮಾಣ) ದಿನಕ್ಕೆ 2-3 ಸಲ ಕೊಡುವುದರಿಂದ ವಾಂತಿ ಮತ್ತು ಗರ್ಭಿಣಿಯರ ವಾಂತಿಯೂ ಸಹ ನಿಲ್ಲುತ್ತದೆ

## ಪಶುರೋಗ ಚಿಕಿತ್ಸೆಯಲ್ಲಿ

1 ಹೊಂಗೆ ಚಕ್ಕೆ, ದೊಡ್ಡಮರದ ಚಕ್ಕೆ ಮತ್ತು ಹೂವರಸಿ ಚಕ್ಕೆ ಇವುಗಳನ್ನು ಸಮನಾಗಿ ತೆಗೆದುಕೊಂಡು ಕುಟ್ಟಿ ಪುಡಿಮಾಡಿಕೊಳ್ಳಬೇಕು. ಈ ಪುಡಿಗೆ, ಪುಡಿ ಮಾಡಿದ ಬಾಲ ಮೆಣಸು, ಅರಿಶಿನ, ಉಪ್ಪು ಮತ್ತು ಲವಂಗ ತಲಾ 5 ತೊಲ ಪ್ರಮಾಣದಷ್ಟು ಸೇರಿಸಿ ಈ ಮಿಶ್ರಣವನ್ನು ಮಣ್ಣಿನ ಮಡಿಕೆಯಲ್ಲಿಟ್ಟು 6 ಸೇರು ನೀರು ಸೇರಿಸಿ ಕಾಯಿಸಿ 3 ಸೇರಿನಷ್ಟು ಕಷಾಯ ಉಳಿಸಿಕೊಂಡು ದಿವಸಕ್ಕೆ 1½ ಪಾವಿನಂತೆ ಕೆಲವು ದಿವಸ ಕುಡಿಸುವುದರಿಂದ ಕೆಮ್ಮು, ದಮ್ಮು, ಗೂರಲು ಕಡಿಮೆಯ್ಯಾಗುತ್ತದೆ.

2 ಹೊಂಗೆಮರದ ಚಕ್ಕೆ, ಇಂಗಳಾರದ ಚಕ್ಕೆ, ದೊಡ್ಡಮರದ ಚಕ್ಕೆ, ಹೂವರಸಿ ಚಕ್ಕೆ, ತಪಸಿ ಚಕ್ಕೆ ತಲಾ 100 ಗ್ರಾಂ ನಂತೆ ತೆಗೆದುಕೊಂಡು ಅದಕ್ಕೆ ತಲಾ 50 ಗ್ರಾಂ ನಂತೆ ಬಾಲಮೆಣಸು ಮತ್ತು ಲವಂಗ ಸೇರಿಸಿ ಕುಟ್ಟಿ ನೀರಿನಲ್ಲಿ ಕದಡಿ ಕಷಾಯ ಮಾಡಿ ಅರಿಶಿನ, ಉಪ್ಪು ಮತ್ತು ಮೆಣಸಿನಕಾಯಿ ಪುಡಿ ಸೇರಿಸಿ ಕುಡಿಯುವುದರಿಂದ ತೊಳ್ಳೆ ರೋಗ ವಾಸಿಯಾಗುತ್ತದೆ

3 ಹೊಂಗೆ ಎಣ್ಣೆಯನ್ನು ಚೆನ್ನಾಗಿ ಕಾಯಿಸಿಕೊಂಡು, ಬಾಲದ ನೂತಿಯಾಗಿರುವ ಪಶುವಿನ ಬಾಲವನ್ನು ಚಾಕುವಿನಿಂದ ಕೆರೆದು ಗಾಯಮಾಡಿ ಬಾಲದ ತುದಿಯನ್ನು ಬಿಸಿಯಾದ ಹೊಂಗೆ ಎಣ್ಣೆಗೆ ಅದ್ದುವುದರಿಂದ ಬಾಲದ ನೂತಿ ವಾಸಿಯಾಗುತ್ತದೆ

4 ಹೊಂಗೆಎಣ್ಣೆಯಲ್ಲಿ ಕರ್ಪೂರವನ್ನು ಅರೆದು ಮೈಮೇಲೆ ಆಗಿರುವ ದಡಾರದ ಹುಣ್ಣಿಗೆ ಲೇಪಿಸುತ್ತಾರೆ.



# ಅನುಬಂಧ - 1

## ಆಳತೆ ಮತ್ತು ತೂಕದ ಕೋಷ್ಟಕ

ಈ ಹಿಂದೆ ಕರ್ನಾಟಕವನ್ನೊಳಗೊಂಡಂತೆ ನಮ್ಮ ದೇಶದಲ್ಲಿ ಘನ, ದ್ರವ ಮತ್ತು ಕಾಲವನ್ನು ಅಳೆಯಲು ವಿವಿಧ ದೇಶೀಯ ಅಳತೆಮಾನಗಳನ್ನು ಅನುಸರಿಸಲಾಗುತ್ತಿತ್ತು ಬ್ರಿಟಿಷರ ಪದಾರ್ಪಣದೊಂದಿಗೆ ಬಂದ ಬ್ರಿಟಿಷ್ ಅಳತೆ ಪದ್ಧತಿ (ಫುಟ್, ಪೌಂಡ್, ಸೆಕೆಂಡ್ಸ್) ಮತ್ತು ಫ್ರೆಂಚರೊಡನೆ ಬಂದ ಫ್ರೆಂಚ್ ಅಥವಾ ಮೆಟ್ರಿಕ್ ಅಳತೆ ಪದ್ಧತಿ (ಸೆಂಟಿಮೀಟರ್, ಗ್ರಾಂ, ಸೆಕೆಂಡ್ಸ್) ಬಳಕೆಗೆ ಬಂದಿತು ಈಗ ದೇಶದೆಲ್ಲೆಡೆ ಮೆಟ್ರಿಕ್ ಅಳತೆ ಪದ್ಧತಿಯನ್ನೇ ಅನುಸರಿಸಲಾಗುತ್ತಿದೆ

ಇತ್ತೀಚೆಗೆ ಪ್ರಕಟವಾದ ಆಯುರ್ವೇದ ಗ್ರಂಥಗಳಲ್ಲಿ ಔಷಧ ದ್ರವ್ಯಗಳನ್ನು ತೂಗಲು/ಅಳೆಯಲು ಮೆಟ್ರಿಕ್ ಪದ್ಧತಿಯನ್ನು ಅನುಸರಿಸಲಾಗುತ್ತಿದ್ದರೂ ಹಳೆಯ ಗ್ರಂಥಗಳಲ್ಲಿ ಹಿಂದಿನ ದೇಶಿಯ ಪದ್ಧತಿಯನ್ನು ಅನುಸರಿಸಿರುವುದು ಕಂಡುಬರುತ್ತದೆ ದೇಶಿಯ ಪದ್ಧತಿಯ ಪ್ರಕಾರ ಇಂದಿನ ಸನ್ನಿವೇಶದಲ್ಲಿ ದ್ರವ್ಯಗಳನ್ನು ಅಳತೆಮಾಡುವುದು ಕಷ್ಟದ ಕೆಲಸವಾದುದರಿಂದ ಭಾರತ ಸರ್ಕಾರ ಅನುಮೋದಿಸಿ ಆಯುರ್ವೇದ ಮತ್ತು ಸಿದ್ಧ ಫಾರ್ಮಕೋಪಿಯಾಗಳಲ್ಲಿ ಅಳವಡಿಸಿರುವ ತೂಕದ ಮಾನ ಮತ್ತು ಅವುಗಳ ಸಮಾನಾಂತರ ಮೆಟ್ರಿಕ್ ಅಳತೆಮಾನದ ಪಟ್ಟಿಯನ್ನು ಈ ಅನುಬಂಧದಲ್ಲಿ ಕೊಡಲಾಗಿದೆ ಇದರ ಸಹಾಯದಿಂದ ಹಿಂದಿನ ಅಳತೆಮಾನಗಳನ್ನು ಮೆಟ್ರಿಕ್ ಪದ್ಧತಿಗೆ ಪರಿವರ್ತಿಸಿಕೊಂಡು ಔಷಧ ದ್ರವ್ಯಗಳನ್ನು ಸುಲಭವಾಗಿ ಅಳತೆ ಮಾಡಿಕೊಳ್ಳಬಹುದು.

## 1. ಆಯುರ್ವೇದ ಪದ್ಧತಿಯಲ್ಲಿ

### ಅ. ತೂಕದ ಮಾನಗಳು

| | | (ಮೆಟ್ರಿಕ್ ಪದ್ಧತಿಯಲ್ಲಿ) |
|---|---|---|
| 1 ರತ್ತಿ ಅಥವಾ ಗುಂಜ | | 125 ಮಿ.ಗ್ರಾಂ |
| 8 ರತ್ತಿ ಅಥವಾ ಗುಂಜ | 1 ಮಾಷ | 1 ಗ್ರಾಂ (1000 ಮಿ.ಗ್ರಾಂ) |
| 12 ಮಾಷ | 1 ಕರ } 1 ತೊಲ | 11 7 ಗ್ರಾಂ (1) |
| 2 ಕರ } 2 ತೊಲ | 1 ಸುಕ್ತಿ | 24 ಗ್ರಾಂ |
| 2 ಸುಕ್ತಿ | 1 ಪಲಂ | 48 ಗ್ರಾಂ |
| 2 ಪಲ | 1 ಪ್ರಸರ್ತಿ | 96 ಗ್ರಾಂ |
| 2 ಪ್ರಸರ್ತಿ | 1 ಕುಡವ - | 192 ಗ್ರಾಂ |
| 2 ಕುಡವ | 1 ಮಾಣಿಕ | 384 ಗ್ರಾಂ |
| 2 ಮಾಣಿಕ | 1 ಪ್ರಸ್ಥ | 768 ಗ್ರಾಂ |
| 4 ಪ್ರಸ್ಥ | 1 ಆಢಕ | 3 73 ಕಿ ಗ್ರಾಂ |
| 4 ಆಢಕ | 1 ದ್ರೋಣ | 12 288 ಕಿ.ಗ್ರಾಂ |
| 2 ದ್ರೋಣ | 1 ಸುರ್ಪ | 24 576 ಕಿ.ಗ್ರಾಂ |
| 2 ಸುರ್ಪ | 1 ದ್ರೋಣಿ } 1 ವಾಹಿ | 49 152 ಕಿ.ಗ್ರಾಂ |
| 4 ದ್ರೋಣಿ | 1 ಖಾರಿ | 196 608 ಕಿ.ಗ್ರಾಂ |
| 1 ಪಲಂ | ----- | 48 ಗ್ರಾಂ |
| 100 ಪಲಂ | 1 ತುಲ | 4 800 ಕಿ.ಗ್ರಾಂ |
| 20 ತುಲ | 1 ಭಾರ | 96 ಕಿ.ಗ್ರಾಂ |

**ಸೂಚನೆ :** ಮೆಟ್ರಿಕ್ ಪದ್ಧತಿಯಲ್ಲಿ ದ್ರವಗಳ ಅಳತೆಮಾನವು ಲೀಟರ್ ಮತ್ತು ಮಿಲಿಲೀಟರ್ ಆಗಿರುತ್ತದೆ 1 ಗ್ರಾಂ ತೂಕ ಅಳತೆಯಲ್ಲಿ 1 ಮಿ.ಲೀ.ಗೆ ಸಮನಾಗಿರುತ್ತದೆ ದ್ರವ ವಸ್ತುಗಳನ್ನು ತೂಕ ಮಾಡಿ ಇಲ್ಲವೆ ಅಳತೆಮಾಡಿ ಬಳಸಬಹುದು.

ಆ ಕಾಲದ ಅಳತೆಮಾನಗಳು (ಮೆಟ್ರಿಕ್ ಪದ್ಧತಿಯಲ್ಲಿ)

| | | |
|---|---|---|
| 2 ಕ್ಷಣ | 1 ಲವ | 30 ಸೆಕೆಂಡ್ಸಗಳು |
| 2 ಲವ | 1 ನಿಮಿಷ | 1 ನಿಮಿಷ |
| 3 ನಿಮಿಷ | 1 ಕಾಷ್ಟ | 4 .66 ನಿಮಿಷ |
| 1 ಘತಿ | ----- | 24 ನಿಮಿಷ |
| 1 ಮುಹೂರ್ತ | ----- | 48 ನಿಮಿಷ |
| 30 ಮುಹೂರ್ತ | 1 ಅಹೋರಾತ್ರ | 24 ಗಂಟೆಗಳು |
| 15 ಅಹೋರಾತ್ರ | 1 ಪಕ್ಷ | 15 ದಿವಸ |
| 2 ಪಕ್ಷ | 1 ಮಾಸ | 30 ದಿವಸ (1 ತಿಂಗಳು) |
| 3 ಪಕ್ಷ | 1 ಮಂಡಲ | 45 ದಿವಸ (2) |
| 2 ಮಾಸ | 1 ಋತು | 60 ದಿವಸ (2 ತಿಂಗಳು) |
| 3 ಋತು | 1 ಆಯನ | 6 ತಿಂಗಳು |
| 2 ಆಯನ | 1 ಸಂವತ್ಸರ | 12 ತಿಂಗಳು (1 ವರ್ಷ) |
| 5 ಸಂವತ್ಸರ | 1 ಯುಗ | 5 ವರ್ಷ |

2. ಸಿದ್ಧವೈದ್ಯ ಪದ್ಧತಿಯಲ್ಲಿ

ಅ. ಘನವಸ್ತುಗಳನ್ನು ತೂಗುವ ಮಾನಗಳು (ಮೆಟ್ರಿಕ್ ಪದ್ಧತಿಯಲ್ಲಿ)

| | | |
|---|---|---|
| 1 ಉಳುಂದು | 1 ಗ್ರೈನ್ | 65 ಮಿ ಗ್ರಾಂ |
| 4 ಯವ | 1 ಕುನ್ರಿ } 2 ಗ್ರೈನ್ಸ್ | 130 ಮಿ.ಗ್ರಾಂ |
| 1 ಮಂಜಾಡಿ | 4 ಗ್ರೈನ್ಸ್ | 260 ಮಿ.ಗ್ರಾಂ |
| 6 ಕುನ್ರಿ | 1 ಮಾಷಂ | 780 ಮಿ.ಗ್ರಾಂ |
| 3 $^{3}/_{4}$ ಕುನ್ರಿ | 1 ಪಣವೀಡೈ | 488 ಮಿ ಗ್ರಾಂ |

| | | |
|---|---|---|
| 32 ಕುನ್ರಿ | 1 ವರಾಗನೀಡೈ<br>1 ಡ್ರಾಂ } | 4 16 ಗ್ರಾಂ |
| 40 ಕುನ್ರಿ | 1 ಕಜಂಚು | 5 12 ಗ್ರಾಂ |
| 10 ವರಾಗನೀಡೈ | 1 ಪಲಂ (ದೊಡ್ಡದು) | 41 6 ಗ್ರಾಂ |
| $^{1}/_{2}$ ಪಲಂ | 1 ಕಸು<br>1 ಕೈಸ } | 10 4 ಗ್ರಾಂ (1) |
| 1 ತೊಲ | 180 ಗ್ರೈನ್ಸ್ | 11 7 ಗ್ರಾಂ |
| 3 ತೊಲ | 1 ಪಲಂ (ಚಿಕ್ಕದು) | 35 ಗ್ರಾಂ |
| 8 ಪಲಂ | 1 ಸೇರ್ | 280 ಗ್ರಾಂ |
| 40 ಪಲಂ | 1 ಪೀಸ್ಸೈ<br>(3 ಪೌಂಡ್, 2 ಔನ್ಸ್) | 1 4 ಕಿ ಗ್ರಾಂ |
| 50 ಪಲಂ | 1 ತೂಕ್ಕು | 1 75 ಕಿ ಗ್ರಾಂ |
| 2 ತೂಕ್ಕು | 1 ಧುಲಂ | 3 5 ಕಿ.ಗ್ರಾಂ |

## ಆ. ಘನವಸ್ತುಗಳನ್ನು ಅಳೆಯುವ ಮಾನಗಳು

| | | |
|---|---|---|
| 360 ನೆಲ್ | 1 ಸೋಡು | 33 6 ಮಿ ಲೀ |
| 5 ಸೋಡು | 1 ಆಳಾಕ್ಕು | 168 ಮಿ ಲೀ |
| 2 ಆಳಾಕ್ಕು | 1 ಉಳುಕ್ಕು | 336 ಮಿ ಲೀ |
| 2 ಉಳುಕ್ಕು | 1 ಉರಿ | 672 ಮಿ ಲೀ |
| 2 ಉರಿ | 1 ನಝಿ<br>1 ಪಡಿ } | 1 34 ಲೀ |
| 4 ನಝೀ | 1 ಕುರಣಿ | 5 37 ಲೀ |
| 2 ಕುರಣಿ | 1 ಪಥಕ್ಕು | 10 7 ಲೀ |
| 3 ಕುರಣಿ | 1 ಮುಕ್ಕುರಣಿ | 16 1 ಲೀ |
| 2 ಪಥಕ್ಕು | 1 ತೂಣಿ | 21 5 ಲೀ |
| 3 ತೂಣಿ | 1 ಕಲಂ | 64 5 ಲೀ |

### ಇ ದ್ರವವಸ್ತುಗಳನ್ನು ಅಳೆಯುವ ಮಾನಗಳು

| | |
|---|---|
| 1 ಧೇಖರಂಡಿ | 4 ಮಿ ಲೀ |
| 1 ಕುಪ್ಪಿ | 700 ಮಿ ಲೀ |
| 1 ತೀರ್ಥಖರಂಡಿ | 1 33 ಮಿ ಲೀ |
| 1ನೇ ಖರಂಡಿ | 4 ಮಿ ಲೀ |
| 1ನೇ ಉಚಿಖರಂಡಿ | 16 ಮಿ ಲೀ |
| 1 ವಲಾಡಿ | 30 ಮಿ ಲೀ |
| 1 ಎಣ್ಣೈಖರಂಡಿ | 240 ಮಿ ಲೀ |

### ಈ ಕಾಲಮಾನಗಳು

| | |
|---|---|
| 1 ನೋಡಿ | 1 ಸೆಕೆಂಡ್ |
| 60 ನೋಡಿ<br>1 ನಿಮಿಡಂ } | 1 ನಿಮಿಷ |
| 1 ನಾಳಿಗೈ | 24 ನಿಮಿಷ |
| 2 $^{1}/_{2}$ ನಾಳಿಗೈ | 60 ನಿಮಿಷ (1 ಗಂಟೆ) |
| 1 ಮುಹೋರ್ತಂ | 90 ನಿಮಿಷ (1 $^{1}/_{2}$ ಗಂಟೆ) |
| 1 ಜಾಮಂ | 3 ಗಂಟೆಗಳು |
| 8 ಜಾಮಂ | 1 ದಿವಸ (24 ಗಂಟೆಗಳು) |
| 1 ವಾಕ್ಷಂ | 15 ದಿವಸ |
| 1 ಮಾಧಂ | 30 ದಿವಸ (1 ತಿಂಗಳು) |
| 1 ಮಂಡಲಂ | 45 ದಿವಸ |
| 1 ಕಾಲಂ | 2 ತಿಂಗಳು |
| 1 ಆಯನಂ | 6 ತಿಂಗಳು |
| 2 ಆಯನಂ | 1 ವರ್ಷ |
| 12 ಮಾಸಂಗಳ್ | 1 ವರ್ಷ |

# ಕರ್ನಾಟಕದಲ್ಲಿ ಬಳಕೆಯಲ್ಲಿರುವ ಕೆಲವು ಅಳತೆಮಾನಗಳು

## ಅ ಧಾನ್ಯಗಳನ್ನಳೆಯುವ ಅಳತೆಮಾನಗಳು

ಧಾನ್ಯಗಳನ್ನಳೆಯುವ ವಿವಿಧ ಗಾತ್ರದ ಸಿಲಿಂಡರ್ ಆಕಾರದ ಅಳೆಯುವ ಸಾಧನಗಳನ್ನು ಬಳಸುತ್ತಿರುವುದರಿಂದ ಅವುಗಳು ಹಿಡಿಯಲು ಧಾನ್ಯದ ಪ್ರಮಾಣ ಧಾನ್ಯದ ಗಾತ್ರಕ್ಕೆ ಅನುಗುಣವಾಗಿದ್ದು ತೂಕದಲ್ಲಿ ಮಾತ್ರ ಬೇರೆ ಬೇರೆಯಾಗಿರುತ್ತದೆ ಉದಾ 1 ಸೇರು ರಾಗಿ ಮತ್ತು 1 ಸೇರು ದನಿಯ ಅಳತೆ ಪ್ರಮಾಣದಲ್ಲಿ ಒಂದೇಯಾಗಿದ್ದರೂ ತೂಕದಲ್ಲಿ ಬೇರೆ ಬೇರೆಯಾಗಿರುತ್ತದೆ ಆದುದರಿಂದ ಧಾನವನ್ನಳೆಯುವ ಕರ್ನಾಟಕದ ಅಳತೆಮಾನಗಳಿಗೆ ಸಮಾನಾಂತರ ಮೆಟ್ರಿಕ್ ವದ್ಧತಿಯ ತೂಕದ ಮಾನ ಕೊಡುವುದು ಅಷ್ಟೊಂದು ಸಮಂಜಸವೆನಿಸುವುದಿಲ್ಲ ಕೊಲವೊಂದು ಸಂದರ್ಭಗಳಲ್ಲಿ ಲೀಟರ್ ನಿಂದ ಅಳೆಯುವುರಾದರೂ ಮೆಟ್ರಿಕ್ ವದ್ಧತಿಯಲ್ಲಿ ಘನವಸ್ತುಗಳನ್ನು ಸಾಮಾನ್ಯವಾಗಿ ತೂಕ ಮಾಡಲಾಗುತ್ತದೆ

| | |
|---|---|
| 4 ಸೊಲಿಗೆ | 1 ವಡಿ |
| 4 ವಡಿ | 1 ಬಳ್ಳ |
| 4 ಬಳ್ಳ | 1 ಕೊಳಗ |
| 20 ಕೊಳಗ | 1 ಖಂಡುಗ |
| 4 ಚಟಾಕು | 1 ವಾವು |
| 2 ವಾವು | { 1 ಅಚ್ಚೇರು<br>1 ಮಾನ |
| 2 ಅಚ್ಚೇರು }<br>2 ಮಾನ | 1 ಸೇರು |
| 2 ಸೇರು | 1 ಬಳ್ಳ |
| 10 ಸೇರು | 1 ವರೆ |
| 8 ವರೆ | 1 ಬಟ್ಟಿ |
| 15 ಬಟ್ಟಿ | 1 ಗಾಡಿ |
| 100 ಸೇರು | 1 ವಲ್ಲ |
| 4 ಸಿದ್ದ | 1 ಸೇರು |

| | | |
|---|---|---|
| 14 ಸೇರು | 1 ಕಳಸಿಗೆ | |
| 3 ಕಳಸಿಗೆ } 42 ಸೇರು | 1 ಮಂಡಿ | |

## ಆ ದ್ರವಗಳನ್ನಳೆಯುವ ಅಳತೆಮಾನಗಳು

| | | (ಮೆಟ್ರಿಕ್ ಪದ್ಧತಿಯಲ್ಲಿ) |
|---|---|---|
| 1 ತೊಲ | ------- | 12 ಮಿ ಲೀ (10 ಮಿ.ಲೀ ) |
| 1 ಸೊಲಿಗೆ | ------ | 140 ಮಿ ಲೀ |
| 4 ಸೊಲಿಗೆ | 1 ಸಿದ್ದೆ | 557 ಮಿ ಲೀ. |
| 4 ಸಿದ್ದೆ | 1 ಸೇರು | 1 114 ಲೀ |
| 9 ಸೇರು | 1 ಬೇಳೆ | 10 26 ಲೀ |
| 4 ಕುಡುಕೆ | 1 ಸೇರು | 1 114 ಲೀ |
| 6 ಕುಡುಕೆ | 1 ಕುತ್ತಿ | 6 684 ಲೀ |

## ಇ ತೂಕದ ಮಾನ

| | | |
|---|---|---|
| 1 ವೀಸ | ------- | 31 ಮಿ.ಗ್ರಾಂ |
| 4 ವೀಸ } 1 ಹಾಗ | 1 ಗುಲಗಂಜಿ | 125 ಮಿ ಗ್ರಾಂ |
| 2 ಹಾಗ | 1 ಅಡ್ಡ | 250 ಮಿ ಗ್ರಾಂ |
| 2 ಅಡ್ಡ | 1 ಹಣ | 500 ಮಿ ಗ್ರಾಂ |
| 9 ಹಣ | 1 ವರಹ | 4 5 ಗ್ರಾಂ |
| 3 ವರಹ | { 1 ರೂಪಾಯಿ (ಹಳೆಯ ಬೆಳ್ಳಿ ನಾಣ್ಯ) 1 ತೊಲ | 13 5 ಗ್ರಾಂ (1) |
| 1 ರೂಪಾಯಿ | 1 ತೊಲ | 12 ಗ್ರಾಂ |
| 1 $^1/_2$ ತೊಲ | 1 ಚಟಾಕು | 30 ಗ್ರಾಂ |

| | | |
|---|---|---|
| 3 ತೊಲ | 1 ಅರೆಪಾವು | 36 ಗ್ರಾಂ |
| 2 ಅರೆಪಾವು | 1 ಪಾವು | 72 ಗ್ರಾಂ |
| 2 ಪಾವು | 1 ಅಚ್ಚೇರು | 144 ಗ್ರಾಂ |
| 2 ಅಚ್ಚೇರು<br>24 ರೂಪಾಯಿ } | 1 ಸೇರು | 288 ಗ್ರಾಂ |
| 30 ರೂಪಾಯಿ | 1 ಸವ್ವಾಸೇರು | 360 ಗ್ರಾಂ |
| 2 ಸವ್ವಾಸೇರು | 1 ಅಡಿಸೇರು | 720 ಗ್ರಾಂ |
| 2 ಅಡಿಸೇರು | 1 ಪಂಚೇರು | 1 440 ಕಿ ಗ್ರಾಂ |
| 4 ದಡಿಯ<br>8 ಪಂಚೇರು<br>40 ಸೇರು } | 1 ಮಣ | 11 520 ಕಿ ಗ್ರಾಂ(3) |
| 20 ಮಣ | 1 ಖಂಡಿ | 200 ಕಿ ಗ್ರಾಂ |

**ಈ ಎಣಿಕೆಯ ಮಾನ**

| | |
|---|---|
| 20 ಎಲೆ | 1 ಕವಳಿಗೆ |
| 5 ಕವಳಿಗೆ | 1 ಕಟ್ಟು |
| 1 ಕಟ್ಟು | 100 ಎಲೆ |

1 ಒಂದು ತೊಲಕ್ಕೆ, ಮೆಟ್ರಿಕ್ ತೂಕದ ಪ್ರಕಾರ 11 7 ಗ್ರಾಂ ಸಮನಾದರೂ ವಾಡಿಕೆಯಲ್ಲಿ 10 ಅಥವಾ 12 ಗ್ರಾಂ ಅನ್ನು 1 ತೊಲಕ್ಕೆ ಸಮವೆಂಬ ಅಭಿಪ್ರಾಯವಿದೆ ರೂಪಾಯಿ ತೂಕವನ್ನು ಗಣನೆಗೆ ತೆಗೆದುಕೊಂಡಲ್ಲಿ ಒಂದು ರೂಪಾಯಿ (1 ತೊಲ) ತೂಕಕ್ಕೆ 13 5 ಗ್ರಾಂ ಕೂಡಾ ಸಮನಾಗುತ್ತದೆ

2 ಕೆಲವು ಗ್ರಂಥಗಳಲ್ಲಿ 40 ಹಾಗೂ 48 ದಿವಸಗಳನ್ನು ಒಂದು ಮಂಡಲಕ್ಕೆ ಸಮ ಎಂದು ಪರಿಗಣಿಸುತ್ತಾರೆ

3 ವಾಡಿಕೆಯಲ್ಲಿ 10 ಕಿ ಗ್ರಾಂ ಅನ್ನು 1 ಮಣ ಎಂದು ಪರಿಗಣಿಸುತ್ತಾರೆ

ಔಷಧಿಯನ್ನು ತಯಾರಿಸಲು ಔಷಧಿಯ ಸಸ್ಯಗಳ ಜೊತೆಗೆ ಹಲವು ಬಗೆಯ ದಾತು, ಲವಣ ಮತ್ತು ಪ್ರಾಣಿಜನ್ಯ ದ್ರವ್ಯಗಳನ್ನು ಉಪಯೋಗಿಸಲಾಗುತ್ತಿದೆ ಅಂತಹ ಕೆಲವು ದ್ರವ್ಯಗಳ ಕಿರುಪರಿಚಯವನ್ನು ಇಲ್ಲಿ ಕೊಡಲಾಗಿದೆ

**ದಾತು ಮತ್ತು ಲವಣಗಳು**

1) ಅಡಿಗೆ ಉಪ್ಪು
2) ಅನ್ನಬೇದಿ (ಹಿರೆಕಸ)
3) ಅಬ್ರಕ
4) ಅರದಾಳ (ಹರತಾಳ)
5) ಆಮ್ಲಸಾರ ಗಂಧಕ - ಗಂಧಕ ನೋಡಿ
6) ಇಲ್ಲಣ
7) ಇಂಗ್ಲೀಕ
8) ಕಾಚಲವಣ (ಗಾಜು ಲವಣ)
9) ಕಾವಿಕಲ್ಲು
10) ಗಂಧಕ
11) ಗೌರಿಪಾಷಾಣ
12) ಚೌಳುಪ್ಪು (ಚೌಳುಮಣ್ಣು, ಸರ್ಜಕ್ಷಾರ)
13) ನವಾಸಾಗರ
14) ಪಟಿಕ (ಪಟಿಕಾರ)
15) ಪಾದರಸ
16) ಪೆಟ್ಲುಪ್ಪು (ಸೋರುಪ್ಪು)
17) ಬಿಡಲವಣ
18) ಬಿಳಿಗಾರ (ಟಂಕಣಕಾರ)
19) ಮಣಿಶಿಲೆ
20) ಮೃದಾರ್‌ಶಿಂಗಿ
21) ಮೈಲ್‌ತುತ್ತ
22) ಯವಕ್ಷಾರ (ಮರದ ಉಪ್ಪು)

23) ರಸಕರ್ಪೂರ - ಪಾದರಸ ನೋಡಿ
24) ರಸಸಿಂಧೂರ
25) ಶಿಲಾಜಿತ್
26) ಶಂಖಪಾಷಾಣ (ಸಂಬಳಕಾರ)
27) ಸವರ್ಚಲವಣ
28) ಸುಣ್ಣ
29) ಸೈಂಧಲವಣ
30) ಹವಳ ಸಿರಿಗಂಧಕ - ಗಂಧಕ ನೋಡಿ
31) ಹಿಂಗುಳ ಭಸ್ಮ - ಪಾದರಸ ನೋಡಿ

**ಪ್ರಾಣಿಜನ್ಯ ದ್ರವ್ಯಗಳು**

1) ಅರಗು
2) ಕವಡೆ
3) ಕಸ್ತೂರಿ
4) ಗೋರೋಜನ
5) ಜೇನುಮೇಣ
6) ಪುನಗು (ಜವಾಜಿ)
7) ಶಂಖ
8) ಹವಳ

# ಅಡಿಗೆ ಉಪ್ಪು (ಬಡಗಾರ ಲವಣ)

| | |
|---|---|
| ರಾಸಾಯನಿಕ ಹೆಸರು | ಸೋಡಿಯಂ ಕ್ಲೋರೈಡ್ |
| ರಾಸಾಯನಿಕ ಸೂತ್ರ | Nacl |
| ಇತರ ಭಾಷೆಯ ಹೆಸರುಗಳು | ಇಂ - ಕಾಮನ್ ಸಾಲ್ಟ್, ಟೇಬಲ್ ಸಾಲ್ಟ್ |
| | ಸಂ - ಲವಣ, ಸಮುದ್ರಲವಣ, ದ್ರೋಣಿ ಲವಣ |
| | ಹಿಂ - ನಮಕ್ |
| | ತ - ಉಪ್ಪು, ಲವಣಮು |
| | ತೆ - ಉಪ್ಪು, ಕಡಲ್‌ಉಪ್ಪು |

**ಪರಿಚಯ .**

ಉಪ್ಪಿಗಿಂತ ರುಚಿಯಿಲ್ಲ, ತಾಯಿಗಿಂತ ಬಂಧುವಿಲ್ಲ' ಎಂಬ ನಾಣ್ಣುಡಿಯು ಉಪ್ಪಿನ ಮಹತ್ವವನ್ನು ತಿಳಿಸುತ್ತದೆ ಇಂತಃ ಉಪ್ಪು ನಮ್ಮ ದೈನಂದಿನ ಆಹಾರಕ್ಕೆ ರುಚಿಯನ್ನು ಕೊಡುವುದರ ಜೊತೆಗೆ ಔಷಧಿಯಾಗಿಯೂ ಉಪಯೋಗವಾಗುತ್ತಿದೆ

ಅಡಿಗೆ ಉಪ್ಪನ್ನು ಸಮುದ್ರದ ನೀರಿನಿಂದ ತಯಾರಿಸುತ್ತಾರೆ ಸಮುದ್ರದ ನೀರನ್ನು ಸಣ್ಣಸಣ್ಣ ಕುಂಟೆಗಳಲ್ಲಿ ಶೇಖರಿಸಿ ಸೂರ್ಯನ ಶಾಖಕ್ಕೆ ನೀರು ಆವಿಯಾಗಲು ಬಿಡುತ್ತಾರೆ ನೀರೆಲ್ಲ ಆವಿಯಾದ ಮೇಲೆ ತಳದಲ್ಲಿ ಹರಳುಗಳ ರೂಪದಲ್ಲಿ ಉಪ್ಪು ಸಂಗ್ರಹವಾಗುತ್ತದೆ ಹೀಗೆ ಸಂಗ್ರಹಿತವಾದ ಉಪ್ಪಿನ ಬಣ್ಣ ಕಂದು ಮಿಶ್ರಿತ ಬಿಳಿಯಾಗಿರುತ್ತದೆ

ಔಷಧಿ ತಯಾರಿಕಾ ಕ್ರಮಗಳಲ್ಲಿ ಎಲ್ಲೆಲ್ಲಿ ಕೇವಲ ಉಪ್ಪು ಎಂದು ತಿಳಿಸಲಾಗಿದೆಯೋ ಅಂತಹ ಕಡೆಗಳಲ್ಲಿ ಅಡಿಗೆ ಉಪ್ಪನ್ನು ಮಾತ್ರ ಉಪಯೋಗಿಸಬೇಕು



# ಅನ್ನಬೇದಿ (ಹಿರಕಸ)

ರಾಸಾಯನಿಕ ಹೆಸರು ಫೆರಸ್ ಸಲ್ಫೇಟ್

ರಾಸಾಯನಿಕ ಸೂತ್ರ $FeSo_4$

ಇತರ ಭಾಷೆಯ ಹೆಸರುಗಳು

ಇಂ - ಗ್ರೀನ್ ವಿಟ್ರಿಯಾಲ್, ಗ್ರೀನ್ ಕೊಪ್ಪಿರಾಸ್

ಸಂ. - ಕಾಸಿಸ, ಹರತುತಿಯ

ಹಿಂ - ಹರತುತಿಯ, ಹಿರಕಾಸಿಸ್

ತ - ಅನ್ನಬೇದಿ

ತೆ - ಅನ್ನಬೇದಿ

**ಪರಿಚಯ**

ಅನ್ನಬೇದಿ ಎಂಬುದು ಕಬ್ಬಿಣದ ಒಂದು ಬಗೆಯ ಲವಣ ಇದು ಪ್ರಕೃತಿಯಲ್ಲಿ ಕಬ್ಬಿಣದ ಅದಿರು ಮತ್ತು ಪಟಿಕವಿರುವ ಕಡೆಗಳಲ್ಲಿ ದೊರೆಯುತ್ತದೆ ಆ ಪ್ರದೇಶಗಳಲ್ಲಿ ಪಟಿಕ ಮತ್ತು ಕಬ್ಬಿಣದ ಅದಿರು ವಾತಾವರಣದಲ್ಲಿರುವ ತೇವಾಂಶದೊಡನೆ ನಡೆಸುವ ರಾಸಾಯನಿಕ ಕ್ರಿಯೆಯಿಂದ ಅನ್ನಬೇದಿ ಉತ್ಪತ್ತಿಯಾಗುತ್ತದೆ

ಪ್ರಾಚೀನ ಗ್ರಂಥಗಳಲ್ಲಿ ಎರಡು ಬಗೆಯ ಅನ್ನಬೇದಿಯನ್ನು ಗುರುತಿಸುತ್ತಾರೆ ಒಂದು ಹಸಿರು ವರ್ಣಯುಕ್ತ ಅನ್ನಬೇದಿ ಮತ್ತೊಂದು ಹಳದಿ ಬಣ್ಣದ ಅನ್ನಬೇದಿ. ಹಸಿರು ಬಣ್ಣದ ಅನ್ನಬೇದಿಯನ್ನು ಸಂಸ್ಕೃತದಲ್ಲಿ ವಾಲುಕ-ಕಾಸಿಸ ಅಥವಾ ಧಾತು-ಕಾಸಿಸ ಎಂದು, ಹಳದಿ ಬಣ್ಣದ ಅನ್ನಬೇದಿಯನ್ನು ಪುಷ್ಪ-ಕಾಸಿಸ ಎಂದು ಕರೆಯುತ್ತಾರೆ ಎರಡು ಬಗೆಯ ಅನ್ನಬೇದಿಯು ರಾಸಾಯನಿಕವಾಗಿ

ಒಂದೆಯಾದರೂ ಎರಡನೇ ಅನ್ನಬೇದಿಯ ಕಣಗಳ ಮೇಲೆ ಗಂಧಕದ ಕಣಗಳ ಹೊದಿಕೆಯಿರುವುದರಿಂದ ಹಳದಿ ಬಣ್ಣವಿರುತ್ತದೆ

ಅನ್ನಬೇದಿಯು ತಿಳಿಹಸಿರು ಬಣ್ಣದ ಹರಳು ರೂಪದಲ್ಲಿರುತ್ತದೆ. ನೀರಿನಾಂಶವನ್ನು ಕಳೆದುಕೊಂಡಾಗ ಬಿಳಿಪುಡಿಯ ರೂಪ ತಳೆಯುತ್ತದೆ

ಅನ್ನಬೇದಿಯನ್ನು ಕೃತಕವಾಗಿಯೂ ತಯಾರಿಸುತ್ತಾರೆ ಕಬ್ಬಿಣದ ಸರಳುಗಳನ್ನು ಕಾಯಿಸಿದ ಗಂಧಕಾಮ್ಲದಲ್ಲಿ ಅದ್ದಿದಾಗ ರಾಸಾಯನಿಕ ಕ್ರಿಯೆಯುಂಟಾಗಿ ತಿಳಿಹಸಿರು ಅಥವಾ ತಿಳಿನೀಲಿ ಬಣ್ಣದ ಅನ್ನಬೇದಿ ಹರಳುಗಳು ಉತ್ಪತ್ತಿಯಾಗುತ್ತದೆ ಇದನ್ನು ಸಂಗ್ರಹಿಸಿ ಮಾರುತ್ತಾರೆ



# ಅಬ್ರಕ

ರಾಸಾಯನಿಕ ಹೆಸರು — ಅಲ್ಯುಮಿನಿಯಂ ಸಿಲಿಕೇಟ್

ರಾಸಾಯನಿಕ ಸೂತ್ರ — $KH_2Al_3 (SiO_4)_3$

ಇತರ ಭಾಷೆಯ ಹೆಸರುಗಳು

ಇಂ - ಮೈಕ
ಸಂ - ಅಭ್ರ
ಹಿಂ. - ಅವ್ರಕ್
ತ - ಅಪ್ಪಿರಕಂ, ಕಕ್ಕೈಪಾನ್
ತೆ - ಅಬ್ರಕಂ

**ಪರಿಚಯ**

ಅಬ್ರಕವು ನೈಸರ್ಗಿಕವಾಗಿ ಬಿಹಾರ, ಆಂಧ್ರಪ್ರದೇಶ, ಕೇರಳ ಮತ್ತು ಕರ್ನಾಟಕ ರಾಜ್ಯಗಳಲ್ಲಿ ದೊರೆಯುತ್ತದೆ. ಇದು ಲೋಹದ ಹೊಳಪಿನಿಂದ ಕೂಡಿದ ಅತಿ ತೆಳುವಾದ ಪಾರದರ್ಶಕ ರೇಖುಗಳ ರೂಪದಲ್ಲಿ ಮಣ್ಣಿನಲ್ಲಿ ದೊರೆಯುತ್ತದೆ. ಈ ರೇಖುಗಳು ಅತ್ಯಲ್ಪ ಒತ್ತಡದಲ್ಲಿ ಕೂಡಾ ಸಣ್ಣ ಸಣ್ಣ ತುಣುಕುಗಳಾಗಿ ಪುಡಿಯಾಗುತ್ತದೆ ಬಣ್ಣದ ಆಧಾರದ ಮೇಲೆ ಬಿಳಿ, ಕೆಂಪು, ಹಳದಿ ಮತ್ತು ಕಪ್ಪು ಎಂಬ ನಾಲ್ಕು ಬಗೆಯ ಅಬ್ರಕವನ್ನು ಗುರುತಿಸುತ್ತಾರೆ ಕಪ್ಪು ಅಬ್ರಕ ಸಂ - ಕೃಷ್ಣಾಬ್ರಕ ಔಷಧ ತಯಾರಿಕೆಗೆ ಶ್ರೇಷ್ಠವೆಂಬ ಅಭಿಪ್ರಾಯವಿದೆ ಔಷಧ ತಯಾರಿಕೆಗೆ ಅಬ್ರಕವನ್ನು ಬಳಸುವಾಗ ಆಯುರ್ವೇದ ರೀತಿಯಲ್ಲಿ ಶುಚಿಗೊಳಿಸಿ ಭಸ್ಮಮಾಡಿ ಉಪಯೋಗಿಸುತ್ತಾರೆ



# ಅರದಾಳ (ಹರಿತಾಳ, ತಾಳಕ)

ರಾಸಾಯನಿಕ ಹೆಸರು — ಆರ್ಸೆನಿಕ್ ಟ್ರೈಸಲ್ಫೈಡ್

ರಾಸಾಯನಿಕ ಸೂತ್ರ — $As_2S_3$

ಇತರ ಭಾಷೆಯ ಹೆಸರುಗಳು

ಇಂ - ಆರ್ಪಿಮೆಂಟ್, ಯಲ್ಲೊ ಆರ್ಪಿಮೆಂಟ್

ಸಂ - ಹರಿತಾಳ

ಹಿಂ - ಹರತಾಳ

ತ - ಅರಿದರಂ, ಎಲ್ಲಿಕುಡ್ ಪಾಷಾಣಂ, ತಾಳಕಂ

ತೆ  ದಾಡಿ ಪಾಷಾಣಮು, ತಾಳಕಂ

**ಪರಿಚಯ**

ಅರದಾಳವು ಚೀನಾ ಮತ್ತು ಪರ್ಷಿಯ ದೇಶಗಳಲ್ಲಿ ನೈಸರ್ಗಿಕವಾಗಿ ದೊರೆಯುತ್ತದೆ. ಪ್ರಕೃತಿಯಲ್ಲಿ ದೊರೆಯುವ ಅರದಾಳವನ್ನು ವನಸ್ಪತಿ ಹರಿತಾಳ ಮತ್ತು ಪಿಂಡ ಹರಿತಾಳ ಎಂಬ ಬಗೆಯಾಗಿ ಗುರುತಿಸುತ್ತಾರೆ ಮೊದಲ ಬಗೆಯ ಅರದಾಳವು ಮೃದುವಾದ ಹೊಂಬಣ್ಣದ ತೆಳು ರೇಖೆಗಳ ರೂಪದಲ್ಲಿ ದೊರೆಯುತ್ತದೆ ಇದನ್ನೇ ಹೆಚ್ಚಾಗಿ ಔಷಧಿಗಳಲ್ಲಿ ಬಳಸಲಾಗುತ್ತಿದೆ ಎರಡನೇ ಬಗೆಯ ಅರದಾಳವು ತಿಳಿ ಹಳದಿ ಬಣ್ಣದ ಅಪಾರದರ್ಶಕ ಮುದ್ದೆ ರೂಪದಲ್ಲಿ ಸಿಗುತ್ತದೆ ಇದರ ಬಳಕೆ ಔಷಧ ತಯಾರಿಕೆಯಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ

ಅರದಾಳವು ವಿಷವಸ್ತುವಾದುದರಿಂದ ಹೆಚ್ಚಿನ ಪ್ರಮಾಣದ ಸೇವನೆಯು ಜೀವಕ್ಕೆ ಅಪಾಯವನ್ನುಂಟು ಮಾಡುತ್ತದೆ. ಆದರೆ ಅತ್ಯಲ್ಪ ಪ್ರಮಾಣದಲ್ಲಿ ಔಷಧಿಯಂತೆ ಕೆಲಸಮಾಡುತ್ತದೆ ಇದನ್ನು ಔಷಧಿಯಾಗಿ ಬಳಸುವಾಗ ಆಯುರ್ವೇದ ಪದ್ಧತಿಯಂತೆ ಶುಚಿಮಾಡಿ, ಶುದ್ಧೀಕರಿಸಿ ಉಪಯೋಗಿಸಬೇಕು ಉಪಯೋಗಿಸುವಾಗ ವೈದ್ಯರ ಸಲಹೆ ಸೂಚನೆಗಳು ಅತ್ಯಾವಶ್ಯಕ



# ಇಲ್ಲಣ

ರಾಸಾಯನಿಕ ಹೆಸರು ಕಾರ್ಬನ್

ರಾಸಾಯನಿಕ ಸೂತ್ರ C

ಇತರ ಭಾಷೆಯ ಹೆಸರುಗಳು

ಇಂ - ಸೂಟ್

ಸಂ - ಗೃಹಧೂಮ

**ಪರಿಚಯ**

ಅಡಿಗೆಮನೆಯಲ್ಲಿ, ಹೊಗೆಕೊಳವೆಯೊಳಗೆ ಕಟ್ಟಿರುವ ಕಪ್ಪನೆಯ ಕಿಟ್ಟವನ್ನು ಇಲ್ಲಣವೆಂದು ಕರೆಯುತ್ತಾರೆ ಹಿಂದೆ ಸೌದೆಯನ್ನು ಬಳಸಿ ಅಡುಗೆ ಮಾಡುತ್ತಿದ್ದ ಕಾಲದಲ್ಲಿ ಹೊಗೆ ಕೊಳವೆಯಲ್ಲಿ ಕಿಟ್ಟ ಸಂಗ್ರಹವಾಗುವುದು ಸಾಮಾನ್ಯವಾಗಿತ್ತು ಆದರೆ ಇತ್ತೀಚಿನ ದಿನಗಳಲ್ಲಿ ವಿದ್ಯುತ್ ಮತ್ತು ಗ್ಯಾಸ್ ಬಳಕೆಯಿಂದಾಗಿ ಕಿಟ್ಟ ಸಂಗ್ರಹವಾಗುವುದು ಕಡಿಮೆಯಾಗಿದೆ. ಇಲ್ಲಣ ದೊರೆಯದೆ ಹೋದಲ್ಲಿ ಅದಕ್ಕೆ ಬದಲಾಗಿ ಹರಳೆಣ್ಣೆ ಅಥವಾ ಎಳ್ಳೆಣ್ಣೆ ದೀಪ ಉರಿಸಿ ಕಾಡಿಗೆ ಸಂಗ್ರಹಿಸಿ ಬಳಸಬಹುದೆಂದು ಕೆಲವು ಕಡೆ ವಿವರಿಸಲಾಗಿದೆ



# ಇಂಗ್ಲೀಕ

| | |
|---|---|
| ರಾಸಾಯನಿಕ ಹೆಸರು | ಮರ್ಕ್ಯುರಿಕ್ ಸಲ್ಫೈಡ್ |
| ರಾಸಾಯನಿಕ ಸೂತ್ರ | $H_gS$ |
| ಇತರ ಭಾಷೆಯ ಹೆಸರುಗಳು | ಇಂ - ಸಿನ್ನಬಾರ್ |
| | ಸಂ - ಹಿಂಗುಳ |
| | ಹಿಂ - ಹಿಂಗುಲ್ |
| | ತ - ಲಿಂಗಂ, ಇಲಿಂಗಂ |
| | ತೆ - ಹಿಂಗುಳ, ಇಂಗ್ಲೀಕ |

**ಪರಿಚಯ**

ನೈಸರ್ಗಿಕವಾಗಿ ದೊರೆಯುವ ಪಾದರಸದ ಅದಿರನ್ನು (ಸಿನ್ನಬಾರ್) ಇಂಗ್ಲೀಕವೆಂದು ಕರೆಯುತ್ತಾರೆ ಇದು ಬಣ್ಣದಲ್ಲಿ ಮತ್ತು ರಾಸಾಯನಿಕವಾಗಿ ರಸಸಿಂಧೂರವನ್ನು ಹೋಲುತ್ತದೆ ಇಂಗ್ಲೀಕವನ್ನು ಸುಣ್ಣದೊಡನೆ ಕಾಯಿಸಿ ಪಾದರಸವನ್ನು ಸಹ ಪಡೆಯಬಹುದು

ಇಂಗ್ಲೀಕವೂ ಸಹ ಪಾರದರಸದ ಇತರ ಲವಣ/ಭಸ್ಮಗಳಂತೆ ವಿಷವಸ್ತುವಾದುದರಿಂದ ಉಪಯೋಗಿಸುವಾಗ ವೈದ್ಯರ ಸಲಹೆ ಸೂಚನೆಗಳಂತೆ ಉಪಯೋಗಿಸುವುದು ಅತ್ಯಾವಶ್ಯಕ.

# ಕಾಚಲವಣ (ಗಾಜುಲವಣ)

ಇತರ ಭಾಷೆಯ ಹೆಸರುಗಳು

ಇಂ - ಸ್ಯಾಂಡ್‌ಎವಿರೆ

ಸಂ - ಕಾಚಲವಣ

ತ. - ವಲಯಾಲುಪ್ಪು

**ಪರಿಚಯ**

ಇದೊಂದು ಮಿಶ್ರಲವಣ, ನೈಸರ್ಗಿಕವಾಗಿ ದೊರೆಯುವುದಿಲ್ಲ. ಕೃತಕವಾಗಿ ಇದನ್ನು ಎರಡು ರೀತಿಯಲ್ಲಿ ತಯಾರಿಸಲಾಗುತ್ತದೆ 1) ಮರಳಿನಿಂದ ಗಾಜನ್ನು ತಯಾರಿಸುವಾಗ ಕಾಚುಲವಣ ಉತ್ಪತ್ತಿಯಾಗುತ್ತದೆ. ಅದರಲ್ಲಿ ಮಿಶ್ರವಾಗಿರುವ ಗಾಜಿನ ಚೂರುಗಳನ್ನು ತೆಗೆಯಲು ಅದನ್ನು ನೀರಿನಲ್ಲಿ ಕರಗಿಸಿ ತಿಳಿಯನ್ನು ಬಸಿದುಕೊಂಡು ನೀರೆಲ್ಲ ಆವಿಯಾಗುವವರೆವಿಗೆ ಕಾಯಿಸಿದಾಗ ತಳದಲ್ಲಿ ಶುದ್ಧ ಕಾಚಲವಣ ಉಳಿಯುತ್ತದೆ 2) ಸಮುದ್ರದ ದಡದಲ್ಲಿ ದೊರೆಯುವ ಕಪ್ಪುಮಣ್ಣನ್ನು ಪಾತ್ರೆಯಲ್ಲಿ ಸಂಗ್ರಹಿಸಿಕೊಂಡು ಅದು ಮುಳುಗುವಷ್ಟು ಸಮುದ್ರದ ನೀರು, ಪೆಟ್ಲುಪ್ಪು, ನವಾಸಾಗರ ಮತ್ತು ಅನ್ನಭೇದಿ ಸೇರಿಸಿ ಕಾಯಿಸಿ ತಯಾರಿಸಿದ ದ್ರಾವಣವನ್ನು ಬಟ್ಟೆಯಲ್ಲಿ ಶೋಧಿಸಿಕೊಂಡು ಬೇರೊಂದು ಪಾತ್ರೆಗೆ ಹಾಕಿ ಮಂದಾಗ್ನಿಯಲ್ಲಿ ಕಾಯಿಸಿ ನೀರನ್ನು ಇಂಗಿಸಿದಾಗ ತಳದಲ್ಲಿ ಕಾಚಲವಣ ಉತ್ಪತ್ತಿಯಾಗುತ್ತದೆ.



# ಕಾವಿಕಲ್ಲು (ಜಾಜುಕಲ್ಲು, ಕೆಮ್ಮಣ್ಣು)

| ಇತರ ಭಾಷೆಯ ಹೆಸರುಗಳು | ಇಂ | - | ರೆಡ್‌ಓಕರ್ |
|---|---|---|---|
| | ಸಂ | - | ಗೈರಿಕಾ |
| | ಹಿಂ | - | ಗೇರುಮಿಟ್ಟಿ |
| | ತ | - | ಸೀಮೈಕಾವಿಕಲ್ಲು |
| | ತೆ | - | ಕಾವಿ |

**ಪರಿಚಯ**

ಇದು ನೈಸರ್ಗಿಕವಾಗಿ ದೊರೆಯುವ ಒಂದು ಬಗೆಯ ಮಣ್ಣು. ಇದನ್ನು ಸಾಮಾನ್ಯವಾಗಿ ಕೆಮ್ಮಣ್ಣು ಎಂದು ಕರೆಯುತ್ತಾರೆ ಈ ಮಣ್ಣಿನಲ್ಲಿ ಕಬ್ಬಿಣದ ಅಂಶ ಹೆಚ್ಚಾಗಿರುವುದರಿಂದ ಮಣ್ಣಿನ ಬಣ್ಣ ಕೆಂಪಾಗಿರುತ್ತದೆ ಮಣ್ಣಿನಲ್ಲಿ ಕಬ್ಬಿಣದ ಜೊತೆಗೆ ಸುಣ್ಣ ಮತ್ತು ಅಲ್ಯುಮಿನಿಯಂ ಸಿಲಿಕೇಟ್ ನಂತಹ ವಸ್ತುಗಳೂ ಇರುತ್ತವೆ ಈ ಬಗೆಯ ಮಣ್ಣನ್ನು ಸಂಗ್ರಹಿಸಿ ತಂದು ಬಟ್ಟೆಯಲ್ಲಿ ಶೋಧಿಸಿ ಉಂಡೆಮಾಡಿ ಮಾರಾಟ ಮಾಡುತ್ತಾರೆ



# ಗಂಧಕ

| | |
|---|---|
| ರಾಸಾಯನಿಕ ಹೆಸರು | ಸಲ್ಫರ್ |
| ರಾಸಾಯನಿಕ ಸೂತ್ರ | S |
| ಇತರ ಭಾಷೆಯ ಹೆಸರುಗಳು | ಇಂ - ಬ್ರಿಮ್ ಸ್ಟೋನ್, ಸಬ್ಲೈಮ್ಡ್ ಸಲ್ಫರ್ |
| | ಸಂ. - ಗಂಧಕ, ಸುಲ್ವೇರಿ |
| | ಹಿಂ - ಗಂಧಕ್ |
| | ತ - ಗಂಧಕಂ |
| | ತೆ - ಗಂಧಕಮು |

**ಪರಿಚಯ**

ಗಂಧಕವು ನೈಸರ್ಗಿಕವಾಗಿ ನಿಸ್ತೇಜವಾದ ಅಗ್ನಿಪರ್ವತಗಳ ಆಸುವಾಸಿನಲ್ಲಿ ದೊರೆಯುತ್ತದೆ ನೈಸರ್ಗಿಕ ಗಂಧಕದಲ್ಲಿ ಕಬ್ಬಿಣ, ತಾಮ್ರ, ಸತು, ಸೀಸ, ವಾದರಸ ಮುಂತಾದ ಲೋಹದ ಲವಣಗಳು ಮಿಶ್ರಿತವಾಗಿರುತ್ತದೆ ನೈಸರ್ಗಿಕವಾಗಿ ದೊರೆಯುವ ಗಂಧಕವನ್ನು ಅದು ಪಡೆದಿರುವ ಬಣ್ಣದ ಆಧಾರದಮೇಲೆ ಹಳದಿ (ಆಮ್ಲಸಾರ ಗಂಧಕ), ಬಿಳಿ, ಕೆಂಪು (ಹವಳ ಸಿರಿ ಗಂಧಕ) ಮತ್ತು ಕಪ್ಪು ಎಂಬ ನಾಲ್ಕು ಬಗೆಯಾಗಿ ಗುರುತಿಸುತ್ತಾರೆ

**ಹಳದಿ ಅಥವಾ ಆಮ್ಲಸಾರ ಗಂಧಕ** – ಈ ಬಗೆಯ ಗಂಧಕವು ಪಾರದರ್ಶಕ ಹರಳುರೂಪದಲ್ಲಿದ್ದು ಬಣ್ಣದಲ್ಲಿ ಬೆಟ್ಟದನೆಲ್ಲಿಕಾಯಿಯನ್ನು ಹೋಲುವುದರಿಂದ ಇದನ್ನು ಆಮ್ಲಸಾರ ಗಂಧಕ ಎಂದು ಕರೆಯುತ್ತಾರೆ.

**ಬಿಳಿ ಗಂಧಕ** – ಈ ಬಗೆಯ ಗಂಧಕವು ಕಡ್ಡಿಗಳಂತಹ ತುಣುಕುಗಳ ರೂಪದಲ್ಲಿ ದೊರೆಯುತ್ತದೆ. ಇದು ಗಟ್ಟಿಯಾಗಿದ್ದು ಮುರಿದರೆ ಮುರಿದುಕೊಳ್ಳುತ್ತವೆ. ಮತ್ತು ಮುಟ್ಟಲು ಸ್ವಲ್ಪ ಅಂಟು ಅಂಟಾಗಿರುತ್ತದೆ. ಈ ಬಗೆಯ ಗಂಧಕವು ಹಳದಿ

ಗಂಧಕಕ್ಕಿಂತ ಕಡಿಮೆದರ್ಜೆಯದಾಗಿದ್ದು ಹೊರಲೇಪನದ ಔಷಧ ತಯಾರಿಕೆಗೆ ಯೋಗ್ಯವಾಗಿರುತ್ತದೆ

**ಕೆಂಪು ಗಂಧಕ ಅಥವಾ ಹವಳ ಸಿರಿಗಂಧಕ** – ಈ ಬಗೆಯ ಗಂಧಕವು ಚಪ್ಪಟೆ ಇಲ್ಲವೆ ವಿವಿಧಾಕಾರದ ಕಿತ್ತಳೆಗೆಂಪು ಮಿಶ್ರಿತ ನೇರಳೆ ಅಥವಾ ಕೆಂಪು ಹರಳುಗಳ ರೂಪದಲ್ಲಿ ದೊರೆಯುತ್ತದೆ. ಈ ಗಂಧಕದ ರುಚಿ ಸ್ವಲ್ಪ ಕಹಿಯಾಗಿರುತ್ತದೆ

**ಕಪ್ಪುಗಂಧಕ** – ಈ ಗಂಧಕವು ನೇರಳೆ ಇಲ್ಲವೆ ಕಪ್ಪು ಬಣ್ಣದ್ದಾಗಿರುತ್ತದೆ

ಗಂಧಕವನ್ನು ಔಷಧ ತಯಾರಿಕೆಗೆ ಬಳಸುವಾಗ ಮೊದಲು ಆಯುರ್ವೇದ ಪದ್ಧತಿಯಂತೆ ಶುಚಿಮಾಡಿ ಶಿದ್ಧೀಕರಿಸಿ ಬಳಸುವುದು ಅತ್ಯಾವಶ್ಯಕ



# ಗೌರಿಪಾಷಾಣ

| | |
|---|---|
| ರಾಸಾಯನಿಕ ಹೆಸರು | ಆರ್ಸೆನಿಕ್ ಪೆಂಟಸಲ್ಫೈಡ್ |
| ರಾಸಾಯನಿಕ ಸೂತ್ರ | $As_2S_5$ |
| ಇತರ ಭಾಷೆಯ ಹೆಸರುಗಳು | |
| | ಹಿಂ - ಗೌರಿಪಾಷಾಣ್ |
| | ತ - ಗೌರಿಪಾಷಾಣಂ |
| | ತೆ - ಗೌರಿಪಾಷಾಣಮು |

**ಪರಿಚಯ**

ಇದು ಆರ್ಸೆನಿಕ್ ದಾತುವಿನ ಒಂದು ಲವಣರೂಪ ಇದು ಪ್ರಾಕೃತಿಕವಾಗಿ ಕಿತ್ತಳೆಗೆಂಪಿನ ಹೆಂಟೆರೂಪದಲ್ಲಿ ದೊರೆಯುತ್ತದೆ ಇದೂ ಸಹ ಆರ್ಸೆನಿಕ್ ನ ಇತರ ಲವಣಗಳಂತೆ ವಿಷವಸ್ತುವಾದುದರಿಂದ ಬಳಸುವ ಮೊದಲು ಆಯುರ್ವೇದ ಪದ್ಧತಿಯ ಪ್ರಕಾರ ಶುದ್ಧೀಕರಿಸಿಕೊಳ್ಳಬೇಕು ಉಪಯೋಗಿಸುವಾಗ ವೈದ್ಯರ ನೆರವು ಅತ್ಯಾವಶ್ಯಕ



# ಚೌಳುಪ್ಪು (ಚೌಳುಮಣ್ಣು, ಸರ್ಜಕ್ಷಾರ)

| | |
|---|---|
| ರಾಸಾಯನಿಕ ಹೆಸರು | ಸೋಡಿಯಂ ಕಾರ್ಬೋನೇಟ್ |
| ರಾಸಾಯನಿಕ ಸೂತ್ರ | $Na_2Co_3$ 10 $H_2O$ |
| ಇತರ ಭಾಷೆಯ ಹೆಸರುಗಳು | |
| | ಇಂ. - ವಾಷಿಂಗ್ ಸೋಡ, ದೋಬೀಸ್ ಅರ್ಥ್, ಫುಲ್ಲರ್ಸ್ ಅರ್ಥ್ |
| | ಸಂ - ಸರ್ಜಿಕ ಕ್ಷಾರ |
| | ಹಿಂ. - ಸಜ್ಜಿಕಾರ್ |
| | ತ - ಚೊಂಟುಮಣ್ಣು, ಸಂಚಿಕಾರಂ |
| | ತೆ - ಸವಿತ್ ಮಣ್ಣು |

**ಪರಿಚಯ**

ನದಿಗಳು ಹುಟ್ಟಿಹರಿಯುವ ಸ್ಥಳಗಳಲ್ಲಿರುವ ಶಿಲೆಗಳು ರಾಸಾಯನಿಕ ಕ್ರಿಯೆಯಿಂದ ಶಿಥಿಲಗೊಂಡಾಗ ಈ ಲವಣವು ಉತ್ಪತ್ತಿಯಾಗುತ್ತದೆ ಆಫ್ರಿಕಾ, ಭಾರತದ ಸಿಂದ್ ಮತ್ತು ಕಚ್ ಪ್ರಾಂತ್ಯಗಳಲ್ಲಿ ಚೌಳುಮಣ್ಣಿನ ನಿಕ್ಷೇಪಗಳಿವೆ ಕರ್ನಾಟಕದ ನಾನಾ ಭಾಗಗಳಲ್ಲಿ ಈ ಉಪ್ಪು ನೈಸರ್ಗಿಕವಾಗಿ ದೊರೆಯುತ್ತದೆ

ಚೌಳುಪ್ಪನ್ನು ಕೃತಕವಾಗಿಯೂ ತಯಾರಿಸಲಾಗುತ್ತಿದೆ ಶೀತಲ ಅಡಿಗೆ ಉಪ್ಪಿನ ದ್ರಾವಣಕ್ಕೆ ಅಮೋನಿಯಂ ಬೈಕಾರ್ಬೋನೇಟ್ ಅನ್ನು ಮಿಶ್ರಮಾಡಿದಾಗ ಸೋಡಿಯಂ ಬೈಕಾರ್ಬೋನೇಟ್ ಉತ್ಪತ್ತಿಯಾಗುತ್ತದೆ ಇದನ್ನು ಮತ್ತೆ ಕಾಯಿಸಿದಾಗ ಚೌಳುಪ್ಪು ಉಂಟಾಗುತ್ತದೆ.



# ನವಾಸಾಗರ

| | |
|---|---|
| ರಾಸಾಯನಿಕ ಹೆಸರು | ಅಮೋನಿಯಂ ಕ್ಲೋರೈಡ್ |
| ರಾಸಾಯನಿಕ ಸೂತ್ರ | $NH_4Cl$ |
| ಇತರ ಭಾಷೆಯ ಹೆಸರುಗಳು | ಇಂ - ಸಾಲ್ ಅಮೋನಿಕ್ |
| | ಸಂ - ನವಸಾರ, ನವಸಾಗರ, ಚುಲಿಕ ಲವಣ |
| | ಹಿಂ - ನವಾಚಾರ್ |
| | ತ - ನವಚೂರ್ಣಂ, ನವಚಾರಂ |
| | ತೆ - ನವಸೂರ್ಣಂ, ನವಚಾರಮು |

**ಪರಿಚಯ**

ನವಾಸಾಗರವು ನೈಸರ್ಗಿಕವಾಗಿ ದೊರೆಯುವುದಿಲ್ಲ. ಈ ಮೊದಲು ವಿವಿಧ ಪ್ರಾಣಿಗಳ ಮಲವನ್ನು ಅಥವಾ ಕಲ್ಲಿದ್ದಲನ್ನು ಅಥವಾ ಉಪ್ಪನ್ನು ಉರಿಸಿ ಇದನ್ನು ತಯಾರಿಸುತ್ತಿದ್ದರು ಇದರ ಬಳಕೆ ಕೈಗಾರಿಕೆಗಳಲ್ಲಿ ಹೆಚ್ಚಾಗಿರುವುದರಿಂದ ಹೆಚ್ಚಿನ ಪ್ರಮಾಣದಲ್ಲಿ ಇದನ್ನು ಕೃತಕವಾಗಿ ತಯಾರಿಸಲಾಗುತ್ತಿದೆ

ನವಾಸಾಗರಗಳಲ್ಲಿ ಬಿಳಿ ಬಣ್ಣದ ಹರಳುಗಳ ರೂಪದಲ್ಲಿರುತ್ತದೆ ಅಶುದ್ಧವಾಗಿದ್ದಲ್ಲಿ ಮಾತ್ರ ಕಂದು ಬಣ್ಣಕ್ಕಿರುತ್ತದೆ ಇದಕ್ಕೆ ಅಮೋನಿಯ ಅನಿಲದ ಘಾಟು ವಾಸನೆಯಿರುತ್ತದೆ ವಾಸನೆ ಕೆಲವರಿಗೆ ವಾಕರಿಕೆ ತರಿಸಲೂಬಹುದು

ನವಾಸಾಗರವನ್ನು ಔಷಧಿಯಾಗಿ ಬಳಸುವಾಗ ಮೊದಲು ಬಿಸಿನೀರಿನಲ್ಲಿ ಕರಗಿಸಿ ನಂತರ ದ್ರಾವಣವನ್ನು ಸೋಸಿಕೊಂಡು ಮತ್ತೆ ಹಿಂಗಿಸಿದಾಗ ದೊರೆಯುವ ಬಿಳಿಬಣ್ಣದ ಪುಡಿಯನ್ನು ಮಾತ್ರ ಉಪಯೋಗಿಸಬೇಕು



# ಪಟಿಕ (ಪಟಿಕಾರ)

ರಾಸಾಯನಿಕ ಹೆಸರು ಅಲ್ಯುಮಿನಿಯಂ ಪೊಟ್ಯಾಶಿಯಂ ಸಲ್ಫೇಟ್

ರಾಸಾಯನಿಕ ಸೂತ್ರ $Alk(So_4)_2$ 12 $H_20$

ಇತರ ಭಾಷೆಯ ಹೆಸರುಗಳು

ಇಂ - ಆಲಂ, ಪೊಟ್ಯಾಷ್ ಆಲಂ

ಸಂ. - ಸ್ಪಟಿಕಾರಿ

ಹಿಂ - ಫಿಟಿಕಾರಿ

ತ. - ಪಟಿಕಾರಂ, ಪಡಿಕಾರಂ

ತೆ - ಪಟ್ಟಿಕಾರಮು

**ಪರಿಚಯ**

ಪಟಿಕವು ಬಣ್ಣವಿಲ್ಲದ, ಪಾರದರ್ಶಕ ಹರಳು ರೂಪದಲ್ಲಿ ನೈಸರ್ಗಿಕವಾಗಿ ದೊರೆಯುತ್ತದೆ ಪಂಜಾಬ್ ಮತ್ತು ಬಿಹಾರ ರಾಜ್ಯಗಳಲ್ಲಿ ಪಟಿಕವನ್ನು ಭೂಮಿಯಿಂದ ಹೊರತೆಗೆಯುತ್ತಾರೆ ಪ್ರಾಕೃತಿಕವಾಗಿ ದೊರೆಯುವ ಪಟಿಕದಲ್ಲಿ ಕಲ್ಮಷಗಳಿರುವುದರಿಂದ ಶುದ್ಧಿಗೊಳಿಸದೆ ಔಷಧ ತಯಾರಿಕೆಗೆ ಬಳಸಬಾರದು ಪಟಿಕವನ್ನು ಸಾಕಷ್ಟು ಪ್ರಮಾಣದ ಬಿಸಿನೀರಿನಲ್ಲಿ ಕರಗಿಸಿ ನಂತರ ಸೋಸುವ ಕಾಗದ ಅಥವಾ ಮಂದ ಬಟ್ಟೆಯಲ್ಲಿ ಸೋಸಿ ಬಂದ ದ್ರಾವಣವನ್ನು ಇಂಗಿಸಿ ಶುದ್ಧ ರೂಪದ ಪಟಿಕವನ್ನು ಪಡೆಯಬಹುದು

ಪಟಿಕವನ್ನು ಕೃತಕವಾಗಿಯೂ ತಯಾರಿಸುತ್ತಾರೆ ಬಾಕ್ಸೈಟ್ ಅದಿರು ಮತ್ತು ಪೊಟ್ಯಾಶಿಯಂ ಲವಣಗಳ ಮಿಶ್ರಣಕ್ಕೆ ಗಂಧಕಾಮ್ಲವನ್ನು ಸೇರಿಸಿದಾಗ ರಾಸಾಯನಿಕ ಕ್ರಿಯೆಯುಂಟಾಗಿ ಪಟಿಕವು ಹರಳುರೂಪದಲ್ಲಿ ಉತ್ಪತ್ತಿಯಾಗುತ್ತದೆ



# ಪಾದರಸ

ರಾಸಾಯನಿಕ ಹೆಸರು ಮರ್ಕ್ಯುರಿ

ರಾಸಾಯನಿಕ ಸೂತ್ರ $H_g$

ಇತರ ಭಾಷೆಯ ಹೆಸರುಗಳು

ಇಂ - ಮರ್ಕ್ಯುರಿ, ಕ್ವಿಕ್ ಸಿಲ್ವರ್

ಸಂ - ಪಾರಜ, ಪಾರದ, ರಸ

ಹಿಂ. - ಪಾರ

ತ - ಪಾದರಸಮ್

ತೆ. - ಪಾದರಸಮು

**ಪರಿಚಯ**

ವೈದ್ಯರಿಗೆ ಮತ್ತು ರಸವಾದಿಗಳಿಗೆ ಬಹಳ ಹಿಂದಿನಿಂದಲೂ ಚಿರಪರಿಚಿತವಾದದ್ದು ಈ ಪಾದರಸ. ಇದು ಸಾಮಾನ್ಯ ಉಷ್ಣತೆಯಲ್ಲಿ ದ್ರವರೂಪದಲ್ಲಿರುವ ಲೋಹವಾದುದರಿಂದ ಇದನ್ನು ದ್ರವಲೊಹವೆಂದೂ ಕರೆಯುತ್ತಾರೆ ಪಾದರಸ ನೈಸರ್ಗಿಕವಾಗಿ ಸಣ್ಣ ಸಣ್ಣ ಬೆಳ್ಳಿ ಬಣ್ಣದ ಬಿಂದುಗಳ ರೂಪದಲ್ಲಿ ದೊರೆಯುತ್ತದೆ ಈ ರೀತಿಯಲ್ಲಿ ಪಾದರಸ ದೊರೆಯುವುದು ಬಹಳ ಅಪರೂಪ. ಆದರೆ ಕೆಂಪು ಬಣ್ಣದ ಪಾದರಸದ ಅದಿರಿನ ರೂಪದಲ್ಲಿ ವಿಫುಲವಾಗಿ ಸ್ಪೇನ್ ದೇಶದ ಅಲ್ಮಾಡೆನ್ ಮತ್ತು ಇಟಲಿಯ ಕಾರ್ನಿಯೋಲಾ ಗಣಿಗಳಲ್ಲಿ ದೊರೆಯುತ್ತದೆ ಪಾದರಸದ ಅದಿರನ್ನು 'ಸಿನ್ನಬಾರ್' ಎಂದು ಕರೆಯುತ್ತಾರೆ. ಸಿನ್ನಬಾರನ್ನು ವಾಯುವಿನಲ್ಲಿ ಹಾಗೆಯೇ ಅಥವಾ ಸುಣ್ಣದೊಡನೆ ಹುರಿದಾಗ ಪಾದರಸ ದ್ರವರೂಪದಲ್ಲಿ ಬಿಡುಗಡೆಯಾಗುತ್ತದೆ. ಇದನ್ನು ನೀರಿನಿಂದ ತಣಿಸಿ ಸಂಗ್ರಹಿಸುತ್ತಾರೆ

ಪಾದರಸ ಬೆಳ್ಳಿ ಬಣ್ಣದ ದ್ರವಲೋಹ ಸುರಿದಾಗ ಇತರ ದ್ರವಗಳಂತೆ ಹರಿದು ಹೋಗುವುದಿಲ್ಲ ಬದಲಾಗಿ ಸಣ್ಣಸಣ್ಣ ಹನಿಗಳಾಗಿ ಬೇರ್ಪಡುತ್ತದೆ. ಗಾಜಿಗೆ ಅಂಟುವುದಿಲ್ಲ ನೀರಿನಲ್ಲಿ ಕರಗುವುದಿಲ್ಲ ಆದರೆ ಬಿಸಿ ಗಂಧಕಾಮ್ಲದಲ್ಲಿ ಕರಗುತ್ತದೆ ಪಾದರಸವನ್ನು ಕೆಂಪಗೆ ಕಾಯಿಸಿದಾಗ ಅನಿಲರೂಪಕ್ಕೆ ತಿರುಗಿ ಆವಿಯಾಗುತ್ತದೆ

ದ್ರವರೂಪದ ಪಾದರಸವನ್ನು ಔಷಧಿಯಾಗಿ ಬಳಸುವುದಿಲ್ಲ ಆದರೆ ಪಾದರಸವನ್ನು ಮಾರಣ ಮಾಡಿ ಭಸ್ಮರೂಪದ ಪಾದರಸವನ್ನು ಉಪಯೋಗಿಸುತ್ತಾರೆ ಪಾದರಸವನ್ನು ,ಮಾರಣ ಮಾಡಲು ಸುಮಾರು 64 ಬಗೆಯ ಸಸ್ಯಗಳನ್ನು ಉಪಯೋಗ ಮಾಡಲಾಗುತ್ತದೆಂಬ ವಿಷಯವು ಆಯುರ್ವೇದ ಗ್ರಂಥಗಳಲ್ಲಿ ಸಿಗುತ್ತದೆ ಪಾದರಸವನ್ನು ವಿವಿಧ ರೀತಿಯಲ್ಲಿ ಮಾರಣ ಮಾಡಿ 4 ಬಗೆಯ ಪಾದರಸದ ಭಸ್ಮವನ್ನು ತಯಾರಿಸುತ್ತಾರೆ ಅವುಗಳೆಂದರೆ-

1 ಕ್ರಿಷ್ಣ ಭಸ್ಮ (ರಸ ಪರ್ಪತಿ) (ಕಪ್ಪು ಬಣ್ಣದ ಭಸ್ಮ)

2 ಶ್ವೇತ ಭಸ್ಮ (ರಸ ಕರ್ಪೂರ) [ಬಿಳಿ ಭಸ್ಮ]

3 ಪೀತ ಭಸ್ಮ [ಹಳದಿ ಭಸ್ಮ]

4 ರಕ್ತ ಭಸ್ಮ (ರಸ ಸಿಂಧೂರ) [ಕೆಂಪು ಭಸ್ಮ]

ಪಾದರಸದ ಎಲ್ಲಾ ಬಗೆಯ ಭಸ್ಮಗಳೂ ವಿಷವಸ್ತುಗಳಾದುದರಿಂದ ಉಪಯೋಗಿಸಲು ವೈದ್ಯರ ಸಲಹೆ ಸೂಚನೆಗಳು ಅತ್ಯಾವಶ್ಯಕ.



# ಪೆಟ್ಲುಪ್ಪು (ಸೋರುಪ್ಪು)

| | |
|---|---|
| ರಾಸಾಯನಿಕ ಹೆಸರು | ಪೊಟಾಸಿಯಂ ನೈಟ್ರೇಟ್ |
| ರಾಸಾಯನಿಕ ಸೂತ್ರ | $KNO_3$ |
| ಇತರ ಭಾಷೆಯ ಹೆಸರುಗಳು · | ಇಂ. - ಸಾಲ್ಟಪೀಟರ್ |
| | ಸಂ - ಸುರಕ್ಷಾರ |
| | ಹಿಂ. - ಶೋರ, ಸೋರ, ಶೋರಕಾರ್ ಸೊರಕಾಲ್ಮಿ |
| | ತ - ಪೊಟ್ಟಿಲುಪ್ಪು |
| | ತೆ. - ಪಾಟ್ಲುಪ್ಪು, ಪೆಟ್ಲುಪ್ಪು, ಸುರೇಕರಮು |

**ಪರಿಚಯ**

ನೈಸರ್ಗಿಕವಾಗಿ ದೊರೆಯುವ ಪೊಟಾಸಿಯಂ ನೈಟ್ರೇಟ್ ಅನ್ನು ಸಾಲ್ಟಪೀಟರ್ ಎಂದು ಕರೆಯುತ್ತಾರೆ. ಇದು ಸ್ವಾಭಾವಿಕವಾಗಿ ಮಿಸಿಸಿಪಿ ಕಣಿವೆ, ಸ್ಪೇನ್, ಇಟಲಿ, ಈಜಿಪ್ಟ, ಇರಾನ್ ಮತ್ತು ಭಾರತ ದೇಶಗಳಲ್ಲಿ ದೊರೆಯುತ್ತದೆ ಭೂಮಿಯ ಮೇಲ್ಮೈಯಲ್ಲಿ ಹಾಗೂ ಗುಹೆಗಳ ಒಳಗೆ ಅಲ್ಲಲ್ಲಿ ಸ್ಪಟಿಕರೂಪದಲ್ಲಿ ಹೆಪ್ಪುಗಟ್ಟಿರುತ್ತದೆ ಹೀಗೆ ಭೂಪದರದ ಮೇಲೆ ಉಂಟಾಗಲು ನೈಟ್ರೀಕರಿಸುವ ಸೂಕ್ಷ್ಮಜೀವಿಗಳು ಕಾರಣವೆಂದು ಈಗ ತಿಳಿಯಲಾಗಿದೆ ನೈಸರ್ಗಿಕವಾಗಿ ದೊರೆಯುವ ಪೆಟ್ಲುಪ್ಪನ್ನು ನೀರಿನಲ್ಲಿ ಕರಗಿಸಿ ಸೋಸಿ ಬಂದ ದ್ರಾವಣವನ್ನು ಇಂಗಿಸಿ ಶುದ್ಧ ಪೆಟ್ಲುಪ್ಪನ್ನು ಪಡೆಯುತ್ತಾರೆ

ಪೆಟ್ಲುಪ್ಪಿನ ಬಳಕೆ ಕೈಗಾರಿಕೆಯಲ್ಲಿ ಔಷಧಿ ತಯಾರಿಕೆಯಲ್ಲಿ ಹೆಚ್ಚಾಗಿರುವುದರಿಂದ ಈ ಅವಶ್ಯಕತೆಯನ್ನು ಪೂರೈಸಲು ಅಸಾಧ್ಯವಾದುದರಿಂದ ಇದನ್ನು ಕೃತಕವಾಗಿ ತಯಾರಿಸಲಾಗುತ್ತಿದೆ. ಪೊಟಾಸಿಯಂ ಕ್ಲೋರೈಡ್ ಮತ್ತು ಸೋಡಿಯಂ ನೈಟ್ರೈಟ್ ಗಳ ಬಿಸಿ ಪರ್ಯಾಪ್ತ ದ್ರಾವಣಗಳನ್ನು ಮಿಶ್ರಮಾಡಿದಾಗ

ಪೊಟಾಸಿಯಂ ನೈಟ್ರೈಟ್ (ವೆಟ್ಲುಪ್ಪು) ಉತ್ಪತ್ತಿಯಾಗುತ್ತದೆ ಬಿಸಿದ್ರಾವಣದಲ್ಲಿ ವಿಲೀನಗೊಂಡಿರುವ ಸೋಡಿಯಂ ಕ್ಲೋರೈಡ್ (Nacl) ಹರಳುಗಳ ರೂಪದಲ್ಲಿ ಮೊದಲು ಪ್ರತ್ಯೇಕವಾಗುತ್ತದೆ ಇದನ್ನು ಶೋಧಿಸಿದಾಗ ಉಳಿಯುವ ದ್ರಾವಣವನ್ನು $20^{0}$ ಸೆಂ.ಗಿಂತ ಕೆಳಗೆ ಶಿತಲೀಕರಿಸಿದಾಗ ವೆಟ್ಲುಪ್ಪು ಸ್ಫಟಿಕರೂಪದಲ್ಲಿ ಕಾಣಿಸಿಕೊಳ್ಳುತ್ತದೆ.

ವೆಟ್ಲುಪ್ಪಿನ ಹರಳುಗಳು ನೀಳವಾಗಿದ್ದು ಬಿಳಿ ಅಥವಾ ಗಾಜಿನ ಹರಳುಗಳಂತೆ ಹೊಳೆಯುತ್ತಿರುತ್ತವೆ ಪಚ್ಚಕರ್ಪೂರದಂತೆ ಕಂಪು ಮತ್ತು ರುಚಿಯಲ್ಲಿ ಅಡಿಗೆ ಉಪ್ಪಿನಂತೆ ಉಪ್ಪಾಗಿರುತ್ತದೆ.



# ಬಿಡಲವಣ

ಇತರ ಭಾಷೆಯ ಹೆಸರುಗಳು ಇಂ - ಬ್ಲ್ಯಾಕ್ ಸಾಲ್ಟ್, ಬಿಟ್ ಸಾಲ್ಟ್, ಸಂಚಾಲ್ ಸಾಲ್ಟ್
ಸಂ. - ಬಿಡಲವಣ
ಹಿಂ - ಬಿಡಲವಣಮ್
ತ. - ಬಿಡಲವಣ

**ಪರಿಚಯ**

ಇದೂ ಸಹ ಕಾಚಲವಣದಂತೆ ಒಂದು ಮಿಶ್ರಲವಣ ಇದು ನೈಸರ್ಗಿಕವಾಗಿ ದೊರೆಯುವುದಿಲ್ಲ ಇದನ್ನು ಕೃತಕವಾಗಿ ತಯಾರಿಸಿ ಬಳಸಲಾಗುತ್ತಿದೆ ಇದನ್ನು ತಯಾರಿಸುವ ಎರಡು ವಿಧಾನವನ್ನು ಇಲ್ಲಿ ಕೊಡಲಾಗಿದೆ 1) ಒಂದು ಕಿ ಗ್ರಾಂ ವೆಟ್ಲುಪ್ಪನ್ನು ಬಾಣಲೆಯಲ್ಲಿ ಹಾಕಿ ಕರಗಿ ನೀರಾಗುವವರೆಗೆ ಕಾಯಿಸಬೇಕು. ನಂತರ 500 ಗ್ರಾಂ ನಷ್ಟು ಚೂರು ಮಾಡಿದ ಎಮ್ಮೆಯ ಅಥವಾ ಜಿಂಕೆಯ ಕೊಂಬನ್ನು ಸೇರಿಸಿ ಜಿಗುಟಿನಂತಾಗುವವರೆಗೆ ಮತ್ತೆ ಕಾಯಿಸಬೇಕು ಇದಕ್ಕೆ 150 ಗ್ರಾಂನಷ್ಟು ಪಟಿಕವನ್ನು ಸೇರಿಸಿ ಚೆನ್ನಾಗಿ ತಿರುವಿ ಕೆಳಗಿಳಿಸಿ ಆರಲು ಬಿಡಬೇಕು ಈ ಮಿಶ್ರಣದ ನಾಲ್ಕು ಭಾಗದಷ್ಟು ಶುದ್ಧ ನೀರನ್ನು ಸೇರಿಸಿ ಚೆನ್ನಾಗಿ ತಿರುವಿ, ಮೇಲಿನ ತಿಳಿಯನ್ನು ಮಾತ್ರ ಬೇರೆ ಪಾತ್ರೆಗೆ ಬಸಿದುಕೊಂಡು ನೀರೆಲ್ಲ ಆವಿಯಾಗುವವರೆಗೆ ಒಲೆಯ ಮೇಲಿಟ್ಟು ಕಾಯಿಸಿದರೆ ತಳದಲ್ಲಿ ಬೀಡಲವಣ ಉಳಿಯುತ್ತದೆ. 2) ಸುಮಾರು 450 ಗ್ರಾಂ ಅಡಿಗೆ ಉಪ್ಪಿಗೆ, 12 5 ಗ್ರಾಂ ಪುಡಿ ಮಾಡಿದ ಬೆಟ್ಟದನೆಲ್ಲಿಕಾಯಿಯ ಚೂರ್ಣ ಸೇರಿಸಿ ಚೆನ್ನಾಗಿ ಬೆರೆಸಿಟ್ಟುಕೊಳ್ಳಬೇಕು ಬಾಣಲೆಯನ್ನು ಚೆನ್ನಾಗಿ ಕಾಯಿಸಿಕೊಂಡು ಒಂದು ಸಾರಿಗೆ ಒಂದು ಚಮಚದಷ್ಟು ಮಿಶ್ರಣವನ್ನು ಹಾಕಿ ಕರಕಾದನಂತರ ಬೇರೆ ಪಾತ್ರೆಗೆ ಬಗ್ಗಿಸಿಕೊಂಡು ಉಪಯೋಗಿಸಬಹುದು



# ಬಿಳಿಗಾರ (ಟಂಕಣಕಾರ)

| | |
|---|---|
| ರಾಸಾಯನಿಕ ಹೆಸರು | ಸೋಡಿಯಂ ಟೆಟ್ರಾಬೊರೇಟ್ |
| ರಾಸಾಯನಿಕ ಸೂತ್ರ | $Na_2B_4O_7, 10H_2O$ |
| ಇತರ ಭಾಷೆಯ ಹೆಸರುಗಳು | ಇಂ - ಬೊರಾಕ್ಸ್, ಬೊರಾಕ್ಸ್‌ಟಿಂಕಾಲ್ |
| | ಸಂ - ಟಂಕ, ಟಂಕಣ, ಟಂಗ |
| | ಹಿಂ - ಟಿಂಕಾಲ್ |
| | ತ. - ವೆಂಕಾರಂ, ವೆಂಗಾರಮಂ |
| | ತೆ - ವೆಳ್ಳಿಗಾರಂ, ಎಳೆಗಾರಂ |

**ಪರಿಚಯ**

ಉಪ್ಪು ನೀರಿನ ಸರೋವರಗಳು ಮತ್ತು ಬಿಸಿನೀರಿನ ಬುಗ್ಗೆಗಳು ಒಣಗಿದಾಗ ಉಳಿಯುವ ಮಣ್ಣಿನಲ್ಲಿ ಬಿಳಿಬಣ್ಣದ ಹರಳುಗಳ ರೂಪದಲ್ಲಿ ಬಿಳಿಗಾರವು ದೊರೆಯುತ್ತದೆ ಭಾರತ, ನೇಪಾಳ, ಟಿಬೆಟ್ ಮುಂತಾದ ಕಡೆ ಇದನ್ನು ಭೂಮಿಯಿಂದ ಹೊರತೆಗೆಯುತ್ತಾರೆ ನೈಸರ್ಗಿಕವಾಗಿ ದೊರೆಯುವ ಬಿಳಿಗಾರದಲ್ಲಿ ಅಲ್ಪ ಪ್ರಮಾಣದಲ್ಲಿ ಉಪ್ಪು ಮತ್ತು ಗಂಧಕ ಮಿಶ್ರಿತವಾಗಿರುತ್ತದೆ. ಇಂತಃ ಬಿಳಿಗಾರವನ್ನು ನೀರಿನಲ್ಲಿ ಕರಗಿಸಿ ಸೋಸಿಕೊಂಡ ದ್ರಾವಣವನ್ನು ಇಂಗಿಸಿ ಶುದ್ಧ ಬಿಳಿಗಾರವನ್ನು ಪಡೆಯುತ್ತಾರೆ. ಶುದ್ಧ ಬಿಳಿಗಾರವು ಪಾರದರ್ಶಕ ಹರಳು ರೂಪದಲ್ಲಿರುತ್ತದೆ ಕ್ರಮೇಣ ವಾತಾವರಣದ ಸಂಪರ್ಕದಿಂದಾಗಿ ಬಿಳಿಪುಡಿಯ ರೂಪ ತಳೆಯುತ್ತದೆ ಬಿಳಿಗಾರದ ರುಚಿ ಸ್ವಲ್ಪ ಕಹಿಯಾಗಿರುತ್ತದೆ ತಣ್ಣೀರಿಗಿಂತ ಬಿಸಿನೀರಿನಲ್ಲಿ ಚೆನ್ನಾಗಿ ಕರಗುತ್ತದೆ.

ಕೃತಕವಾಗಿಯೂ ಬಿಳಿಗಾರವನ್ನ ತಯಾರಿಸಲಾಗುತ್ತಿದೆ. ಬಿಸಿಮಾಡಿದ ಬೋರಿಕ್ ಆಮ್ಲವನ್ನು ಸಾಕಷ್ಟು ಪ್ರಮಾಣದ ಸೋಡಾ ಆ್ಯಷ್ ನೊಂದಿಗೆ ಬೆರಸಿ ಚೆನ್ನಾಗಿ ಕಾಯಿಸಿ ಬತ್ತಿಸಿ ತಂಪಾಗಿಸಿದರೆ ಬಿಳಿಗಾರ ಹರಳುರೂಪದಲ್ಲಿ ಉತ್ಪತ್ತಿಯಾಗುತ್ತದೆ



# ಮಣಿಶಿಲೆ

| | |
|---|---|
| ರಾಸಾಯನಿಕ ಹೆಸರು | ಆರ್ಸೆನಿಕ್ ಡೈಸಲ್ಫೈಡ್ |
| ರಾಸಾಯನಿಕ ಸೂತ್ರ | $As_2S_2$ |
| ಇತರ ಭಾಷೆಯ ಹೆಸರುಗಳು | ಇಂ - ರೆಡ್ ಆರ್ಪಿಮೆಂಟ್ |
| | ಸಂ - ಮಣಃಶಿಲಾ |
| | ಹಿಂ - ಲಾಲ್ ಹರತಾಳ್ |
| | ತ - ಕುದಿರೆ - ಪಾಲ್ ಪಾಷಾಣಂ |

**ಪರಿಚಯ**

ಮಣಿಶಿಲೆಯು ಅರದಾಳದಂತೆ ಆರ್ಸೆನಿಕ್ ಎಂಬ ದಾತುವಿನಿಂದ ಉಂಟಾದ ಒಂದು ಬಗೆಯ ಲವಣ ಇದು ನೈಸರ್ಗಿಕವಾಗಿ ದೊರೆಯುವುದಿಲ್ಲ. ಇದನ್ನು 5 ಭಾಗ ಆರ್ಸೆನಿಕ್ ಆಮ್ಲ ($H_3AsO_4$)ದೊಡನೆ 3 ಭಾಗ ಗಂಧಕ ಸೇರಿಸಿ ಕಾಯಿಸಿ ತಯಾರಿಸುತ್ತಾರೆ ಹೀಗೆ ಉತ್ಪತ್ತಿಯಾದ ಮಣಿಶಿಲೆಗೆ ಕಿತ್ತಳೆಗೆಂಪು ಬಣ್ಣವಿರುತ್ತದೆ ಇದನ್ನು ಔಷಧಿಯಾಗಿ ಮತ್ತು ಔಷಧ ತಯಾರಿಕೆಗೆ ಬಳಸುವಾಗ ನಿಂಬೆರಸ ಅಥವಾ ಬೆಳ್ಳುಳ್ಳಿಯೊಡನೆ ಅರೆದು ಒಣಗಿಸಿ ಶುದ್ಧಿಮಾಡಿಕೊಂಡು ಉಪಯೋಗಿಸಬೇಕು.

ಮಣಿಶಿಲೆಯು ಸಹ ಅರದಾಳದಂತೆ ವಿಷವಸ್ತುವಾದುದರಿಂದ ಅತ್ಯಲ್ಪ ಪ್ರಮಾಣದಲ್ಲಿ ಉಪಯೋಗಿಸಬೇಕು ಮತ್ತು ವೈದ್ಯರ ಸಲಹೆ ಸೂಚನೆಗಳಮೇರೆಗೆ ಬಳಸಬೇಕು



# ಮೃದಾರ್‌ಶಿಂಗಿ (ಮುದಾರ್‌ಶಿಂಗಿ, ಮುರುದಾರ್ ಶಿಂಗಿ)

ರಾಸಾಯನಿಕ ಹೆಸರು ಲೆಡ್ ಮಾನಾಕ್ಸೈಡ್

ರಾಸಾಯನಿಕ ಸೂತ್ರ Pbo

ಇತರ ಭಾಷೆಯ ಹೆಸರುಗಳು

ಇಂ - ಲಿಥಾರ್ಜ್, ಮಾಸಿಕಾಟ್

ಸಂ - ಮೃದಾರ್‌ಶ್ರಿಂಗಿ

ಹಿಂ - ಮುರ್ದಾಸಿಂಗ್

ತ. - ಮಿರುದಾರ್‌ಶಿಂಗಿ

ತೆ - ಮುದಾರ್‌ಶಿಂಗಿ

**ಪರಿಚಯ**

ಇದು ಒಂದು ಸೀಸದ ಅದಿರು. ಭೂಮಿಯಲ್ಲಿ ತಿಳಿ ಹಳದಿ ಬಣ್ಣದ ಹೆಂಟೆಯ ರೂಪದಲ್ಲಿ ದೊರೆಯುತ್ತದೆ ಹೆಂಟೆಯಲ್ಲಿ ಅದಿರಿನ ರಚನೆ ನಾರಿನಂತಿರುತ್ತದೆ ಇದನ್ನು ಔಷಧಿಯಾಗಿ ಬಳಸುವ ಮುನ್ನ ಹಸುವಿನ ಗಂಜಳದಲ್ಲಿ ಚೆನ್ನಾಗಿ ಕುದಿಸಿ ನಂತರ ಹೊರತೆಗೆದು ಎದೆ ಹಾಲಿನಲ್ಲಿ ಮತ್ತು ಮೇಕೆ ಹಾಲಿನಲ್ಲಿ ತಲಾ ನಾಲ್ಕು ಗಂಟೆಗಳ ಕಾಲ ನೆನೆ ಹಾಕಿ ಒಣಗಿಸಿಟ್ಟುಕೊಂಡು ಬೇಕೆಂದಾಗ ಬಳಸಬಹುದು.



# ಮೈಲ್‌ತುತ್ತ

| | |
|---|---|
| ರಾಸಾಯನಿಕ ಹೆಸರು | ಕಾಪರ್ ಸಲ್ಫೇಟ್ |
| ರಾಸಾಯನಿಕ ಸೂತ್ರ | $CuSO_4$ $5H_2O$ |
| ಇತರ ಭಾಷೆಯ ಹೆಸರುಗಳು | |

ಇಂ - ಬ್ಲೂ ವಿಟ್ರಿಯಾಲ್, ವರ್ಡಿಗ್ರಿಸ್, ಬ್ಲೂ ಸ್ಟೋನ್

ಸಂ - ತುತ್ಥ, ತುತ್ತಕ, ನೀಲತುತ್ತಿಯ, ಮಯೂರ ತುತ್ತಂ

ಹಿಂ - ನೀಲ್ ತುತ್ತ

ತ - ಮಯಿಲ್ ತುತ್ತಂ, ತುತ್ತಂತುರಿಚಿ

ತೆ - ಮೈಲ್ ತುತ್ತಮು

**ಪರಿಚಯ**

ಮೈಲ್ ತುತ್ತ ನೈಸರ್ಗಿಕವಾಗಿ ದೊರೆಯುವುದು ಬಲು ಅಪರೂಪ ಆದರೆ ಬಹಳವಾಗಿ ಇದನ್ನು ಕೃತಕವಾಗಿ ತಯಾರಿಸಿ ಎಲ್ಲೆಡೆ ಬಳಸಲಾಗುತ್ತಿದೆ ಈ ಮೊದಲು ತಾಮ್ರದ ಅದಿರನ್ನು ಗಂಧಕದೊಡನೆ ಉರಿಸಿ ಬಂದ ವಸ್ತುವನ್ನು ನೀರಿನಲ್ಲಿ ಕರಗಿಸಿ ಬಂದ ದ್ರಾವಣವನ್ನು ಇಂಗಿಸಿ ಮೈಲ್ ತುತ್ತವನ್ನು ಪಡೆಯುತ್ತಿದ್ದರು ಆದರೆ ಈಗ ತಾಮ್ರದ ರೇಖುಗಳನ್ನು ಗಂಧಕಾಮ್ಲದಲ್ಲಿ ಅದ್ದಿ ಹೆಚ್ಚಿನ ಪ್ರಮಾಣದಲ್ಲಿ ಕೃತಕವಾಗಿ ಕಾರ್ಖಾನೆಗಳಲ್ಲಿ ತಯಾರಿಸಲಾಗುತ್ತಿದೆ ಹೀಗೆ ಉತ್ಪತ್ತಿಯಾದ ಮೈಲ್ ತುತ್ತವು ನೀಲಿ ಬಣ್ಣದ ಹರಳುಗಳ ರೂಪದಲ್ಲಿರುತ್ತದೆ ಇದನ್ನು ಕಾಯಿಸಿದಾಗ ನೀಲಿ ಬಣ್ಣವನ್ನು ಕಳೆದುಕೊಂಡು ಬಿಳಿ ಬಣ್ಣದ ಪುಡಿಯಾಗಿ ಪರಿವರ್ತನೆಯಾಗುತ್ತದೆ

ಮೈಲ್‌ತುತ್ತ ಅತ್ಯಂತ ಅಪಾಯಕಾರಿ ವಿಷವಸ್ತು ಇದನ್ನು ಸೇವಿಸಲು ಕೊಡುವಂತಹ ಔಷಧಿ ತಯಾರಿಸುವಾಗ ಆಯುರ್ವೇದ ಪದ್ಧತಿಯಲ್ಲಿ ತಿಳಿಸಿರುವಂತಹ ದ್ರವ್ಯ ಶುದ್ಧಿ ಕ್ರಮವನ್ನು ಅನುಸರಿಸಿ ಶುದ್ಧಿ ಮಾಡಿಕೊಂಡು ಉಪಯೋಗಿಸಬೇಕಾಗುತ್ತದೆ (ಮೈಲ್ ತುತ್ತವನ್ನು ತುಪ್ಪ ಅಥವಾ ಜೇನುತುಪ್ಪದೊಡನೆ ಚೆನ್ನಾಗಿ ಮರ್ಧನಮಾಡಿ ಪಿಂಗಾಣಿ ಬಟ್ಟಲಲ್ಲಿ ಹಾಕಿ ಕಾಯಿಸಿದಾಗ ಬಿಳಿ ಪುಡಿಯಾಗುತ್ತದೆ. ಇದನ್ನು ಮಜ್ಜಿಗೆಯಲ್ಲಿ ನೆನೆಹಾಕಿ ಒಣಗಿಸುವುದರಿಂದ ಮೈಲ್ ತುತ್ತ ಶುದ್ಧಿಯಾಗುತ್ತದೆ) ಮೈಲ್ ತುತ್ತಯುಕ್ತ ಔಷಧಿ ತಯಾರಿಕೆಗೆ ಮತ್ತು ಬಳಕೆಗೆ ವೈದ್ಯರ ನೆರವು ಅತ್ಯಗತ್ಯ.



# ಯವಕ್ಷಾರ (ಮರದ-ಉಪ್ಪು)

ರಾಸಾಯನಿಕ ಹೆಸರು ಪೊಟಾಸಿಯಂ ಕಾರ್ಬೊನೇಟ್

ರಾಸಾಯನಿಕ ಸೂತ್ರ $K_2CO_3$

ಇತರ ಭಾಷೆಯ ಹೆಸರುಗಳು

ಇಂ - ಸಾಲ್ಟ್‌ಟಾರ್ಟಾರ್, ಪೆರಲ್ ಆಷ್

ಸಂ - ಯವಕ್ಷಾರ, ದಾರುಲವಣ

ಹಿಂ - ಜವಖಾರ, ಖಾರ

ತ - ಸಾಂಬಾಲ್ ಉಪ್ಪು, ಮರುಪ್ಪು, ಯವಕಾರಂ

ತೆ - ಮಣ್ಣುಪ್ಪು

**ಪರಿಚಯ**

ಯವಕ್ಷಾರವು ನೈಸರ್ಗಿಕವಾಗಿ ಬಂಡೆಗಳಲ್ಲಿ ಮತ್ತು ವಿವಿಧ ಬಗೆಯ ಲವಣಗಳ ಜೊತೆ ದೊರೆಯುತ್ತದೆ ಈ ಲವಣವು ಹಲವಾರು ಬಗೆಯ ಸಸ್ಯಗಳಲ್ಲಿ ಮತ್ತು ಪ್ರಾಣಿಗಳ ದೇಹದೊಳಗೆ ಸಂಗ್ರಹಿತವಾಗಿರುತ್ತದೆ ಗೋಧಿ ಅಥವಾ ಬಾರ್ಲಿ ಗಿಡವನ್ನು ಸುಟ್ಟು ಬೂದಿಮಾಡಿ ಆ ಬೂದಿಯನ್ನು ನೀರಿನಲ್ಲಿ ಕರಗಿಸಿ ಸೋಸಿಕೊಂಡ ದ್ರಾವಣವನ್ನು ಇಂಗಿಸಿದಾಗ ನೀರೆಲ್ಲ ಆವಿಯಾಗಿ ತಳದಲ್ಲಿ ಬಿಳಿ ಬಣ್ಣದ ಪುಡಿರೂಪದಲ್ಲಿ ಶೇಖರವಾಗುತ್ತದೆ ಉಣ್ಣೆಯನ್ನು ಮಧ್ಯಸಾರದಲ್ಲಿ ತೊಳೆದಾಗ ಬರುವ ಮಧ್ಯಸಾರ ದ್ರಾವಣವನ್ನು ಇಂಗಿಸಿದಾಗಲೂ ಯವಕ್ಷಾರ ಉತ್ಪತ್ತಿಯಾಗುತ್ತದೆ

ಯವಕ್ಷಾರದ ಹರಳುಗಳು ಬಿಳುಪಾಗಿರುತ್ತವೆ ಹರಳುಗಳು ಸೂಕ್ಷ್ಮವಾಗಿರುವುದರಿಂದ ಬಿಳಿ ಪುಡಿಯಂತೆ ಕಂಡುಬರುತ್ತದೆ. ಇದು ನೀರಿನಲ್ಲಿ ಸುಲಭವಾಗಿ ಕರಗುತ್ತದೆ ಮತ್ತು ಆಮ್ಲೀಯ ರುಚಿಯನ್ನು ಹೊಂದಿದೆ



# ರಸಸಿಂಧೂರ

ರಾಸಾಯನಿಕ ಹೆಸರು ಮರ್ಕ್ಯೂರಿಕ್ ಸಲ್ಫೈಡ್

ರಾಸಾಯನಿಕ ಸೂತ್ರ HgS

ಇತರ ಭಾಷೆಯ ಹೆಸರುಗಳು

ಇಂ. - ಸಿನ್ನಬಾರ್

ಸಂ - ಹಿಂಗುಳ, ಹಿಂಗುಳ ಭಸ್ಮ, ರಸ ಸಿಂಧೂರ

ಹಿಂ - ಸಿಂಜ್ರಾಫ್

ತ - ರಸ ಸಿಂಧೂರ

ತೆ. - ರಸ ಸಿಂಧೂರಮು

**ಪರಿಚಯ**

ರಸ ಸಿಂಧೂರವು ನೈಸರ್ಗಿಕವಾಗಿ ದೊರೆಯುವುದಿಲ್ಲ ಇದನ್ನು ಕೃತಕವಾಗಿ ತಯಾರಿಸಲಾಗುತ್ತದೆ ಇದು ರಾಸಾಯನಿಕವಾಗಿ ಎಲ್ಲಾ ವಿಧದಲ್ಲೂ ಪಾದರಸದ ಅದಿರಾದ 'ಸಿನ್ನಬಾರ್' ಅನ್ನು ಹೋಲುತ್ತದೆ ಆದುದರಿಂದ ಇದನ್ನು ಇಂಗ್ಲೀಷ್ ಭಾಷೆಯಲ್ಲಿ ಸಿನ್ನಬಾರ್ ಎಂದೇ ಕರೆಯುತ್ತಾರೆ

ರಸಸಿಂಧೂರವನ್ನು ತಯಾರಿಸುವ ಹಲವಾರು ವಿಧಾನಗಳನ್ನು ಆಯುರ್ವೇದ ಗ್ರಂಥಗಳಲ್ಲಿ ವಿವರಿಸಲಾಗಿದೆ ಅಂತಃವುಗಳಲ್ಲಿ ಇಲ್ಲಿ ವಿವರಿಸಿರುವ ವಿಧಾನವೂ ಒಂದು ಸಮ ಪ್ರಮಾಣದಲ್ಲಿ ಪಾದರಸ ಮತ್ತು ಗಂಧಕವನ್ನು ತೆಗೆದುಕೊಂಡು ಆಲದಮರದ ಚಿಗುರೆಲೆಯೊಡನೆ 3 ದಿವಸ ಚೆನ್ನಾಗಿ ಮರ್ದಿಸಿ ಬಾಟಲ್ ನಲ್ಲಿಟ್ಟು ಅದನ್ನು ಮರಳು ತುಂಬಿದ ಬಾಣಲಿಯ ಮಧ್ಯದಲ್ಲಿಟ್ಟು 12 ಗಂಟೆಗಳ ಕಾಲ ಕಾಯಿಸಿದಾಗ ಪಾದರಸ ಬೆಂದು, ಕೆಂಬಣ್ಣದ ಆವಿಯ ರೂಪದಲ್ಲಿ ಹೊರಬರುತ್ತದೆ ಆವಿಯನ್ನು ತಂಪುಗೊಳಿಸಿದಾಗ ಕೆಂಪು ಬಣ್ಣದ ರಸಸಿಂಧೂರ ಸಂಗ್ರಹವಾಗುತ್ತದೆ ರಸಸಿಂಧೂರವೂ ಪಾದರಸದ ಇತರ ಭಸ್ಮಗಳಂತೆ ವಿಷವಸ್ತುವಾದುದರಿಂದ ಔಷಧಿಯಾಗಿ ಬಳಸಲು ವೈದ್ಯರ ನೆರವು ಅತ್ಯಗತ್ಯ



# ಶಿಲಾಜಿತ್

ಇತರ ಭಾಷೆಯ ಹೆಸರುಗಳು

ಇಂ - ಆಸ್ಫಾಲ್ಟ್, ಮಿನೆರಲ್ ಪಿಚ್,
ಜ್ಯೂಸ್ ಪಿಚ್

ಸಂ - ಅದ್ರಿಜ, ಗಿರಿಜತು, ಶಿಲಾರಸ,
ಶೈಲಜ

ಹಿಂ - ಶಿಲಾಜಿತ್

ತ - ಪರಂಗ್ಯಂ, ಪಿರ್ಯೆಂಗಂ

ತೆ - ಶಿಲಾಜಿತ್

**ಪರಿಚಯ**

ಶಿಲಾಜಿತ್ ಒಂದು ರೀತಿಯ ಡಾಂಬರಿನಂತಹ ವಸ್ತು ಇದರಲ್ಲಿ ಸಾವಯವ ವಸ್ತುಗಳು, ಸಸ್ಯ ಸಂಭಂದದ ನಾರುಗಳು, ಕಬ್ಬಿಣದ ಕಣಗಳು, ಮಣ್ಣಿನ ಕಣಗಳು ಹಾಗೂ ಇಕ್ತಿಯಾಲ್, ಬೆನ್‌ಜೊಯಿಕ್ ಆಮ್ಲ, ಬೆನ್‌ಜೊಯೇಟ್ ಗಳಂತಹ ರಾಸಾಯನಿಕ ವಸ್ತುಗಳಿರುತ್ತವೆ

ಶಿಲಾಜಿತ್ ಸಾಮಾನ್ಯವಾಗಿ ಹಿಮಾಲಯ ಮತ್ತು ವಿಂಧ್ಯ ಪರ್ವತ ಪ್ರದೇಶಗಳಲ್ಲಿ ದೊರೆಯುತ್ತದೆ ಅಲ್ಲಿ ಕಬ್ಬಿಣಯುಕ್ತ ಬಂಡೆಗಳ ಬಿರುಕಿನಿಂದ ಹೊರಹೊಮ್ಮುತ್ತದೆ

ನೈಸರ್ಗಿಕವಾಗಿ ದೊರೆಯುವ ಶಿಲಾಜಿತ್‌ಅನ್ನು ಬಣ್ಣದ ಆಧಾರದ ಮೇಲೆ ಕೆಂಪು (ಸ್ವರ್ಣ ಶಿಲಾಜಿತ್), ಬಿಳಿ (ರಜತ ಶಿಲಾಜಿತ್), ನೀಲಿ (ತಾಮ್ರ ಶಿಲಾಜಿತ್) ಮತ್ತು ಕಪ್ಪು ಮಿಶ್ರಿತ ಕಂದು (ಕಬ್ಬಿಣ ಶಿಲಾಜಿತ್) ಎಂಬುದಾಗಿ ಗುರುತಿಸುತ್ತಾರೆ ಇವುಗಳಲ್ಲಿ 4ನೇ ಬಗೆಯ ಶಿಲಾಜಿತ್ ಶ್ರೇಷ್ಠವೆಂಬ ಅಭಿಪ್ರಾಯವಿದೆ ಈ ಬಗೆಯ ಶಿಲಾಜಿತ್‌ಗೆ ಗೋಮೂತ್ರದ ವಾಸನೆಯಿರುವುದರಿಂದ ಇದನ್ನು 'ಗೋಮೂತ್ರ ಶಿಲಾಜಿತ್' ಎಂದೂ ಕರೆಯುತ್ತಾರೆ.

ಕೆಲವು ಕಡೆ ಬಿಳಿಬಣ್ಣದ ಶಿಲಾಜಿತ್ ಎಂಬುದಾಗಿ ನೇಪಾಳದಿಂದ ತರಿಸಿದ ಪಟಿಕಯುಕ್ತ ವಸ್ತುವನ್ನು ಮಾರಾಟ ಮಾಡುತ್ತಿರುವುದು ಕಂಡು ಬರುತ್ತದೆ ಆದರೆ, ಇದು ಗ್ರಂಥಗಳಲ್ಲಿ ವರ್ಣಿಸಿರುವ ಬಿಳಿ ಶಿಲಾಜಿತ್‌ಗೆ ಸಮನಾಗಲಾರದೆಂದು ಅನುಭವಿಗಳು ಅಭಿಪ್ರಾಯ ಪಡುತ್ತಾರೆ



# ಶಂಖಪಾಷಾಣ (ಸಂಬಳಕಾರ)

ರಾಸಾಯನಿಕ ಹೆಸರು ಆರ್ಸೆನಿಕ್ ಆಕ್ಸೈಡ್

ರಾಸಾಯನಿಕ ಸೂತ್ರ $As_2O_5$

ಇತರ ಭಾಷೆಯ ಹೆಸರುಗಳು

ಇಂ - ವೈಟ್ ಆರ್ಸೆನಿಕ್, ಫ್ಲವರ್ ಆಫ್ ಆರ್ಸೆನಿಕ್

ಸಂ - ಶಂಖವಿಷ, ದಾರುಮಂಚ, ಸಂಬಳ ಕ್ಷಾರ

ಹಿಂ - ಶಂಖ್ಯ

ತ - ವೆಲ್ಲಿ ಪಾಷಾಣಂ

ತೆ - ತೆಲ್ಲ ಪಾಷಾಣಮು

**ಪರಿಚಯ**

ಶಂಖಪಾಷಣವೂ ಸಹ ಮಣಶಿಲೆ ಮತ್ತು ಅರದಾಳದಂತೆ ಆರ್ಸೆನಿಕ್ ಎಂಬ ದಾತುವಿನಿಂದ ಉತ್ಪತ್ತಿಯಾದ ಲವಣ ಹಾಗೆಯೇ ಅವುಗಳಂತೆ ಇದು ಕೂಡ ಪ್ರಾಣಾಪಾಯವುಂಟುಮಾಡುವಂತಹ ವಿಷ ವಸ್ತು ಔಷಧ ತಯಾರಿಕೆಗೆ ಬಳಸುವಾಗ ಅತ್ಯಲ್ಪ ಪ್ರಮಾಣದಲ್ಲಿ ಬಳಸಬೇಕಾಗುತ್ತದೆ ಹಾಗೂ ವೈದ್ಯರ ಸಲಹೆ ಸೂಚನೆಗಳು ಅತ್ಯಾವಶ್ಯಕವಾಗಿರುತ್ತದೆ

ಶಂಖಪಾಷಾಣವು ನೈಸರ್ಗಿಕವಾಗಿ ಅತ್ಯಲ್ಪ ಪ್ರಮಾಣದಲ್ಲಿ ದೊರೆಯುತ್ತದೆಯಾದರೂ ಹೆಚ್ಚಿನ ಅವಶ್ಯಕತೆಗಳಿಗಾಗಿ ಕೃತಕವಾಗಿ ತಯಾರಿಸಲಾಗುತ್ತಿದೆ ಆರ್ಸೆನಿಕ್ ದಾತುವನ್ನು ಗಾಳಿಯಲ್ಲಿ ಉರಿಸಿದಾಗ ಬರುವ ಆವಿಯನ್ನು ತಂಪುಗೊಳಿಸಿ ಶಂಖಪಾಷಾಣವನ್ನು ಪಡೆಯುತ್ತಾರೆ ಶಂಖಪಾಷಾಣವು ಬಿಳಿಬಣ್ಣದ ಅತ್ಯಂತ ಸೂಕ್ಷ್ಮ ಪಾರದರ್ಶಕ ಹರಳುಗಳ ರೂಪದಲ್ಲಿರುತ್ತದೆ ಇದಕ್ಕೆ ವಾಸನೆಯಾಗಲಿ ಮತ್ತು ರುಚಿಯಾಗಲಿ ಇರುವುದಿಲ್ಲ

# ಸವರ್ಚಲವಣ

ಇತರ ಭಾಷೆಯ ಹೆಸರುಗಳು

ಇಂ - ಸೂಚಲ್ ಸಾಲ್ಟ್
ಸಂ - ಸವರ್ಚಲವಣ
ಹಿಂ - ಸೂಚಲ್
ತ - ಕಲ್ಲುಪ್ಪು

**ಪರಿಚಯ**

ಇದು ನೈಸರ್ಗಿಕವಾಗಿ ದೊರೆಯುವುದಿಲ್ಲ ಇದನ್ನು ಕೃತಕವಾಗಿ ಹಲವಾರು ವಿಧಾನಗಳಿಂದ ತಯಾರಿಸಿಕೊಂಡು ಬಳಸಲಾಗುತ್ತಿದೆ ಅಂತಹ ಹಲವು ವಿಧಾನಗಳಿಂದ ಒಂದು ವಿಧಾನವನ್ನು ಇಲ್ಲಿ ಕೊಡಲಾಗಿದೆ ಗೊತ್ತಾದ ಪ್ರಮಾಣದಷ್ಟು ನೀರನ್ನು ತೆಗೆದುಕೊಂಡು ಅದಕ್ಕೆ ಸೋಡಿಯಂ ಕಾರ್ಬೋನೇಟ್ ಅನ್ನು ಹಾಕಿ ಕರಗಿಸಿ ಪರ್ಯಾಪ್ತ ದ್ರಾವಣ ಮಾಡಿಕೊಂಡು ಇದೇ ದ್ರಾವಣಕ್ಕೆ ಅಡಿಗೆ ಉಪ್ಪನ್ನು ಹಾಕಿ ಮತ್ತಷ್ಟು ಪರ್ಯಾಪ್ತ ದ್ರಾವಣ ಮಾಡಿಕೊಳ್ಳಬೇಕು ಈ ದ್ರಾವಣವನ್ನು ಬೇರೆ ಪಾತ್ರೆಗ ಸುರಿದುಕೊಂಡು ನೀರೆಲ್ಲ ಇಂಗಲು ಬಿಟ್ಟರೆ ತಳದಲ್ಲಿ ಹರಳುರೂಪದ ಸವರ್ಚಲವಣ ಉಳಿಯುತ್ತದೆ



# ಸುಣ್ಣ

ರಾಸಾಯನಿಕ ಹೆಸರು ಕ್ಯಾಲ್ಸಿಯಂ ಹೈಡ್ರಾಕ್ಸೈಡ್

ರಾಸಾಯನಿಕ ಸೂತ್ರ $Ca(OH)_2$

ಇತರ ಭಾಷೆಯ ಹೆಸರುಗಳು

ಇಂ - ಕ್ಯಾಲ್ಸಿಯಂ

ಸಂ - ಸುಧಾ

ಹಿಂ - ಚೂನಾ

ತ. - ಚುನ್ನಂಬು

**ಪರಿಚಯ**

ಸುಣ್ಣದ ಕಲ್ಲು ನೈಸರ್ಗಿಕವಾಗಿ ದೊರೆಯುತ್ತದೆ ಇದನ್ನು ಕ್ಯಾಲ್ಸಿಯಂ ಕಾರ್ಬೊನೇಟ್ ($CaCO_3$) ಎಂಬ ರಾಸಾಯನಿಕ ಹೆಸರಿನಿಂದ ಕರೆಯುತ್ತಾರೆ. ಇದನ್ನು ವಿಶೇಷವಾಗಿ ನಿರ್ಮಿಸಿದ ಕುಲುಮೆಯಲ್ಲಿ ತುಂಬಿ ನೌದೆ ಅಥವಾ ಕಲ್ಲಿದ್ದಲನ್ನು ಬಳಸಿ ಸುಡುತ್ತಾರೆ ಪರಿಣಾಮವಾಗಿ ಅದರಲ್ಲಿರುವ ಇಂಗಾಲದ ಡೈ ಆಕ್ಸೈಡ್ ಬಿಡುಗಡೆಯಾಗಿ ಸುಟ್ಟ ಸುಣ್ಣ ಉತ್ಪತ್ತಿಯಾಗುತ್ತದೆ ಇದನ್ನು ಕ್ಯಾಲ್ಸಿಯಂ ಆಕ್ಸೈಡ್ ($CaO$) ಎಂದು ಕರೆಯುತ್ತಾರೆ ಸುಟ್ಟಸುಣ್ಣಕ್ಕೆ ನೀರು ಹಾಕಿದಾಗ ಕೊತ ಕೊತ ಎಂದು ಕುದಿಯುತ್ತ ಬಿಳಿ ಬಣ್ಣದ ಸುಣ್ಣವಾಗಿ ಪರಿವರ್ತನೆಯಾಗುತ್ತದೆ. ಇದನ್ನು ರಾಸಾಯನಿಕವಾಗಿ ಕ್ಯಾಲ್ಸಿಯಂ ಹೈಡ್ರಾಕ್ಸೈಡ್ ($Ca(OH)_2$) ಂದು ಕರೆಯುತ್ತಾರೆ ಇದನ್ನು ವೀಳ್ಯದೆಲೆಯ ಜೊತೆ ಮೆಲ್ಲಲು ಹಾಗೂ ಔಷಧಿಯಾಗಿ ತಯಾರಿಸಲು ಬಳಸುತ್ತಾರೆ.



# ಸೈಂಧಲವಣ (ಇಂದುಪ್ಪು)

ರಾಸಾಯನಿಕ ಹೆಸರು ಸೋಡಿಯಂ ಕ್ಲೋರೈಡ್ (ಅಶುದ್ಧರೂಪ)

ರಾಸಾಯನಿಕ ಸೂತ್ರ NaCl

ಇತರ ಭಾಷೆಯ ಹೆಸರುಗಳು

ಇಂ - ರಾಕ್ ಸಾಲ್ಟ್

ಸಂ - ಸೈಂಧವ, ಇಂದುಪ್ಪು

ಹಿಂ - ಸೈಂಧಲಾನ್, ಸೇಧಲಾನ್

ತ - ಇಂದುಪ್ಪು

ತೆ. - ಸೈಂಧಲವಣಮು

**ಪರಿಚಯ**

ಈ ಲವಣವು ನೈಸರ್ಗಿಕವಾಗಿ ಉಪ್ಪಿನ ನಿಕ್ಷೇಪವಿರುವ ಕಡೆ ಸಿಂದ್ ನದಿಯ ಪಾತ್ರದಲ್ಲಿ ನೆಲದಲ್ಲಿ ದೊರೆಯುತ್ತದೆ ಇದನ್ನು ಅಡಿಗೆ ಉಪ್ಪಿನ ಅಶುದ್ಧ ರೂಪವೆಂದು ಹಾಗೂ ಹೆಚ್ಚಿನ ಪ್ರಮಾಣದಲ್ಲಿ ಪೊಟಾಸಿಯಂ ಅಂಶವಿರುತ್ತದೆಂದೂ ಕೆಲವರು ಅಭಿಪ್ರಾಯ ಪಡುತ್ತಾರೆ ಸೈಂಧಲವಣದ ನಿಕ್ಷೇಪವಿರುವ ಕಡೆ ಭೂಮಿಯನ್ನು ಕೊರೆದು ಉಪ್ಪನ್ನು ಹಾಗೆಯೇ ಹೊರತೆಗೆಯುತ್ತಾರೆ ಇಲ್ಲವೆ ನೀರನ್ನು ಭೂಪದರದೊಳಗೆ ಹಾಯಿಸಿ ಅಲ್ಲೇ ಉಪ್ಪು ಕರಗುವಂತೆ ಮಾಡಿ ನಳಿಕೆಗಳ ಮೂಲಕ ದ್ರಾವಣವನ್ನು ಹೊರತೆಗೆದು ಹಿಂಗಿಸಿ ಪಡೆಯುತ್ತಾರೆ

ಸೈಂಧಲವಣವು ಹರಳು ರೂಪದಲ್ಲಿರುತ್ತದೆ. ಹೊರಭಾಗ ಕಂದುಬಣ್ಣದಿಂದ ಕೂಡಿದ್ದು ಒಳ ಪದರವು ಬಿಳುಪಾಗಿರುತ್ತದೆ. ಇದಕ್ಕೆ ಉಪ್ಪಿನ ರುಚಿಯಿರುತ್ತದೆ. ಸುಟ್ಟರೆ ಹಳದಿ ಬಣ್ಣದ ಜ್ವಾಲೆಯಿಂದ ಉರಿಯುತ್ತದೆ



# ಅರಗು

ಇತರ ಭಾಷೆಯ ಹೆಸರುಗಳು

ಇಂ - ಲ್ಯಾಕ್

ಸಂ - ಲಾಕ್ಷ

ಹಿಂ - ಲ್ಯಾಕ್

ತ. - ಕೊಂಬ್ರಾಕು

ತೆ - ಲಾಕ

**ಪರಿಚಯ**

ಇದು ಒಂದು ಗಟ್ಟಿಯಾದ ಮೇಣದಂತಹ ವಸ್ತು ಅರಗಿನ ಕೀಟ (ಲ್ಯಾಸಿಫೆರಾಸ್ ಲ್ಯಾಕ) ಇದನ್ನು ಉತ್ಪಾದಿಸುತ್ತದೆ ಅರಗಿನ ಬಣ್ಣ ಕಂದು ಬೆಂಕಿ ತಾಗಿದರೆ ಹತ್ತಿ ಉರಿಯುತ್ತದೆ ಮದ್ಯಸಾರದಲ್ಲಿ ಸುಲಭವಾಗಿ ಕರಗುತ್ತದೆ. ಈ ಗುಣದಿಂದಾಗಿ ಇದನ್ನು ಮರಕ್ಕೆ ಕೊಡುವ ಪಾಲಿಷ್ ತಯಾರಿಕೆಯಲ್ಲಿ ಹೆಚ್ಚಾಗಿ ಬಳಸಲಾಗುತ್ತಿದೆ. ಔಷಧಿಯಾಗಿ ಇದನ್ನು ದಂತರೋಗಗಳಲ್ಲಿ ಬಳಸಲಾಗುತ್ತಿದೆ



# ಕವಡೆ

ಇತರ ಭಾಷೆಯ ಹೆಸರುಗಳು

ಇಂ - ಕೌರಿಷಲ್
ನಂ - ವರತ, ವರತಿಕ
ಹಿಂ - ಕೌಡಿ
ತ - ಚೋಯಿ, ವಲಕಾರ್‍ೈ
ತೆ - ಗವ್ವಲು

**ಪರಿಚಯ**

ಕವಡೆ ಎಂಬುದು ಸೈಪ್ರಿಯ ಮೊನೇಟ ಎಂಬ ಮೃದ್ವಂಗಿಯ ಗಟ್ಟಿಯಾದ ಹೊರಕವಚ. ಈ ಪ್ರಾಣಿಯು ಸತ್ತ ನಂತರ ಕವಡೆಯನ್ನು ಸಂಗ್ರಹಿಸುತ್ತಾರೆ ಪ್ರಕೃತಿಯಲ್ಲಿ ಹಲವಾರು ಗಾತ್ರದ ಹಾಗೂ ಬಣ್ಣದ ಕವಡೆಗಳು ಕಂಡು ಬರುತ್ತವೆ ಈ ಎಲ್ಲಾ ಬಗೆಯ ಕವಡೆಗಳನ್ನೂ ಔಷಧ ತಯಾರಿಕೆಯಲ್ಲಿ ಬೇದವೆಣಿಸದೆ ಬಳಸಲಾಗುತ್ತದೆ ಕವಡೆಯನ್ನು ಸುಟ್ಟು ಭಸ್ಮಮಾಡಿ, ಭಸ್ಮವನ್ನು ಔಷಧ ತಯಾರಿಕೆಯಲ್ಲಿ ಬಳಸುತ್ತಾರೆ ಈ ಭಸ್ಮದಲ್ಲಿ ಹೆಚ್ಚಿನ ಭಾಗ ಸುಣ್ಣದ ಅಂಶವಿರುತ್ತದೆ



# ಕಸ್ತೂರಿ

ಇತರ ಭಾಷೆಯ ಹೆಸರು

ಇಂ - ಮಸ್ಕ್

ಸಂ - ಕಸ್ತೂರಿ

ಹಿಂ - ಕಸ್ತೂರಿ

ತ - ಕಸ್ತೂರಿ

ತೆ - ಕಸ್ತೂರಿ

**ಪರಿಚಯ**

ಇದು ಒಂದು ಬಗೆಯ ಸುಗಂಧ ದ್ರವ್ಯ. ಇದನ್ನು ಕಸ್ತೂರಿ (ಮಾಸ್ಕಸ್ ಮಾಸಿಫೆರಸ್) ಮೃಗದ ಜನನೇಂದ್ರಿಯದ ಸಮೀಪವಿರುವ ಕೋಶಗ್ರಂಥಿಯಿಂದ ಸಂಗ್ರಹಿಸುತ್ತಾರೆ ಆಗ ತಾನೆ ಸಂಗ್ರಹಿಸಿದ ಕಸ್ತೂರಿಯು ಮೃದುವಾಗಿಯೂ ಜಿಡ್ಡಿನಂತೆಯೂ ಇರುತ್ತದೆ ಇದರ ಬಣ್ಣ ಕೆಂಪು ಮಿಶ್ರಿತ ನೀಲಿ, ಇದಕ್ಕೆ ಸ್ವಲ್ಪ ಕಟುವಾದ ವಾಸನೆ ಮತ್ತು ಕಹಿ ರುಚಿಯಿರುತ್ತದೆ ಕಸ್ತೂರಿಯಲ್ಲಿ ಕೀಟೋನ್ಸ್, ಎಣ್ಣೆ, ಮಸ್ಕೇನ್ ಎಂಬ ರಾಸಾಯನಿಕ ವಸ್ತುಗಳಿರುತ್ತವೆ



# ಗೋರೋಜನ

ಇತರ ಭಾಷೆಯ ಹೆಸರುಗಳು

ಇಂ - ಬೈಲ್ ಆಫ್ ಆಕ್ಸ್

ಸಂ - ಗೋರೋಚನ

ಹಿಂ - ಗೋರೋಚನ

ತ - ಗೋರೋಚನ

ತೆ - ಗೋರೋಚನ

**ಪರಿಚಯ**

ಎತ್ತು, ಎಮ್ಮೆ, ಹಸು ಮುಂತಾದ ಪ್ರಾಣಿಗಳ ಪಿತ್ತಕೋಶದ ಕೆಳಭಾಗದಲ್ಲಿನ ಚೀಲದಲ್ಲಿ ಪಿತ್ತರಸವು ಸಂಗ್ರಹಿತವಾಗಿ ಹರಳುರೂಪ ತಳೆಯುತ್ತದೆ ಇದನ್ನು ಪ್ರಾಣಿಯು ಮರಣದ ನಂತರ ಬೇರ್ಪಡಿಸುತ್ತಾರೆ ಇದನ್ನೇ ಗೋರೋಜನವೆಂದು ಕರೆಯುತ್ತಾರೆ ಆಗ ತಾನೆ ಬೇರ್ಪಡಿಸಿದ ಗೋರೋಜನದ ಬಣ್ಣ ಹಳದಿಯಾಗಿದ್ದು ಗಾಳಿಯ ಸಂಪರ್ಕವಾದ ಮೇಲೆ ಕಂದು ಬಣ್ಣಕ್ಕೆ ತಿರುಗುತ್ತದೆ ಗೋರೋಜನವು ಪೆಡುಸಾಗಿರುತ್ತದೆ ಅದರ ಮೇಲೆ ಕೇಂದ್ರ ಬಿಂದುವುಳ್ಳ ಹಲವು ಪದರಗಳಿರುತ್ತವೆ ರುಚಿ ಮಾತ್ರ ಕಹಿ



# ಜೇನುಮೇಣ

ಇತರ ಭಾಷೆಯ ಹೆಸರುಗಳು

ಇಂ - ಬೀ ವ್ಯಾಕ್ಸ್
ಸಂ. - ಮಧೂಕಿಷ್ಟ
ಹಿಂ - ಮೋಮ್
ತ - ಜೇನ್ ಮೆರಗು
ತೆ - ಜೇನ್ ಮೇಣಂ

**ಪರಿಚಯ**

ಜೇನುತುಪ್ಪವನ್ನು ಹೊರ ತೆಗೆದ ಮೇಲೆ ಉಳಿಯುವ ಜೇನುಗೂಡನ್ನು ಕಾಯಿಸಿ, ಕರಗಿಸಿ ಮತ್ತು ಶೋಧಿಸಿ ಜೇನುಮೇಣವನ್ನು ತಯಾರಿಸುತ್ತಾರೆ ಶುದ್ಧ ಜೇನುಮೇಣವು ಮೃದುವಾಗಿಯೂ ಮತ್ತು ಸ್ವಲ್ಪ ಅಂಟು ಅಂಟಾಗಿಯೂ ಇರುತ್ತದೆ ಮೇಣಕ್ಕೆ ಹಳದಿ ಅಥವಾ ಹೊಂಬಣ್ಣವಿರುತ್ತದೆ ಜೇನುಮೇಣದಲ್ಲಿ ಸರಾಸರಿ 80 ಭಾಗ ಮೆಲಿಸ್ಸೈಲ್ ಪಾಮಿಟೇಟ್, 15 ಭಾಗ ಸಿರೋಟಿಕ್ ಆಮ್ಲ ಹಾಗೂ ಅಲ್ಪ ಪ್ರಮಾಣದಲ್ಲಿ ಸೆರಿಯೋಲಿನ್ ಮತ್ತು ಮೆಲಿಸ್ಸೈಲ್ ಸ್ಟೀರೇಟ್ ಇರುತ್ತದೆ



# ಪುನಗು (ಜವಾಜಿ)

ಇತರ ಭಾಷೆಯ ಹೆಸರುಗಳು

ಇಂ - ಸಿವೆಟ್

ಸಂ - ಗಂಧಮಾರ್ಜಾಲ ವೀರ್ಯ

ಹಿಂ - ಜುಬದ್

ತ - ವುನಗು

ತೆ - ವುನಗು

**ಪರಿಚಯ**

ಇದೂ ನಹ ಕಸ್ತೂರಿಯಂತೆ ಒಂದು ಬಗೆಯ ಸುಗಂಧ ದ್ರವ್ಯ ಇದನ್ನು ವುನಗು (ವೈವಿರ ಜಬಿತ) ಬಕ್ಕಿನಿಂತ ಸಂಗ್ರಹಿಸುತ್ತಾರೆ ವುನಗು ಬೆಕ್ಕಿನ ಜನನಾಂಗದ ಬಳಿಯಿರುವ ಗ್ರಂಥಿಗಳಿಂದ ಸ್ರವಿಸುವ ವುನಗು, ಗುದದ್ವಾರದ ಬಳಿಯಿರುವ ನಂಚಿಯೊಂದಕ್ಕೆ ಸುರಿದು ಸಂಗ್ರಹವಾಗುತ್ತದೆ ಅಲ್ಲಿಂದ ವುನಗನ್ನು ಹೊರತೆಗೆಯುತ್ತಾರೆ ಆಗ ತಾನೆ ಸಂಗ್ರಹಿಸಿದ ವುನಗು ದ್ರವರೂವದಲ್ಲಿದ್ದು ಹಳದಿ ಬಣ್ಣಕ್ಕಿರುತ್ತದೆ ಕ್ರಮೇಣ ಗಟ್ಟಿಯಾದಂತೆ ಕವ್ಪು ಬಣ್ಣಕ್ಕೆ ತಿರುಗುತ್ತದೆ

ವುನಗಿನಲ್ಲಿರುವ ಸಿವೆಟೋನ್ ಎಂಬ ರಾಸಾಯನಿಕ ವಸ್ತುವೇ ಅದರ ನುವಾಸನೆಗೆ ಕಾರಣ



# ಶಂಖ

ಇತರ ಭಾಷೆಯ ಹೆಸರುಗಳು

ಇಂ - ಕೌಂಚ್ ಶೆಲ್

ಸಂ. - ಶಂಖ

ಹಿಂ - ಶಂಖ

ತ - ಸಂಕ

ತೆ - ಶಂಖಮು

**ಪರಿಚಯ**

ಟರ್ಬಿನೆಲ್ಲ ಪೈರಂ ಅಥವಾ ಟ. ರಾಪ ಎಂಬ ಮೃದ್ವಂಗಿಗಳು ತಮ್ಮ ದೇಹವನ್ನು ಕಾಪಾಡಿಕೊಳ್ಳಲು ಉತ್ಪಾದಿಸುವ ಹೊರಗಿನ ಗಟ್ಟಿ ಕವಚವೇ ಈ ಶಂಖ ಶಂಖದಲ್ಲಿ ಹಲವಾರು ಬಣ್ಣ ಮತ್ತು ಆಕಾರಗಳಿವೆ ಶಂಖದ ರಚನೆಯಲ್ಲೂ ವೈವಿದ್ಯತೆ ಕಂಡುಬರುತ್ತದೆ ಕೆಲವು ಶಂಖಗಳು ಎಡಭಾಗಕ್ಕೆ ಸುತ್ತಿಕೊಂಡಿದ್ದರೆ ಕೆಲವು ಬಲ ಭಾಗಕ್ಕೆ ತಿರುವಿಕೊಂಡಿರುತ್ತವೆ ಅವುಗಳನ್ನು ಕ್ರಮವಾಗಿ ಎಡಮುರಿ ಮತ್ತು ಬಲಮುರಿ ಶಂಖವೆಂದು ಕರೆಯುತ್ತಾರ ಬಲಮುರಿ ಶಂಖ ಪೂಜೆಗೆ ಶ್ರೇಷ್ಠವೆಂಬ ಅಭಿಪ್ರಾಯವಿದೆ ಔಷಧಿ ತಯಾರಿಕೆಗೆ ಎಲ್ಲಾ ಬಗೆಯ ಶಂಖಗಳನ್ನು ಭಸ್ಮ ಮಾಡಿ ಉಪಯೋಗಿಸುತ್ತಾರೆ ಶಂಖ ಭಸ್ಮದಲ್ಲಿ ಪ್ರಮುಖವಾಗಿ ಸುಣ್ಣದ ಅಂಶವಿರುತ್ತದೆ



# ಹವಳ

ಇತರ ಭಾಷೆಯ ಹೆಸರುಗಳು

ಇಂ - ಕಾರಲ್ಸ್
ಸಂ - ಪ್ರವಾಳ
ಹಿಂ - ಮೂಂಗ
ತ - ಪವಳಂ
ತೆ - ಪಗಡಲು

**ಪರಿಚಯ**

ಕೊರಾಲಿಯಂ ರುಬ್ರಂ ಎಂಬ ಸಮುದ್ರ ಪ್ರಾಣಿಯಿಂದ ಹವಳ ಉತ್ಪತ್ತಿಯಾಗುತ್ತದೆ ಹಲವಾರು ಬಗೆಯ ಹವಳಗಳಿವೆ ಅವುಗಳಲ್ಲಿ ಕೆಂಪು ಹವಳ ಬೆಲೆಯುಳ್ಳದ್ದು ಕೆಂಪು ಹವಳವನ್ನು ಭಸ್ಮಮಾಡಿ ಔಷಧಿ ತಯಾರಿಕೆಯಲ್ಲಿ ಬಳಸುತ್ತಾರೆ ಹವಳದ ಭಸ್ಮದಲ್ಲಿ ಕ್ಯಾಲ್ಸಿಯಂ ಕಾರ್ಬೊನೇಟ್, ಮೆಗ್ನೀಷಿಯಂ ಕಾರ್ಬೊನೇಟ್ ಮತ್ತು ಕಬ್ಬಿಣದ ಲವಣಗಳಿರುತ್ತವೆ



# ಸಾಮಾನ್ಯ ಪಾರಿಭಾಷಿಕಗಳು

**ಅನುಪಾನ** ಔಷಧಿಯನ್ನು ಯಾವ ಬಗೆಯ ದ್ರವ್ಯದೊಡನೆ ಸೇವಿಸಲು ಬಳಸುತ್ತಾರೋ ಅಂತಹ ವಸ್ತುಗಳನ್ನು ಅನುಪಾನಗಳೆಂದು ಕರೆಯುತ್ತಾರೆ (ಉದಾ ನೀರು, ಹಾಲು, ಜೇನುತುಪ್ಪ ಮುಂತಾದವುಗಳು)

**ಅಮೃತೀಕರಣ** ಔಷಧ ದ್ರವ್ಯ (ನಸ್ಯದ ಯಾವುದೇ ಭಾಗವಾಗಿರಬಹುದು) ದಲ್ಲಿನ ದೋಷವನ್ನು ಹೋಗಲಾಡಿಸಿ ಅದರ ಔಷಧಿಯ ಗುಣವನ್ನು ಹೆಚ್ಚಿಸುವ ಕ್ರಿಯೆಗೆ ಅಮೃತೀಕರಣ ಎಂಬ ಹೆಸರಿದೆ

**ತಂಡು ಲೋದಕ** ಅಕ್ಕಿಯ ಪ್ರಮಾಣದ ಎಂಟರಷ್ಟು ನೀರನ್ನು ಹಾಕಿ ಎರಡು ಗಂಟೆ ನೆನೆಸಿ ಬಸಿದುಕೊಂಡ ನೀರು ಇದನ್ನು ಅಕ್ಕಿಕಚ್ಚು ಎಂದೂ ಕರೆಯುತ್ತಾರೆ

**ಧಾಲನ** ಲೋಹವನ್ನು ಕಾಯಿಸಿ ಕರಗಿಸಿ ಮತ್ತೊಂದು ದ್ರವಕ್ಕೆ ಸುರಿಯುವ ಕ್ರಮವನ್ನು ಧಾಲನವೆಂದು ಕರೆಯುತ್ತಾರೆ

**ಧೂಪನ** ಔಷಧಿ ದ್ರವ್ಯವನ್ನು ಕೆಂಡದ ಮೇಲೆ ಹಾಕಿ ಹೊಗೆಯನ್ನುಂಟು ಮಾಡುವ ಕ್ರಮ.

**ಪ್ರತಿನಿಧಿ ದ್ರವ್ಯ** . ಔಷಧ ತಯಾರಿಕೆಗೆ ಬಳಸಬೇಕಾಗಿದ್ದ ಗೊತ್ತಾದ ಔಷಧಿ ಸಸ್ಯವು ದೊರೆಯದೆ ಹೋದಾಗ ಅದಕ್ಕೆ ಬದಲಾಗಿ ಉಪಯೋಗಿಸುವ ಅದೇ ಗುಣವುಳ್ಳ ಮತ್ತೊಂದು ಔಷಧಿ ಸಸ್ಯ ಅಥವಾ ಸಸ್ಯದ ಭಾಗ ಪ್ರತಿನಿಧಿ ದ್ರವ್ಯವಾಗುತ್ತದೆ (ಉದಾ ಅಳಲೆಕಾಯಿ ಉಪಯೋಗಿಸಿ ತಯಾರಿಸಬಹುದಾದ ಔಷಧಕ್ಕೆ, ಅದು ದೊರೆಯದೆ ಹೋದಾಗ ಪ್ರತಿನಿಧಿ ದ್ರವ್ಯವಾಗಿ ಅದೇ ಗುಣವುಳ್ಳ ತಾರೇಕಾಯಿಯನ್ನು ಉಪಯೋಗಿಸುತ್ತಾರೆ ಇಂತಹ ಹಲವಾರು ಪ್ರತಿನಿಧಿ ದ್ರವ್ಯಗಳ ಪಟ್ಟಿ ಆಯುರ್ವೇದ ಗ್ರಂಥಗಳಲ್ಲಿ ದೊರೆಯುತ್ತದೆ )

**ಭಾವನ** ಔಷಧಿ ದ್ರವ್ಯವನ್ನು ಯಾವುದಾದರು ಮತ್ತೊಂದು ಔಷಧಿ ಸಸ್ಯದ (ಗಿಡದ, ಎಲೆಯ, ಬೇರಿನ, ಕಾಯಿಯ, ನಸ್ಯ ಕ್ಷೀರ) ಅಥವಾ ಅದೇ ಗಿಡದ ರಸ / ಕಷಾಯದೊಡನೆ ಚೆನ್ನಾಗಿ ಅರೆದು ನೆನೆಸಿ ಒಣಗಿಸುವ ಕ್ರಿಯೆಗೆ ಭಾವನ ಕೊಡುವುದು ಎಂದು ಕರೆಯುತ್ತಾರೆ ಒಂದು ನಾರಿ ಮಾಡುವ ಈ ಕ್ರಿಯೆಗೆ, ಒಂದು ಸಾರಿ ಭಾವನ ಕೊಡುವುದು ಎಂದು ಹೀಗೆ ಒಂದೇ ಔಷಧ ದ್ರವ್ಯಕ್ಕೆ ಒಂದರಿಂದ ಹಲವಾರು ಭಾವನ ಕೊಡುವ ಕ್ರಮವಿದೆ

**ಮರ್ಧನ** ಔಷಧಿ ದ್ರವ್ಯವನ್ನು ನೀರು ಹಾಕದೆ ಅತಿ ನಯವಾಗಿ ಅರೆಯುವ ಕ್ರಿಯೆಯನ್ನು ಮರ್ಧನವೆಂದು ಕರೆಯುತ್ತಾರೆ

**ಮಾರಣ** ಲೋಹ, ಲವಣ, ಪಾಷಾಣ ಮುಂತಾದವುಗಳನ್ನು ಗೊತ್ತು ಪಡಿಸಿದ ಸಸ್ಯದ ರಸದೊಡನೆ ಅರೆದು ಒಣಗಿಸಿ ಸುಟ್ಟು ಅಥವಾ ಬೇರೆ ವಿಧಾನದಿಂದ ಅದರ ಮೂಲ ಗುಣವನ್ನು ಹೋಗಲಾಡಿಸಿ ಔಷಧಿ ದ್ರವ್ಯವಾಗಿ ಪರಿವರ್ತಿಸುವ ಕ್ರಿಯೆಯನ್ನು ಮಾರಣವೆಂದು ಕರೆಯುತ್ತಾರೆ

**ಲೇಪ** ನಯವಾಗಿ ಅರೆದುಕೊಂಡ ಔಷಧಿ ದ್ರವವನ್ನು ಮೂಲಾಮು ಹಚ್ಚುವಿಕೆ ಅಥವಾ ಸವರುವಿಕೆಯನ್ನು ಲೇಪ ಹಾಕುವುದು ಎಂದು ಕರೆಯುತ್ತಾರೆ



# ಔಷಧಿ ರಚನಾ ಪಾರಿಭಾಷಿಕಗಳು

**ಕಲ್ಕ** · ಹಸಿಯಾದ ಅಥವಾ ಒಣಗಿದ ಸಸ್ಯದ ಭಾಗವನ್ನಾಗಲಿ ಅಥವಾ ಅದರ ಚೂರ್ಣವನ್ನಾಗಲಿ ತಕ್ಕಷ್ಟು ಪ್ರಮಾಣದ ನೀರಿನಲ್ಲಿ ನೆನೆಸಿ ಅರೆದು ಸಿದ್ಧಗೊಳಿಸಿದ ವಸ್ತುವನ್ನು ಕಲ್ಕವೆಂದು ಕರೆಯುತ್ತಾರೆ

**ಕಷಾಯ (ಕ್ವಾತ)** ಔಷಧಿ ದ್ರವ್ಯಗಳನ್ನು (ಸಸ್ಯ, ಎಲೆ, ಕಾಂಡ, ಬೇರು, ಹೂವು, ಕಾಯಿ ಬೀಜ) ಚೆನ್ನಾಗಿ ಕುಟ್ಟಿ ಅದರ 16 ಪಟ್ಟು ನೀರು ಹಾಕಿ ಮಂದಾಗ್ನಿಯಿಂದ ಕಾಯಿಸಿ, ಇಂಗಿಸಿ, $\frac{1}{8}$ ಭಾಗಕ್ಕೆ ಇಳಿಸಿ ಸೋಸಿ ತೆಗೆದ ರಸಕ್ಕೆ ಕಷಾಯವೆಂದು ಹೆಸರು ಇದನ್ನೇ ಅಷ್ಟಮಾಂಶ ಕಷಾಯವೆಂದೂ ಕರೆಯುತ್ತಾರೆ ಹೀಗೆಯೇ $\frac{1}{2}$ ಭಾಗದಷ್ಟು ಕಷಾಯ ಉಳಿಸಿ ಕೊಂಡರೆ ಅದನ್ನು ಅರ್ಧಾಂಶ ಕಷಾಯವೆಂದು $\frac{1}{4}$ ಭಾಗ ಉಳಿಸಿಕೊಂಡರೆ ಚತುರ್ಥಾಂಶ ಕಷಾಯವೆಂದು ಕರೆಯುತ್ತಾರೆ

**ಘೃತ ಅಥವಾ ತೈಲಪಾಕ** ಹಸಿ ಅಥವಾ ಒಣಗಿದ ಔಷಧಿ ಸಸ್ಯವನ್ನು ಅರೆದು ಕಲ್ಕಮಾಡಿಕೊಂಡು ಕಲ್ಕದ ನಾಲ್ಕರಷ್ಟು ತುಪ್ಪ ಅಥವಾ ತೈಲ (ಎಳ್ಳೆಣ್ಣೆ) ಸೇರಿಸಿ ಮಡಿಕೆ ಅಥವಾ ಕಬ್ಬಿಣದ ಪಾತ್ರೆಯಲ್ಲಿ ಹಾಕಿ ಚೆನ್ನಾಗಿ ಮಿಶ್ರಮಾಡಿ ಮಂದಾಗ್ನಿಯಲ್ಲಿ ನೀರು ಪೂರ್ತಿಯಾಗಿ ಆವಿಯಾಗುವವರೆಗೂ ಕಾಯಿಸಿ ಘೃತ ಅಥವಾ ತೈಲವನ್ನು ಉಳಿಸಿಕೊಂಡು ಆರಿದ ನಂತರ ಸೋಸಿ ಸಂಗ್ರಹಿಸಿಕೊಂಡ ಪಾಕವನ್ನು ಅನುಕ್ರಮವಾಗಿ ಘೃತ ಅಥವಾ ತೈಲಪಾಕವೆಂದು ಕರೆಯುತ್ತಾರೆ.

**ಚೂರ್ಣ** : ಔಷಧಿ ಸಸ್ಯ ಅಥವಾ ಸಸ್ಯದ ಯಾವುದೇ ಒಣಗಿದ ಭಾಗವನ್ನು ಚೆನ್ನಾಗಿ ಕುಟ್ಟಿ ಪುಡಿಮಾಡಿ ಜರಡಿ ಅಥವಾ ಬಟ್ಟೆಯಲ್ಲಿ ಸೋಸಿಕೊಂಡ ಅತಿ ನಯವಾದ ಪುಡಿಯನ್ನು ಚೂರ್ಣವೆಂದು ಕರೆಯುತ್ತಾರೆ

**ಫಾಂಟ** ಔಷಧಿ ದ್ರವ್ಯವನ್ನು ಪುಡಿಮಾಡಿಕೊಂಡು ಒಂದು ಪಾತ್ರೆಯಲ್ಲಿ ಹಾಕಿ ಅದರ ನಾಲ್ಕು ಭಾಗ ಕುದಿಯುವ ನೀರು ಸೇರಿಸಿ ಕೆಲವು ನಿಮಿಷ ಸೋಸಿಕೊಂಡ ದ್ರವವನ್ನು ಫಾಂಟ ಎಂದು ಕರೆಯುತ್ತಾರೆ

**ಪುಟಪಾಕಸ್ವರಸ** ಔಷಧಿ ಸಸ್ಯವನ್ನಾಗಲಿ ಅದರ ಇತರ ಭಾಗಗಳನ್ನಾಗಲಿ ಅರೆದು ಬಾಳೆ ಎಲೆಯಲ್ಲಿ ಸುತ್ತಿ ದಾರದಿಂದ ಕಟ್ಟಿ ಎಲೆಯ ಸುತ್ತ ಗೋದಿ ಹಿಟ್ಟನ್ನು ಮೆತ್ತಿ ನಂತರ ಅದರ ಮೇಲೆ ಕೆಮ್ಮಣ್ಣನ್ನು ಗೋಧಿ ಹಿಟ್ಟು ಕಾಣದಂತೆ ಪೂರ್ತಿಯಾಗಿ ಮುಚ್ಚುವಂತೆ ಒಂದೆರಡು ಪದರ ಮೆತ್ತಿ ಬೆರಣಿಯ ಮೇಲಿಟ್ಟು ಕೆಂಪಗಾಗುವರೆಗೆ ಸುಟ್ಟು ಹೊರತೆಗೆದು ಮೇಲಿನ ಪದರಗಳನ್ನು ಬೇರ್ಪಡಿಸಿ ಒಳಗಿನ ಔಷಧಿ ದ್ರವ್ಯವನ್ನು ಮತ್ತೆ ಅರೆದು ರಸ ಮಾಡಿಕೊಳ್ಳುವ ಕ್ರಮಕ್ಕೆ ಪುಟಪಾಕವೆಂದು ಕರೆಯುತ್ತಾರೆ

**ವಟಿಕಾ (ಗುಟಿಕಾ, ಮಾತ್ರೆ)** ಸಕ್ಕರೆ ಅಥವಾ ಬೆಲ್ಲದ ಪಾಕದಲ್ಲಿ ಔಷಧಿ ದ್ರವ್ಯಗಳ ಚೂರ್ಣವನ್ನು ಸೇರಿಸಿ ಅರೆದು ಮಾಡಿದ ಗುಳಿಗೆಗಳನ್ನು ವಾಟಿಕಾ ಎಂದು ಕರೆಯುತ್ತಾರೆ.

**ಸ್ವರಸ** ಆಗತಾನೆ ಕಿತ್ತುತಂದ ಹಸಿಯಾದ ಔಷಧಿ ಸಸ್ಯ ಅಥವಾ ಅದರ ಭಾಗವನ್ನು ಕೂಡಲೆ ಕುಟ್ಟಿ ಅರೆದು ಬಟ್ಟೆಯಲ್ಲಿ ಸೋಸಿ ಸಂಗ್ರಹಿಸಿದ ರಸ (ಹಸಿಯಾದ ಔಷಧಿ ಸಸ್ಯ ದೊರೆಯದ ಸಮಯದಲ್ಲಿ ಒಣಗಿದ ಸಸ್ಯ ಅಥವಾ ಅದರ ಭಾಗದ ಎರಡರಷ್ಟು ನೀರು ಹಾಕಿ ನೆನೆಸಿ ಮಾರು ದಿವಸ ಕುಟ್ಟಿ ಬಟ್ಟೆಯಲ್ಲಿ ಸಂಗ್ರಹಿಸಿದ ರಸವನ್ನೂ ಸ್ವರಸವೆಂದು ಕರೆಯುತ್ತಾರೆ )

**ಹಿಮ ಕಷಾಯ** ಸುಮಾರು 24 ಗ್ರಾಂ ಔಷಧಿ ದ್ರವ್ಯ (ಚೂರ್ಣ ಮುಂತಾದವುಗಳು) 114 ಮಿ ಲೀ ನೀರಿನಲ್ಲಿ ನೆನೆಹಾಕಿ ಇಡೀ ರಾತ್ರಿ ಮನೆಯ ಮೇಲಿಟ್ಟು ಮರು ದಿವಸ ಬಟ್ಟೆಯಲ್ಲಿ ಸೋಸಿಕೊಂಡ ದ್ರವವನ್ನು ಹಿಮಕಷಾಯವೆಂದು ಕರೆಯುತ್ತಾರೆ



# ಪುಟ ಪಾರಿಭಾಷಿಕಗಳು

**ಪುಟ** ಇದು ಒಂದು ಬಗೆಯ ಅಲ್ಪಾವಧಿಯಲ್ಲಿ ಔಷಧಿ ದ್ರವ್ಯವನ್ನು ಸುಡುವ ವಿಧಾನ ಈ ವಿಧಾನದಲ್ಲಿ ಔಷಧಿ ದ್ರವ್ಯವನ್ನು ಒಂದು ಗೊತ್ತಾದ ಪಾತ್ರೆಯಲ್ಲಿಟ್ಟು ಇಲ್ಲವೆ ಎಲೆ ಮುಂತಾದ ವಸ್ತುಗಳಿಂದ ಕವಚ ಮಾಡಿ ನಿರ್ದಿಷ್ಟ ಪ್ರಮಾಣದ ಬೆರಣಿಯ ಮೇಲಿಟ್ಟು ಸುಟ್ಟು ಕರಕು ಮಾಡುತ್ತಾರೆ

**ಗಜಪುಟ :** ಇದು ಒಂದು ಔಷಧಿ ದ್ರವ್ಯಗಳನ್ನು ಸುಡುವ ಅಥವಾ ಭಸ್ಮಮಾಡುವ ವಿಧಾನ. ಈ ವಿಧಾನದಲ್ಲಿ, 3 ಅಡಿ (90 ಸೆಂ ಮೀ ) ಉದ್ದ, ಅಗಲ ಮತ್ತು 3 ಅಡಿ (90 ಸೆಂ ಮೀ ) ಆಳದ ಗುಂಡಿ ತೋಡಿ ಅದರಲ್ಲಿ 1/2 ಭಾಗದಷ್ಟು ಒಣಗಿದ ಬೆರಣಿ ತುಂಬಿ, ಬೆರಣಿಯ ಮೇಲೆ ಪುಟ ಕೊಡಬೇಕಾಗದ ಔಷಧಿ ದ್ರವ್ಯಗಳನ್ನು ತುಂಬಿದ ಹಾಗೂ ಬಾಯಿ ಸೀಲು ಮಾಡಿದ ಮಣ್ಣಿನ ಮಡಿಕೆಯನ್ನು ಇಟ್ಟು ಗುಂಡಿ ಪೂರ್ತಿ ತುಂಬುವಂತೆ ಮತ್ತಷ್ಟು ಬೆರಣಿ ತುಂಬಿ ಬೆಂಕಿ ಹತ್ತಿಸಿ ಬೆರಣಿ ಪೂರ್ತಿ ಉರಿದುಹೋಗುವವರೆಗೆ ಬಿಡುವ ಈ ಕ್ರಿಯೆಯನ್ನು ಗಜಪುಟವೆಂದು ಕರೆಯುತ್ತಾರೆ ನಂತರ ಮಡಿಕೆಯನ್ನು ಹೊರತೆಗೆದು ಅದರೊಳಗಿನ ದ್ರವ್ಯವನ್ನು ಉಪಯೋಗಿಸುತ್ತಾರೆ

**ವರಾಹ ಪುಟ** · ಇದೂ ಸಹ ಗಜಪುಟದಂತೆ ಔಷಧಿ ದ್ರವ್ಯವನ್ನು ಸುಡುವ ಒಂದು ಕ್ರಮ. ಇದರ ಎಲ್ಲಾ ವಿಧಿವಿಧಾನವು ಗಜಪುಟವನ್ನು ಹೋಲುತ್ತದೆಯಾದರೂ, ಇದರಲ್ಲಿ ಪುಟಕೊಡಲು ತೋಡುವ ಗುಂಡಿಯ ಉದ್ದ, ಅಗಲ ಮಾತ್ರ ಕೇವಲ 2 ಅಡಿ (60 ಸೆಂ ಮೀ ) ಮತ್ತು ಆಳ 2 ಅಡಿ (60 ಸೆಂ ಮೀ.) ಇರುತ್ತದೆ

**ಕಪೋತ ಪುಟ** ಕೇವಲ 8 ಬೆರಣಿಯನ್ನು ಉರಿಸಿ ಪುಟ ಕೊಡುವ ವಿಧಾನಕ್ಕೆ ಕಪೋತ ಪುಟ ಎಂದು ಕರೆಯುತ್ತಾರೆ



